

# ಹರಿದಾಸ ತರಂಗಿಣಿ

## ಭಾಗ-೩

ಶ್ರೀ ಕನಕದಾಸರ ಮತ್ತು ಶ್ರೀ ಜಗನ್ನಾಥದಾಸರ
ಕೃತಿಗಳು

ಬೆಲೆ : ರೂ. ೭-೦೦

ಶ್ರೀ

# ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ

## ಭಾಗ ೩

## ಶ್ರೀ ಕನಕದಾಸರ
ಮತ್ತು
## ಶ್ರೀ ಜಗನ್ನಾಥದಾಸರ ಕೃತಿಗಳು

ಸಂಪಾದಕರು:
**ಸುಬೋಧ ಯಂ. ರಾಮರಾವ್**

ಪ್ರಕಾಶಕರು
**ಸುಬೋಧ ಪ್ರಕಟನಾಲಯ**
ಚಾಮರಾಜಪೇಟೆ, ಬೆಂಗಳೂರು–೫೬೦ ೦೧೮

# ಮುನ್ನುಡಿ

ಶ್ರೀ ವಿಷ್ಣುಭಕ್ತಿ ಸಾಮ್ರಾಜ್ಯವನ್ನು ಲೋಕದಲ್ಲಿ ಸ್ಥಾಪಿಸುವ ಮಹತ್ಕಾರ್ಯಕ್ಕಾಗಿ ಶ್ರಮಿಸಿದ ಶ್ರೀಪಾದರಾಯರು, ಶ್ರೀ ವ್ಯಾಸರಾಜರು, ಶ್ರೀ ಪುರಂದರದಾಸರು ಕನಕದಾಸರು, ವಿಜಯರಾಯರು, ಗೋಪಾಲದಾಸರು, ಜಗನ್ನಾಥದಾಸರು ಮುಂತಾದ ಕರ್ಣಾಟಕ ಹರಿಭಕ್ತ ಶಿರೋಮಣಿಗಳು ರಚಿಸಿದ ಕೀರ್ತನೆಗಳು, ಸುಳಾದಿಗಳು, ಉಗಾಭೋಗಗಳು ಮುಂತಾದ ಭಗವತ್ ಸ್ತೋತ್ರ ರೂಪವಾದ ಅಮೌಲ್ಯ ಕವಿತಾನಿಧಿಯ ಒಂದು ಶುದ್ಧ ಸಂಗ್ರಹಣವು ಕನ್ನಡದಲ್ಲಿ ಇಲ್ಲದಿದ್ದ ಕೊರತೆಯನ್ನು ಸಾಧ್ಯವಾದ ಮಟ್ಟಿಗೆ ನಿವಾರಿಸಬೇಕೆಂಬ ಉದ್ದೇಶದಿಂದ 'ಶ್ರೀ ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ' ಎಂಬ ಹೆಸರಿನಿಂದ ಈ ಪ್ರಕಟನಾ ಕಾರ್ಯವು ಪ್ರಾರಂಭಿಸಲ್ಪಟ್ಟಿತು

ಧಾರ್ಮಿಕ ದೃಷ್ಟಿಯಿಂದ ಮಾತ್ರವಲ್ಲ-ದಾಸರ ಕೀರ್ತನೆಗಳ ಸಂಗ್ರಹಣ ಕಾರ್ಯವು, ಸಾಹಿತ್ಯ ಸಾಮಾಜಿಕ ದೃಷ್ಟಿಗಳಿಂದಲೂ ಅತ್ಯಂತ ಮಹತ್ವದ್ದಾಗಿದೆ ದಾಸವರ್ಯರು, ಭಗವದ್ಭಕ್ತಿ ವಿಚಾರವನ್ನೇ ಹಚ್ಚು ರೀತಿಯಿಂದ ಪ್ರತಿಪಾದಿಸಿದ್ದರೂ, ನೈತಿಕ ಮತ್ತು ಸಾಮಾಜಿಕೋನ್ನತಿಗಳಿಗೂ ಅವರ ಪ್ರಯತ್ನವು ಎಷ್ಟುಮಟ್ಟಿಗೆ ಸಹಕಾರಿಯಾಯಿತೆಂಬುದು ವಿಚಾರಕರಿಗೆ ಗೋಚರವಾಗುವುದು ಇಂತಹ ಅಮೌಲ್ಯ ಸಾಹಿತ್ಯ ನಿಧಿಯನ್ನು ಗೆದ್ದಲಪಾಲಾಗದಂತೆ ಉದ್ಧರಿಸಬೇಕಾದುದು ಕನ್ನಡಿಗರಾದ ನಮ್ಮ ಆದ್ಯ ಕರ್ತವ್ಯವೆಂಬುದನ್ನು ಪ್ರತಿಯೊಬ್ಬರೂ ಗ್ರಹಿಸಬೇಕಾಗಿದೆ

ಈ ಗ್ರಂಥಗಳು, ಇತರ ಕಥೆಗಳು-ನಾವೆಲುಗಳು ಮುಂತಾದುವುಗಳಂತೆ ಜನಾಂಗದ ಸಕಲ ವರ್ಗಗಳಿಂದಲೂ ಅಪೇಕ್ಷಿತಗಳಾಗದೆ, ಕೇವಲ ಅವುಗಳಿಗಾಗಿ ಇಚ್ಛಿಸುವ ಕೆಲಮಂದಿ, ಭಕ್ತಭಾಗವತರಿಂದ ಮಾತ್ರವೇ ಕೊಳ್ಳಲ್ಪಡತಕ್ಕುವುಗಳಾದುದರಿಂದ ಕೀರ್ತನ ತರಂಗಿಣಿಯ ಪುಸ್ತಕಗಳು ಬಹುಮಟ್ಟಿಗೆ ನಿಂತು ಹೋಗಿ, ಸದ್ಯಃ ಯೋಗ್ಯ ರೀತಿಯಿಂದ ಹಣ ಒದಗದೆ ಪ್ರಕಟನಾ ಕಾರ್ಯವು ಬಹು ಶ್ರಮವೆನಿಸಹತ್ತಿದೆ ಆದರೂ, ಸದುದ್ದೇಶದಿಂದ ಪ್ರಾರಂಭವಾದ ದಾಸ ಸೇವಾರೂಪ ಈ ಕಾರ್ಯವು ದ್ರವ್ಯಾಭಾವದ ಅಲ್ಪಕಾರಣಕ್ಕಾಗಿ ಮಧ್ಯದಲ್ಲಿ ನಿಲ್ಲುವಂತಾಗಬಾರದೆಂದು, ಕರ್ಣಾಟಕ ಮಹಾಜನರ ಆಶ್ರಯ-ಸಹಾನು

ಭೂತಿಗಳ ಮೇಲೆ ಭರವಸೆಯನ್ನಿಟ್ಟು ಈ ಪ್ರಕಟನ ಕಾರ್ಯವನ್ನು ಮುಂದು ವರಿಸಲಾಗಿದೆ

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಫಲಪ್ರದಾಯಕವಾದ ಸದ್ವಿದ್ಯಾದಾನವೂ ಅನ್ನವಸ್ತ್ರಾದಿ ಇತರ ದಾನ ಗಳಂತೆಯೂ, ಕೆರೆ, ಭಾವಿ, ಛತ್ರ, ಸಾಲುಮರ, ಪಾಠಶಾಲೆ ಮುಂತಾದುವುಗಳ ಸ್ಥಾಪನೆಯಂತೆಯೂ, ಮಹತ್ಪುಣ್ಯ ಸಾಧಕವಾದುದೆಂಬುದು ಪ್ರಾಜ್ಞರಾದ ನಮ್ಮ ವಾಚಕ ಮಹಾಶಯರಿಗೆ ಗೋಚರವಿಲ್ಲದ ಸಂಗತಿಯಲ್ಲ! ಇಂತಹ ಸದ್ಗ್ರಂಥಗಳ ರಚನೆಯೂ ಪ್ರಕಟಣೆಯೂ ಸಪ್ತ ಸಂತಾನಗಳಲ್ಲೊಂದೆಂಬ ಪ್ರಶಸ್ತಿಯನ್ನು ಪಡೆದಿದೆ ಇಂತಹ ಸತ್ಕಾರ್ಯಕ್ಕೆ ದ್ರವ್ಯ ಮೂಲಕ ಮಾಡುವ ಪ್ರೋತ್ಸಾಹವಾಗಲಿ, ವಾಙ್ಮೂಲಕ ಆಪ್ತರಲ್ಲೂ ಮಿತ್ರರಲ್ಲೂ ಬಂಧುಗಳಲ್ಲೂ ಪ್ರಚುರಪಡಿಸಿ ತನ್ಮೂಲಕ ಮಾಡುವ ಸಹಾಯವಾಗಲೀ, ಮಹತ್ಪುಣ್ಯ ಸಾಧಕ ವಾಗುವುದೆಂಬುದರಲ್ಲಿ ಸಂಶಯವಿಲ್ಲ ಆದುದರಿಂದ ಮಹನೀಯರು, ಸ್ವಹಸ್ತ ಪರಹಸ್ತಗಳಿಂದ ಆದಷ್ಟು ಸಹಾಯವನ್ನೊದಗಿಸಿಕೊಟ್ಟು ಈ ಸತ್ಕಾರ್ಯವು ನಿರ್ವಿಘ್ನವಾಗಿ ನಡೆದುಬರುವಂತೆ ಅನುಕೂಲಗೊಳಿಸಬೇಕೆಂದು ಪ್ರಾರ್ಥಿಸುತ್ತೇವೆ

ಇತಿ ಸುಜನ ವಿಧೇಯ,

ಬೆಂಗಳೂರು ನಗರ — **ಯಂ ರಾಮರಾವ್,**

ತಾ॥ ೨೫-೬-೧೯೨೮ — ಸಂಪಾದಕ.

## ತೃತೀಯ ಮುದ್ರಣ

ದ್ವಿತೀಯ ಮುದ್ರಣದ ಪ್ರತಿಗಳು ವಿಕ್ರಯವಾಗಿ, ಅವು ಮುಗಿದ ಬಹು ವರ್ಷಗಳ ಮೇಲೆ ಇಂದು ಈ ಮುದ್ರಣವನ್ನು ಕೈಗೊಳ್ಳಲಾಗಿದೆ ಇದರಲ್ಲಿ ಕೆಲವು ಹೆಚ್ಚು-ಕೃತಿಗಳನ್ನು ಪ್ರಕಟಿಸಲಾಗಿದೆ ಸಾಹಿತ್ಯ ಪ್ರೇಮಿಗಳು ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ

ಬೆಂಗಳೂರು — **—ಪ್ರಕಾಶಕರು.**

ತಾ॥ ೧೧-೧೦-೧೯೭೬

# ಶ್ರೀ ಕನಕದಾಸರ ಕೃತಿಗಳು

## ಅಕ್ಷರಾನುಕ್ರಮಣಿಕೆ


| | ಪುಟ |
|---|---|
| ಅಂಬುಜದಳಾಕ್ಷಣೆ ಮಂಗಳ | ೮೦ |
| ಅರಸಿನಂತೆ ಭಂಟನೋ ಹನುಮ | ೩೯ |
| ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ | ೧೪ |
| ಆರು ಬಲ್ಲರು ಹರಿಹರಾದಿಗಳ ಮಹಿಮೆ | ೪೪ |
| ಆರಿಗಾರಿಲ್ಲವಾಪತ್ಕಾಲದೊಳಗೆ | ೬೬ |
| ಆರಿಗಾದರು ಪೂರ್ವ ಕಲ್ಪನೆ ತಪ್ಪದು | ೧೦ |
| ಆವಕುಲವಿದ್ದರೇನು ದೈವಬಲವಿಲ್ಲ | ೭೨ |
| ಆವಪರಿಯಲಿ ನಿಮ್ಮನೊಲಿಸಿ | ೭೭ |
| ಇಷ್ಟು ದಿನ ಈ ವೈಕುಂಠ | ೪ |
| ಎಲ್ಲಾರು ಮಾಡುವುದು ಹೊಟ್ಟೆಗಾಗಿ | ೨೫ |
| ಎಲ್ಲಿ ನೋಡಿದರಲ್ಲಿ ರಾಮ | ೭೬ |
| ಎಲ್ಲಿಂದ ಬಂದೆ ಮುಂದೆತ್ತ ಪಯಣ | ೪೫ |
| ಎಳ್ಳು ಕಾಳಿನಷ್ಟು ಭಕ್ತಿ | ೪೯ |
| ಒಡನೆ ಹೋಯಿತು ಮನ ಹೃದ | ೨೨ |
| ಕಣಿಯ ಹೇಳಬಂದೆ ನಾರಾಯಣ | ೪೮ |
| ಕಲಿಯುಗದ ಮಹಿಮೆಯನು | ೧೨ |
| ಕಲಿಹೆಚ್ಚಿ ಬಂದಿತಲ್ಲಾ ರಂಗಯ್ಯ | ೪೭ |
| ಕಷ್ಟಪಟ್ಟರು ಇಲ್ಲ ಕಳವಳಿಸಿದರಿಲ್ಲ | ೧೯ |
| ಕಾವನಯ್ಯನ ಕಳಹು ರಮಣಿ | ೬೮ |
| ಕುಲಕುಲವೆಂದು ಹೊಡೆದಾಡದಿರಿ | ೩೫ |
| ಕುಲಕುಲವೆನ್ನುತಿಹರು | ೪೦ |
| ಕೇಶವನೊಲುಮೆಯು ಆಗುವತನಕ | ೪೫ |
| ಗೋವಿಂದ ಸಲಹೆನ್ನನು | ೨ |
| ಜಗದ ಅಂತರ್ಯಾಮಿಯೆಂದೆಂಬ | ೩೭ |
| ಜಪವ ಮಾಡಿದರೇನು ತಪವ ಮಾಡಿ | ೧೩ |
| ಡಿಂಬದೊಳಗಿರುವ ಪ್ರಾಣ ಕಂಭ | ೩೪ |
| ತನ್ನ ಪ್ರಾಪ್ತಿಯ ಫಲವ ತಾನರಿಯದೆ | ೬೯ |
| ತನು ನಿನ್ನದು ಜೀವನ ನಿನ್ನದು | ೫೫ |
| ತಲ್ಲಣಿಸದಿರು ಕಂಡ್ಯ ತಾಳು ಮನವೆ | ೫ |
| ತಾನ್ಯಾರೋ ತನ್ನ ದೇಹವ್ಯಾರೋ | ೬೩ |
| ತಾಳಲಲ್ಲಲ್ಲಲ್ಲ್ಯೋ ಮೈ | ೫೦ |
| ತೊರೆದು ಜೀವಿಸಬಹುದೆ ಹರಿ ನಿಮ್ಮ | ೭೩ |
| ತೋರೆ ಬೇಗನೆ ಸಖಿ ತೋರ ಮುತ್ತಿನ | ೬೫ |
| ದಾನಧರ್ಮವಮಾಡಿ ಸುಖಿಯಾಗು | ೫೫ |
| ದಾಸದಾಸರ ಮನೆಯ ದಾಸಿಯರ | ೩೨ |
| ದಾಸನಾಗೋ ಭವಪಾಶನೀಗೋ | ೩೨ |
| ದೇವಿ ನಮ್ಮ ದ್ಯಾವರು ಬಂದರು | ೪೧ |
| ದೇಶಾಧಿಪತಿ ನರಹರಿಯೆ ನಿನ್ನಯ | ೪೩ |
| ಧರೆಯ ಭೋಗವನ್ನು ನಂಬಿ | ೭೮ |
| ಧರ್ಮೇಂದ್ರಿಯಕ್ಕೆ ಪಟ್ಟಡಿಯ | ೬೦ |
| ನನ್ನಿಂದ ನಾನೇ ಜನಿಸಬಂದೆನೆ ಕೃಷ್ಣ | ೪೧ |
| ನಳಚರಿತ್ರೆ | ೧೦೯ |
| ನಮ್ಮಮ್ಮ ಶಾರದೆ ಉಮಾ ಮಹೇಶ್ವರಿ | ೧ |
| ನಾನು ನೀನು ಎನ್ನದಿರು ಹೀನಮಾನವ | ೧೫ |
| ನಾನೇನು ಬಲ್ಲೆ ನಿನ್ನ ನಾಮದ | ೬೯ |
| ನಾರಾಯಣ ನಿನ್ನ ನಾಮವೊಂದಿರುತಿರೆ | ೧೭ |
| ನಿನ್ನ ನಾನೇನೆಂದೆನೋ ರಂಗಯ್ಯ | ೫ |
| ನೀನಾರ ಬಾಂಧವನೊ ನಿಖಿಳಯಾದವ | ೫೯ |
| ನೀನುಪೇಕ್ಷೆಯಮಾಡೆ ಬೇರೆ ಗತಿ | ೩೪ |
| ನೀ ಮಾಯೆಯೊಳಗೋ ನಿನ್ನೊಳು | ೯ |
| ನೆಚ್ಚದಿರು ಸಂಸಾರ ನೆಲೆಯಿಲ್ಲವೀ | ೧೦ |
| ನೆರೆದು ಗೋಪಿಯರೆಲ್ಲರು ಕೃಷ್ಣಯ್ಯನ | ೬೫ |
| ಪರಮ ಪುರುಷ ಹರಿಗೋವಿಂದ | ೭ |
| ಪ್ರಾಚೀನ ಕರ್ಮವಿದು ಬಿಡಲರಿಯದು | ೭೫ |

| | ಪುಟ | | ಪುಟ |
|---|---|---|---|
| ಪೂರ್ವ ಜನ್ಮದಲಿ ನಾ ಮಾಡಿದ ಕರ್ಮ | ೨೨ | ರಾಮಧಾನ್ಯ ಚರಿತ್ರೆ | ೨೦೨ |
| ಎಲ್ಲವರಿದಿಬದು ಎಲ್ಲಾರು ಅರಿಯರು | ೨೦ | ರಂಗಬಾರೋ ರಂಗಯ್ಯ ಬಾರೊ | ೬೩ |
| ಬಾಗಿಲನು ತೆರೆದು ಸೇವೆಯನು | ೧೦ | ಲಾಲಿಪಾವನ ಚರಣ ಲಾಲಿ ಅಘಹರಣ | ೨೮ |
| ಬಂದಿದೆ ದೂರು ಪಾಂಡವರಿಗ | ೧೫ | ವರಕವಿಗಳ ಮುಂದೆ ನರಕವಿಗಳ ವಿದ್ಯೆ | ೩೮ |
| ಬಂದೆವಯ್ಯ ಗೋವಿಂದಶೆಟ್ಟಿ | ೧೯ | ವ್ಯರ್ಥವಾಯಿತಲ್ಲಾ ಜನ್ಮವು | ೪೪ |
| ಬೊಂಬೆಯಾಟವನಾಡಿಸಿದೆ ನೀನು | ೨೭ | ಶೇಷಶಯನ ನಿಮ್ಮ ಪರಮ ಭಾಗವತ | ೫೬ |
| ಭಜಿಸಿ ಬದುಕೆಲೊ ಮಾನವ | ೧೭ | ಸಜ್ಜನರ ಸಂಗದೊಳಗಿರಿಸೆನ್ನ | ೬ |
| ಭಂಟನಾಗಿ ಬಾಗಿಲ ಕಾಯ್ವೆ ಹರಿಯೆ | ೨೩ | ಸತ್ಯವಂತರ ಸಂಗವಿರಲು | ೯೬ |
| ಮಗನಿಂದ ಗತಿಯುಂಟೆ ಜಗದೊಳು | ೨೧ | ಸಹಜವಿದು ಈ ನುಡಿಯು ಸಟೆಯಲ್ಲ | ೭೫ |
| ಮಾಡು ದಾನಧರ್ಮ ಪರಉಪಕಾರವ | ೬೨ | ಸಾಕುಸಾಕು ಮನುಜ ಸೇವೆಯು | ೩೭ |
| ಮಾವನಾ ಮನೆಯೊಳಗೆ ಇರಬಹುದೆ | ೭೪ | ಸಾಧುಸಜ್ಜನ ಸತ್ಯಗುಣಕೆದುರುಂಟೆ | ೭೦ |
| ಮಂಗಳಂ ಮಂಗಳಂ | ೬೪ | ಸಾಲದೆ ನಿನ್ನದೊಂದು ದಿವ್ಯನಾಮ | ೭೭ |
| ಮುಟ್ಟಬೇಡ ಮುಟ್ಟಬೇಡ ದಾಸರನು | ೫೪ | ಸಿರಿಯು ಮದವೆ ಮುಕುಂದ | ೭೬ |
| ಮುಂದೆ ದಯವಿರಲಿ ಶ್ರೀಹರಿಯೆ | ೩೧ | ಸುವ್ವಿ ಕೇಶವಾದಿ ಸುವ್ವಿ | ೨೬ |
| ಯಮದೂತ ನನ್ನೇನು ಮಾಡುವನು | ೪೨ | ಸಂಸಾರವೆಂಬ ಸಾಗರವನುತ್ತರಿಸುವೊಡೆ | ೬೩ |
| ಯಾಕೆ ನೀನಿಲ್ಲಿ ಪವಳಿಸಿದೆ ಹರಿಯೆ | ೧೮ | ಹರಿಭಕ್ತಿಸಾರ | ೮೧ |
| ಯಾದವರಾಯ ಬೃಂದಾವನದೊಳು | ೬೮ | ಹ್ಯಾಂಗೆ ನೀ ದಾಸನಾದೀ ಪ್ರಾಣಿ | ೭೧ |
| ರಮಣಿ ಕೇಳೆಲೆ ಮೋಹನ ಶುಭ | ೭೭ | ಹೂವ ತರುವರಮನೆಗೆ ಹುಲ್ಲು ತರುವೆ | ೩೦ |


---

ಶ್ರೀರಾಮ ಸಹಾಯಂ

# ಶ್ರೀ ಕನಕದಾಸರ ಸಂಕ್ಷೇಪ ಚರಿತ್ರೆ

---

ಶ್ರೀ ಕನಕದಾಸರು ಕರ್ಣಾಟಕ ಮಾತೆಯ ಪವಿತ್ರ ಗರ್ಭಸಂಭೂತರಾದ ಭಕ್ತಶ್ರೇಷ್ಠರಲ್ಲೊಬ್ಬರು ಇವರ ಹಿರಿಯರು ಧಾರವಾಡ ಜಿಲ್ಲಾ ಬಂಕಾಪುರ ತಾಲ್ಲೂಕಿನ ಬಾಡ ಎಂಬ ಗ್ರಾಮದ ವಾಸಸ್ಥರು ಆ ಗ್ರಾಮದಲ್ಲಿದ್ದ ಅಂಡೆ ಕುರುಬರ ಕುಲದ ಯಜಮಾನನಾದ ಬೀರೇಗೌಡ–ಬಚ್ಚಮ್ಮ ಎಂಬ ದಂಪತಿಗಳಿಗೆ ವಯಸ್ಸು ಗಳಿತವಾದ ಮೇಲೆ, ತಿರುಪತಿಯ ಶ್ರೀ ವೆಂಕಟರಮಣನ ವರಪ್ರಸಾದದಿಂದ ಒಬ್ಬ ಪುತ್ರನು ಉದಯಿಸಿದನು ಬೀರೇಗೌಡನು ತನ್ನ ಮಗನಿಗೆ ತಿಮ್ಮನೆಂದು ಹೆಸರಿಟ್ಟು ಪ್ರೇಮದಿಂದ ಕಾಪಾಡುತ್ತಿದ್ದ - ಮುಂದೆ ಬಾಲಕನಿಗೆ ಆರನೆಯ ವರ್ಷ ಪ್ರಾಯವು ನಡೆಯುತ್ತಿದ್ದಾಗ ಮೃತ್ಯುವಶನಾದನು ಮುಂದೆ ಕೆಲಕಾಲದೊಳಗಾಗಿ ಬಚ್ಚಮ್ಮನೂ ಮೃತಳಾದಳು

ತಾಯಿತಂದೆಗಳಿಬ್ಬರೂ ಮೃತರಾಗಿ ಅನಾಥನಾಗಿ ನಿಂತ ಕೇವಲ ಹತ್ತು ಹನ್ನೆರಡು ವರ್ಷ ವಯಸ್ಸಿನ ತಿಮ್ಮನಮೇಲೆ ಗ್ರಾಮಸ್ಥರು ಅತಿಶಯ ಪ್ರೇಮ ಮಾಡುತ್ತ ಆತನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು ಹೀಗಿರುತ್ತಿರಲು, ತಿಮ್ಮನಿಗೆ ಅಕಸ್ಮಾತ್ತಾಗಿ ನಿಧಿಯಿಂದ ತುಂಬಿದ ಕೊಪ್ಪರಿಗೆಗಳು ಕಾಣಿಸತೊಡಗಿದುವು ತಿಮ್ಮನು ಅವುಗಳನ್ನು ಮುಟ್ಟಿ ತೆಗೆದು ಮುಕ್ತಹಸ್ತನಾಗಿ ದೀನಜನಗಳಿಗೆ ದಾನವಾಗಿ ಕೊಡುತ್ತಾ ಬಂದನು ಇದರಿಂದ ಆತನ ಕೀರ್ತಿಯು ಎಲ್ಲಾ ಕಡೆಯಲ್ಲೂ ಹರಡತೊಡಗಿತು ಕನಕದ ಕೊಪ್ಪರಿಗೆಗಳನ್ನು ಕಂಡ ಅವನನ್ನು ಎಲ್ಲರೂ ಕನಕನೆಂದೇ ಕರೆಯಸಾಗಿದರು

ಮುಂದೆ ಕೆಲವು ದಿನಗಳು ಕಳೆದು ಕನಕನು ಪ್ರಾಯ ಪ್ರಬುದ್ಧನಾಗುತ್ತಿದ್ದ ವೇಳೆಯಲ್ಲಿ ಒಂದುದಿನ ಅವನಿಗೊಂದು ಕನಸುಬಿದ್ದು ಅದರಲ್ಲಿ ಆದಿಕೇಶವಸ್ವಾಮಿಯು ಆ ಊರಿನ ಒಂದು ಸ್ಥಳವನ್ನು ತೋರಿಸಿ ಅಲ್ಲಿ ಬಹು ದಿನಗಳಿಂದ ಬಿದ್ದಿದ್ದ ಆದಿಕೇಶವನ ವಿಗ್ರಹವನ್ನು ಕಾಗಿನೆಲೆ ಗ್ರಾಮಕ್ಕೆ ತೆಗೆದುಕೊಂಡು

ಹೋಗಿ ಅಲ್ಲಿ ಪ್ರತಿಷ್ಠೆ ಮಾಡೆಂದು ಆಜ್ಞಾಪಿಸಿದನು ಕನಕನು ಎಚ್ಚತ್ತು ಹಾಗೆಯೇ ಮಾಡಿ ಬಹು ಭಕ್ತಿಯಿಂದ ನಡೆದುಕೊಳ್ಳುತ್ತಿರಲು, ಕನಕನ ಕೀರ್ತಿ ಪ್ರತಿಷ್ಠೆಗಳು ದಿನದಿನಕ್ಕೆ ಎಲ್ಲಾ ಕಡೆಯಲ್ಲೂ ವ್ಯಾಪಿಸಿ, ಆನೇಗೊಂದಿ ಸಂಸ್ಥಾನದ ಮಹಾರಾಜನು ಬಂಕಾಪುರ ಪ್ರಾಂತವನ್ನು ಆತನ ಸ್ವಾಧೀನಕ್ಕೆ ಕೊಟ್ಟು ಅದನ್ನು ಆಳಿಕೊಂಡು ಬರುವಂತೆ ಅಪ್ಪಣೆಕೊಟ್ಟನು

ಆ ತಾಲ್ಲೂಕಿನ ಸರ್ವಾಧಿಕಾರವು ಕೈಗೆ ಬಂದೊಡನೆಯೇ ಕನಕ ನಾಯಕನು, ಕಾಗಿನೆಲೆಯ ಆದಿಕೇಶವಸ್ವಾಮಿಯ ದೇವಾಲಯ ಮುಂತಾದುವು ಗಳನ್ನು ಸುಸ್ಥಿತಿಗೆ ತಂದು ಪೂಜೆ ಉತ್ಸವಾದಿಗಳಿಗೆ ಆವಶ್ಯಕವಾದ ಸಕಲ ಅನುಕೂಲತೆಗಳನ್ನೂ ಮಾಡಿದನು ಹೀಗಿರುತ್ತಿರಲು ಆ ಪ್ರಾಂತದಲ್ಲಿನ ಅನೇಕ ಮಂದಿಗೆ, ಇನ್ನುಮುಂದೆ ತಿರುಪತಿ ವೆಂಕಟರಮಣಸ್ವಾಮಿಗೆ ಸಲ್ಲಿಸುವ ಮುಡುಪು ಕಾಣಿಕೆಗಳನ್ನು ಕನಕನಾಯಕನಿಗೇ ಸಲ್ಲಿಸಿರೆಂದು ಏಕಕಾಲದಲ್ಲಿ ಕನಸಾಯಿತು. ಎಲ್ಲರೂ ಕನಕನಾಯಕನಲ್ಲಿ ಬಹು ಭಕ್ತಿಭಾವದಿಂದ ನಡೆದುಕೊಳ್ಳತೊಡಗಿದರು. ಕನಕನಾದರೋ, ನಿರ್ಮಮತೆಯಿಂದ ಸಮಸ್ತವನ್ನೂ, ಶ್ರೀ ಆದಿಕೇಶವನ ಪಾದ ಗಳಿಗೆ ಒಪ್ಪಿಸುತ್ತಾ ಬಹು ಬಗೆಯಿಂದ ಸೇವೆ ಆರಾಧನೆಗಳನ್ನು ನಡೆಯಿಸುತ್ತಾ ಇದ್ದುಬಿಟ್ಟನು ಹೀಗೆ ಕೆಲವು ಕಾಲ ನಡೆಯುವುದರೊಳಗಾಗಿ, ಸರ್ಕಾರದ ಹಣವು ಕನಕನಾಯಕನಿಂದ ದೇವಸ್ಥಾನದ ಪೂಜೆ ಉತ್ಸವ ಮುಂತಾದುವುಗಳ ದುಂದುವೆಚ್ಚಕ್ಕೆ ವಿನಿಯೋಗವಾಗುತ್ತದೆಂದು ದುಷ್ಟರು ಕೆಲವರು ರಾಜನಲ್ಲಿ ದೂರಿದರು ಒಡನೆ ಕನಕನಾಯಕನು, ಆ ಅಧಿಕಾರವನ್ನು ಬೇರೆಯವರಿಗೆ ವಹಿಸಿಕೊಡಬೇಕೆಂದು ರಾಜಾಜ್ಞೆಯಾಯಿತು ಅದರಂತೆ, ಅಧಿಕಾರವನ್ನು ಬಿಟ್ಟು ಕನಕನು ಮುಂದೆ ಕಾಗಿನೆಲೆಗೇ ಬಂದು ವಾಸಿಸುತ್ತ, ಬೇಟೆ ಮುಂತಾದುವು ಗಳಲ್ಲಿ ಕಾಲಯಾಪನೆ ಮಾಡುತ್ತಿದ್ದನು

ಹೀಗೆ ಕೆಲವು ಕಾಲ ಕಳೆಯುವುದರೊಳಗಾಗಿ ಆತನಿಗೆ ಕನಸಿನಲ್ಲಾದ ಒಂದು ಅನುಭವದ ಫಲವಾಗಿ, ವೈರಾಗ್ಯಬುದ್ಧಿ ಹುಟ್ಟಿತು. ಒಡನೆ ತಿರುಪತಿಗೆ ಹೋಗಿ ಶ್ರೀ ವೆಂಕಟೇಶನ ದರ್ಶನ ಮಾಡಬೇಕೆಂದು ಮನಸ್ಸಾಗಲು ಅಲ್ಲಿಗೆ ನಡೆದು ಶ್ರೀ ಸ್ವಾಮಿಯ ಸೇವೆಯಲ್ಲಾಸಕ್ತನಾಗಿ ಕೆಲವು ದಿನಗಳು ಇದ್ದನು. ಆಗ ಒಂದು ದಿನ 'ಕನಕಾ, ನೀನಿನ್ನು ವ್ಯಾಸರಾಯ ಸ್ವಾಮಿಗಳಲ್ಲಿ ಹೋಗಿ ನೆಲೆಸು' ಎಂದು ಸ್ವಾಮಿಯ ಆಜ್ಞೆಯಾಯಿತು ಒಡನೆ ಕನಕದಾಸರು

ತಿರುಪತಿಯಿಂದ ಹೊರಟು ಸೋಸಲೆಯ ವ್ಯಾಸರಾಯ ಸ್ವಾಮಿಗಳ ಸನ್ನಿಧಿಗೆ ಬಂದು ಸೇರಿದರು

ಶ್ರೀಗಳವರು ಭಗವದ್ಭಕ್ತರಾದ ಕನಕದಾಸರ ಚೇತನ ಪಾವಿತ್ರ್ಯತೆಯನ್ನು ಜ್ಞಾನದೃಷ್ಟಿಯಿಂದ ತಿಳಿದು, ಅವರನ್ನು ಬಹು ಬಗೆಯಿಂದ ಆದರಿಸುತ್ತಿದ್ದರಾದರೂ, ಮಠದಲ್ಲಿದ್ದ ಇತರ ಅನೇಕರು, ಅವರ ಮಾಹಾತ್ಮ್ಯ ಪರಿಚಯವಿಲ್ಲದ, ಅನೇಕ ವೇಳೆ, ಅವರನ್ನು ಕೀಳುಜಾತಿಯವರೆಂಬ ಕಾರಣದ ಮೇಲೆ ಬಹು ಕಿರುಕುಳಕ್ಕೆ ಒಳಪಡಿಸುತ್ತಿದ್ದರು ಆ ಸಂದರ್ಭಗಳಲ್ಲೆಲ್ಲ ಭಗವದನುಗ್ರಹಕ್ಕೆ ಪಾತ್ರರಾದ ಅವರಿಂದ ಅನೇಕ ಮಾಹಾತ್ಮ್ಯಗಳು ಪ್ರಕಟವಾಗುತ್ತಿದ್ದುವು ಶ್ರೀಗಳವರೂ, ದೇಹವಲ್ಲ-ಆತ್ಮ ಪಾವಿತ್ರ್ಯತೆಯೇ ಗಣನೀಯವಾದುದೆಂದು ತಮ್ಮ ಶಿಷ್ಯರಿಗೆಲ್ಲ ತಿಳಿಯಹೇಳಿ, ಕನಕದಾಸರನ್ನು ಅಭಿನಂದಿಸುತ್ತಿದ್ದರು ಇವರು ಶ್ರೀ ಪುರಂದರದಾಸರ ಸಮಕಾಲೀನರು

ಶ್ರೀ ಕನಕದಾಸರು, ಲೌಕಿಕ ನೀತಿ ಸಾಮಾಜಿಕ ಆಚಾರ ವ್ಯವಹಾರಗಳು, ಮುಖ್ಯವಾಗಿ ಭಗವದ್ಭಕ್ತಿ–ವೈರಾಗ್ಯ, ಇಹಜೀವನದ ಅಶಾಶ್ವತ ಸ್ಥಿತಿ ಮುಂತಾದುವುಗಳನ್ನು ಕುರಿತು ಅನೇಕಾನೇಕ ಕೀರ್ತನೆಗಳನ್ನು ರಚಿಸಿ ಹಾಡಿದ್ದಾರೆ ಅವರ ಪದಗಳು ಸರಳತೆ ಸ್ವಭಾವ ರಸಪುಷ್ಟಿ ಅರ್ಥಗಾಂಭೀರ್ಯ ಮುಂತಾದುವುಗಳಿಂದ ತುಂಬಿ ಮನೋಹಾರಕವಾಗಿವೆ. ಕೇವಲ ಕೀರ್ತನೆಗಳನ್ನು ಮಾತ್ರವಲ್ಲದೆ, ದಾಸವರ್ಯರು, ಶ್ರೀ ವಿಷ್ಣು ಭಕ್ತಿಸಾರ, ನಳಚರಿತ್ರೆ, ರಾಮಧಾನ್ಯಚರಿತೆ ಎಂಬ ಭಾಮಿನೀಷಟ್ಪದಿಯ ಗ್ರಂಥಗಳನ್ನೂ, ಮೋಹನ ತರಂಗಿಣಿಯೆಂಬ ಶ್ರೀ ಕೃಷ್ಣ ಮಹಿಮೆಯ ಗ್ರಂಥವನ್ನೂ ರಚಿಸಿ ಅಮೌಲ್ಯ ಸಾಹಿತ್ಯ ಸೇವೆಯನ್ನೂ ಮಾಡಿದ್ದಾರೆ

ಅವರ ಕೀರ್ತನೆಗಳು ಭಕ್ತಿ ಜ್ಞಾನ ವೈರಾಗ್ಯ ಪರವಾಗಿ ಭಕ್ತಿ ಪಂಥದ ತತ್ತ್ವ ವಿಚಾರಗಳನ್ನು ಪ್ರತಿಪಾದಿಸುತ್ತಾ ಭಕ್ತಜನ ಕರ್ಣ ರಸಾಯನವಾಗಿವೆ ಹೀಗೆ ಭಗವದ್ಭಕ್ತಿ ಬೀಜಗಳು ಪಾಮರವರ್ಗಕ್ಕೂ ಜನಸಾಮಾನ್ಯಕ್ಕೂ ಲಭ್ಯವಾಗುವಂತೆ ಹಾಡಿ ಪಾಡಿ *ಶ್ರೀ ಕನಕದಾಸರು ೯೮ ವರ್ಷಕಾಲ ಜೀವಿಸಿ, ಕೊನೆಗೊಂದುದಿನ ಕಾಗಿನೆಲೆಯ ಶ್ರೀಮದಾದಿಕೇಶವನ ವದನದಲ್ಲಿ ಪ್ರವೇಶಿಸಿ ಆ ವಿಗ್ರಹದಲ್ಲೇ ಲೀನವಾದರೆಂಬ ಐತಿಹ್ಯವಿದೆ

---

ವಿವರವಾದ ಚರಿತ್ರೆಗೆ ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯ ಪುಸ್ತಕ ನೋಡಬಹುದು

ಶ್ರೀರಾಮ ಸಹಾಯಂ

# ಶ್ರೀ ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ

## ಶ್ರೀ ಕನಕದಾಸರ ಕೃತಿಗಳು

---

೧ ರಾಗ ಕಲ್ಯಾಣಿ—ಅಟತಾಳ

ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನ್ಯಾರಮ್ಮ ಪ.

ಕಮ್ಮಗೋಲನ ವೈರಿಸುತನಾದ ಸೊಂಡಿಲ
ಹೆಮ್ಮೆಯ ಗಣನಾಥನೆ ಅ.

ಮೋರೆಕಪ್ಪಿನಭಾವ ಮೊರದಗಲ ಕಿವಿ
ಕೋರೆದಾಡಿಯನ್ಯಾರಮ್ಮ
ಮೂರುಕಣ್ಣಿನಸುತ ಮುರಿದಿಟ್ಟ ಚಂದ್ರನ
ಧೀರ ತಾ ಗಣನಾಥನೆ ಅಮ್ಮಯ್ಯ ೧

ಉಟ್ಟ ದಟ್ಟಿಯು ಬಿಗಿದುಟ್ಟ ಚಲ್ಲಣದ
ಧಿಟ್ಟ ತಾನಿವನ್ಯಾರಮ್ಮ
ಪಟ್ಟದರಾಣಿ ಪಾರ್ವತಿಯ ಕುಮಾರ
ಹೊಟ್ಟೆಯ ಗಣನಾಥನೆ ಅಮ್ಮಯ್ಯ ೨

ರಾಸಿವಿದ್ಯೆಯ ಬಲ್ಲ ರಮಣಿಹಂಬಲನೊಲ್ಲ
ಭಾಷಿಗನಿವನ್ಯಾರಮ್ಮ
ಲೇಸಾಗಿ ಸುಜನರ ಸಲಹುವ ನೆಲೆಯಾದಿ
ಕೇಶವನ ದಾಸ ಕಾಣೇ ಅಮ್ಮಯ್ಯ ೩

೨ ರಾಗ ನಾದನಾಮಕ್ರಿಯ—ಚಾಪುತಾಳ

ಗೋವಿಂದ ಸಲಹೆನ್ನನು, ಸದಾನಂದ–ಗೋವಿಂದ ಪ

ಗೋವಿಂದ ಸಲಹೆನ್ನ ಕುಮುದಲೋಚನ ನಿನ್ನ
ಸೇವಕರಡಿಯ ಸೇವಕನಯ್ಯ ಗೋವಿಂದ ಅ

ತಮನ ಸಂಹರಿಸಿ ವೇದವ ತಂದೆ ಗೋವಿಂದ
ಅಮರರಿಗಮೃತ ಪಾನವನಿತ್ತೆ ಗೋವಿಂದ
ರಮಣಿಯ ತಂದ ವರಹರೂಪಿ ಗೋವಿಂದ
ಭ್ರಮಿಸಿ ಕಂಭದೊಳುದ್ಭವಿಸಿದೆ ಗೋವಿಂದ
ಕ್ಷಮೆಯನಳೆದ ಬ್ರಹ್ಮಚಾರಿಯೆ ಗೋವಿಂದ
ಸಮರದೊಳಖಿಳ ರಾಯರ ಕೊಂದೆ ಗೋವಿಂದ
ಕಮಲಾಕ್ಷ ಕಡಲಕಟ್ಟಿದ ಧಿಟ್ಟ ಗೋವಿಂದ
ಮಮತೆಯೊಳಿಳೆಯ ಗೋವ್ಗಳ ಕಾಯ್ದೆ ಗೋವಿಂದ
ರಮಣಿಯರ್ಗೊಲಿದು ಬತ್ತಲೆ ನಿಂದೆ ಗೋವಿಂದ
ವಿಮಲ ತುರಗವೇರಿ ನಡೆಸಿದೆ ಗೋವಿಂದ

ನಮಿಪರಿಗೊಲಿವೆ ಗೋವಿಂದ—ನಿಂದಿಪರಿಗೆ
ತಮನನಂತಿಪ್ಪೆ ಗೋವಿಂದ—ಎಲ್ಲರೊಳಿಪ್ಪ
ಅಮಿತಮಹಿಮ ಗೋವಿಂದ—ಇಂಗಡಲೊಳು
ಗಮನನಿರ್ಜಿತ ಗೋವಿಂದ—ಅಚ್ಯುತ ಸರ್ವೋ
ತ್ತಮನೆ ಚಿನ್ಮಯ ಗೋವಿಂದ—ನಿಶ್ಚಲಭಕ್ತಿ
ಕ್ರಮವ ಬೋಧಿಸೊ ಗೋವಿಂದ—ಪಾಪವನೆಲ್ಲ
ಶಮನಗೊಳಿಪ ಗೋವಿಂದ—ನಮೋ ಲಕ್ಷ್ಮಿ
ರಮಣ ದಶಾವತಾರ ತಾಳಿದ ಹರಿಯೆ ೧

ಮನವೆನ್ನ ಮಾತಕೇಳದು ಕಾಣೊ ಗೋವಿಂದ
ಮನವ ಗೆಲ್ಲುವ ಬಗೆ ಎನಗಿಲ್ಲ ಗೋವಿಂದ
ಕನಸಿನಂತಿಹ ದೇಹ ಸ್ಥಿರವಲ್ಲ ಗೋವಿಂದ
ಬಿನುಗು ಬುದ್ಧಿಗಳನ್ನು ಬಿಡಿಸಯ್ಯ ಗೋವಿಂದ

ನೆನಹು ನಿನ್ನೊಳಗಿಟ್ಟು ನಡೆಸಯ್ಯ ಗೋವಿಂದ
ನೆನೆವ ದಾಸರ ಮನದೊಳಗಿರ್ಪ ಗೋವಿಂದ
ವನಜಲೋಚನ ನಾ ನಿನ್ನವನಯ್ಯ ಗೋವಿಂದ
ಘನಮಹಿಮನೆ ನಿನ್ನ ಮರೆಹೊಕ್ಕೆ ಗೋವಿಂದ
ಮುನಿಗಳ ಮನದೊಳು ಮಿನುಗುವ ಗೋವಿಂದ
ನಿನಗಿಲ್ಲದಪಕೀರ್ತಿ ಎನಗೇನೊ ಗೋವಿಂದ

ಜನನ ರಹಿತ ಗೋವಿಂದ—ನಿನ್ನಡಿಗಳ
ನೆನಹು ಕೊಡೋ ಗೋವಿಂದ—ದುರ್ವಿಷಯ ವಾ
ಸನೆಯ ಬಿಡಿಸೊ ಗೋವಿಂದ—ಕುತ್ಸಿತ ಕೆಟ್ಟ
ತನವ ಬಿಡಿಸೊ ಗೋವಿಂದ—ಸದ್ಗುಣವೆಂಬ

ಧನವ ತುಂಬಿಸೊ ಗೋವಿಂದ—ಇದಕ್ಕೆ ಬಡ
ತನವೆ ನಿನಗೆ ಗೋವಿಂದ—ಸದಾ ನಿನ್ನ
ಘನ ಸ್ಮರಣೆಕೊಡು ಗೋವಿಂದ—ಸದಾನಂದ
ಸನಕ ಸನಂದನಾರ್ಚಿತ ಪಾದ ಹರಿಯೆ

ನರಬೊಂಬೆಗಳಮಾಡಿ ಕುಣಿಸುವೆ ಗೋವಿಂದ
ನರರ ನೋಡಿ ನೋಡಿ ನಗುತಿರ್ಪೆ ಗೋವಿಂದ
ಅರಿದೆನೆಂಬರಿಗಂತ್ಯ ತೋರದೊ ಗೋವಿಂದ
ಅರಿಯದಂತಖಿಳದೊಳಡಗಿರ್ಪೆ ಗೋವಿಂದ
ಅರಿಯಾಡಂಬರಗಳಿಗಳವಡದ ಗೋವಿಂದ

ಪರಮಪಾವನನೆಂಬ ಬಿರುದುಳ್ಳ ಗೋವಿಂದ
ಪರಮಪುರುಷ ಪುರುಷೋತ್ತಮ ಗೋವಿಂದ
ಪರಬ್ರಹ್ಮ ಪರಮ ಪರಾತ್ಪರ ಗೋವಿಂದ
ಮರೆಹೊಕ್ಕ ಭಕ್ತರ ಸಲಹುವ ಗೋವಿಂದ
ಕರಿರಾಜ ಕರೆಯಲೊದಗಿ ಬಂದೆ ಗೋವಿಂದ

ಗರುಡ ಗಮನ ಗೋವಿಂದ—ಕಿನ್ನರ ಸಿದ್ಧ
ಗರುಡ ಸನ್ನುತ ಗೋವಿಂದ—ಅಪರಿಮಿತಿ
ಕರುಣಾಸಾಗರ ಗೋವಿಂದ—ಅರಿಯದಂಥ
ಪರಮಜ್ಯೋತಿಯೆ ಗೋವಿಂದ—ಗಂಗೆಯ ಪೆತ್ತ

ಚರಣ ನಿರ್ಮಲ ಗೋವಿಂದ—ತೆತ್ತೀಸಕೋಟಿ
ಸುರರ ಪೊರೆವ ಗೋವಿಂದ—ಶ್ರೀ ವೈಕುಂಠ
ಪುರದೊಳಗಿಹ ಗೋವಿಂದ—ಅಚ್ಯುತಾನಂತ
ತಿರುಪತಿ ನೆಲೆಯಾದಿ ಕೇಶವ ಹರಿಯೆ ೩

೩ ರಾಗ ರೇಗುಪ್ತಿ—ಅಟತಾಳ

ಇಷ್ಟು ದಿನ ಈ ವೈಕುಂಠ, ಎಷ್ಟು ದೂರವೆನ್ನುತಿದ್ದೆ
ದೃಷ್ಟಿಯಿಂದ ನೋಡಿಕೊಂಡೆ, ಸೃಷ್ಟಿಗೀಶ ಶ್ರೀರಂಗಶಾಯಿ ಪ

ವನ ಉಪವನಗಳಿಂದ | ಘನ ಸರೋವರಗಳಿಂದ
ಕನಕ ಗೋಪುರಂಗಳಿಂದ | ಘನ ಶೋಭಿತನೆ ಶ್ರೀರಂಗಶಾಯಿ ೧

ಎಂಟು ಏಳು ಕಳೆದದ್ದರಿಂದ | ತುಂಟರೈವರ ತುಳಿದದ್ದರಿಂದ
ಕಂಟಕನೊಬ್ಬನ ಕಳೆದದ್ದರಿಂದ | ಭಂಟನಾಗಿ ಬಂದೆ ಶ್ರೀರಂಗಶಾಯಿ ೨

ವಜ್ರ ವೈಢೂರ್ಯ ತೊಲೆಗಳ ಕಂಡೆ | ಪ್ರಜ್ವಲಿಪ ಮಹಾದ್ವಾರವ ಕಂಡೆ
ನಿರ್ಜರೋತ್ತಮರ ಮುನಿಗಳ ಕಂಡೆ | ದುರ್ಜನಾಂತಕ ಶ್ರೀರಂಗಶಾಯಿ ೩

ರಂಭೆ ಊರ್ವಶಿ ಮೇಳವ ಕಂಡೆ | ತುಂಬುರ ನಾರದರ ಕಂಡೆ
ಅಂಬುಜೋದ್ಭವ ಪ್ರಮುಖರ ಕಂಡೆ | ಶಂಬರಾಂತಕಪಿತ ಶ್ರೀರಂಗಶಾಯಿ ೪

ನಾಗಶಯನನ ಮೂರ್ತಿಯ ಕಂಡೆ | ಭೋಗಿಭೂಷಣ ಸಖನ ಕಂಡೆ
ಭಾಗವತರ ಸಮ್ಮೇಳವ ಕಂಡೆ | ಕಾಗಿನೆಲೆಯಾದಿ ಕೇಶವ ರಂಗಶಾಯಿ ೫

೪ ರಾಗ ಕೇದಾರಗೌಳ—ಝಂಪೆತಾಳ

ತಲ್ಲಣಿಸದಿರು ಕಂಡ್ಯ ತಾಳು ಮನವೆ ಪ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ಅ

ಬೆಟ್ಟದ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ
ಘಟ್ಟ್ಯಾಗಿ ಸಲಹುವನು ಇದಕೆ ಸಂಶಯಬೇಡ ೧

ಅಡವಿಯೊಳಗಾಡುವ ಮೃಗ ಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೊ
ಪಡೆದ ಜನನಿಯ ತೆರದೆ ಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹಬೇಡ ೨

ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರವಿತ್ತವರು ಯಾರೊ
ಬಲ್ಲಿದನು ಕಾಗಿನೆಲೆಯಾದಿ ಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ೩

೫ ರಾಗ ಆನಂದಭೈರವಿ—ಆಟತಾಳ

ನಿನ್ನ ನಾನೇನೆಂದೆನೋ ರಂಗಯ್ಯ ರಂಗ, ನಿನ್ನ ನಾನೇನೆಂದೆನೊ ಪ
ನಿನ್ನ ನಾನೇನಂದೆ ನಿಗಮಗೋಚರ ಸ್ವಾಮಿ
ಪನ್ನಂಗಶಯನ ಪಾಲ್ಗಡಲೊಡೆಯನ ರಂಗ ಅ

ಧೀರ ಸೋಮಕ ವೇದಚೋರ-ಖಳನ ಸೀಳಿ
ವಾರಿಧಿಗಿಳಿದು ಪರ್ವತವನೆತ್ತಿ
ಧಾರುಣಿಯನು ಕದ್ದ ದನುಜದಲ್ಲಣನಾದ
ನಾರಸಿಂಹ ನಮೋ ನಮೋ ಎಂದೆನಲ್ಲದೆ

ನೀರ ಪೊಕ್ಕವನೆಂದೆನೆ— ಬೆನ್ನಿನ ಮೇಲೆ
ಭಾರ ಪೊತ್ತವನೆಂದೆನೆ – ಮಣ್ಣನು ಅಗೆದು
ಬೇರ ಮೆದ್ದವನೆಂದನೆ—ರಕ್ಕಸನೊಳು
ಹೋರಿ ಹೊಯ್ದನೆಂದು ಹೊಗಳಿದೆನಲ್ಲದೆ ೧

ಧರೆಯ ದಾನವ ಬೇಡಿ ಧರಣಿ ಈರಡಿಮಾಡಿ
ಪರಶುವ ಪಿಡಿದು ಕ್ಷತ್ರಿಯರ ಕಾಡಿ
ಚರಣದಿ ಪಾಷಾಣ ಪೆಣ್ಣ ಮಾಡಿದ ಪುಣ್ಯ
ಚರಿತ ಯಾದವಪತಿ ಶರಣೆಂದೆನಲ್ಲದೆ

ತಿರುಕ ಹಾರುವನೆಂದೆನೆ--ಹೆತ್ತ ತಾಯ
ಕೊರಳ ಕೊಯ್ದವ (ಶಿರವ ತರಿದವ) ನೆಂದೆನೆ-ವನವಾಸದಿ
ಧುರಕೆ ನೆರೆದವನೆಂದೆನ—ಪೂತಣಿಯನು
ಸರಕು ಮಾಡದೆ ಕೊಂದ ಹರಿಯೆಂದೆನಲ್ಲದೆ ೨

ಚಿತ್ತಜಕೋಟ ಲಾವಣ್ಯ ತೇಜದಿ ಬಂದು
ಉತ್ತಮ ಸ್ತ್ರೀಯರ ವ್ರತವಳಿದು
ಮತ್ತೆ ಕಲ್ಕಿಯಾಗಿ ಮಧುಹರ* ಮಡುಹಿದ
ಹತ್ತವತಾರದ ಹರಿಯೆಂದೆನಲ್ಲದ

ಬತ್ತಲಿದ್ದವನೆಂದೆನೆ—ತೇಜಿಯನೇರಿ
ಒತ್ತಿ ಆಳ್ದವನೆಂದೆನೆ—ಬಾರಿಬಾರಿಗು
ಮತ್ತೆ ಪುಟ್ಟಿದನೆಂದೆನೆ—ಆದಿಕೇಶವ
ಭಕ್ತವತ್ಸಲನೆಂದು ಪೊಗಳದೆನಲ್ಲದೆ ೩

೬ ರಾಗ ಕಾಂಬೋದಿ—ಝಂಪೆತಾಳ

ಸಜ್ಜನರ ಸಂಗದೊಳಗಿರಿಸೆನ್ನ ರಂಗ ಪ
ದುರ್ಜನರ ಸಂಗ ನಾನೊಲ್ಲೆ ಮಂಗಳಾಂಗ ಅ

ಕೂಡಿದ ಸಭೆಯಲಿ ಕುತ್ಸಿತವ ನುಡಿವನ ಸಂಗ
ನಾಡಿನೊಳಗನ್ಯಾಯ ಮಾಡುವನ ಸಂಗ
ಬೇಡಿದರು ಕೊಡದಿರುವ ಕಡು ಲೋಭಿಯ ಸಂಗ
ಮೂಢ ಮೂರ್ಖರ ಸಂಗ ಬಲುಭಂಗ ಎಲೊ ರಂಗ ೧

* ಮಧುಹರ—ಮ್ಲೇಂಛರ

ಗುರುಸತಿಗೆ ಪರಸತಿಗೆ ಎರಡು ಬಗೆವರ ಸಂಗ
ಗುರುನಿಂದೆ ಪರನಿಂದೆ ಮಾಡುವರ ಸಂಗ
ಪರಹಿತಾರ್ಥದ ಧರ್ಮವರಿಯದವರ ಸಂಗ
ಮರುಳ ಪಾಮರ ಸಂಗ ಬಲುಭಂಗ ಎಲೊ ರಂಗ ೨
ಆಗಮದ ಅನ್ವಯವರಿಯದವನ ಸಂಗ
ರೋಗದಲಿ ಆವಾಗ ಮುಲುಗುವನ ಸಂಗ
ಕಾಗಿನೆಲೆಯಾದಿ ಕೇಶವನಂಘ್ರಿ ನೆನೆಯದಿಹ
ಭಾಗವತರ ಸಂಗ ಬಲುಭಂಗ ಎಲೊ ರಂಗ ೩

೭ ರಾಗ ಶ್ರೀರಾಗ—ಆಡತಾಳ

ಪರಮಪುರುಷ ಹರಿ ಗೋವಿಂದ, ಕರಿ
ವರದ ನಾರಾಯಣ ಗೋವಿಂದ ಪ
ನಿಶಿಚರಸುರನ ಉಸುರ ತೊಲಗಿಸಿದೆ
ಕುಸುಮಶರನಪಿತ ಗೋವಿಂದ
ರಸಪೂರಿತ ಶ್ರುತಿ ಮಸುಳಿಸದಲೆ ತಂದು
ಬಿಸಜಸಂಭವಗಿತ್ತೆ ಗೋವಿಂದ ೧
ಜತನ ತಪ್ಪದೆ ಅಮೃತಮಥನದಿ ಪ
ರ್ವತವನುದ್ಧರಿಸಿದೆ ಗೋವಿಂದ
ಶತಕ್ರತುವಿನ ಸಿರಿ ಹತವಾಗೆ ಕಡಲನು
ಮಥಿಸಿ ನಿಲ್ಲಿಸಿಕೊಟ್ಟೆ ಗೋವಿಂದ ೨
ಭೂತಳವೆರಸಿ ರಸಾತಳಕಿಳಿದನ
ಪಾತಾಳದಿ ಕಂಡೆ ಗೋವಿಂದ
ಆತನೊಡನೆ ಕಾದಿ ಖಾತಿಲಿ ಮಡುಹಿ ಮ
ಹೀತಳವನು ತಂದೆ ಗೋವಿಂದ ೩
ದುರುಳ ದೈತ್ಯನ ಸೀಳಿ ಕರುಳಮಾಲೆಯ ಮುಂ
ಗೊರಳೊಳು ಧರಿಸಿದೆ ಗೋವಿಂದ
ಗರಳ ಕಂಧರ ವಿಧಿ ಕರವೆತ್ತಿ ಪೊಗಳಲು
ತರಳಗಭಯವಿತ್ತೆ ಗೋವಿಂದ

ವಾಮನನಾಗಿ ನಿಸ್ಸೀಮ ಬಲಿಯ ಕೈಯ
ಭೂಮಿಯಳೆದುಕೊಂಡೆ ಗೋವಿಂದ
ತಾಮರಸೋದ್ಭವಾಂಡವೊಡೆದು ನಿಂದು
ವ್ಯೋಮಗಂಗೆಯ ಪೆತ್ತೆ ಗೋವಿಂದ ೫

ವರ ಪರಶುಧರನಾಗಿ ಭೂಪರ, ಧಿ
ಕ್ಕರಿಸಿ ಸಂಹರಿಸಿದೆ ಗೋವಿಂದ
ತರಹರಿಸದೆ ವಸುಂಧರೆಯನೆಲ್ಲವ ಭೂ
ಸುರರಿಗೊಪ್ಪಿಸಿಕೊಟ್ಟೆ ಗೋವಿಂದ ೬

ತ್ರಿಣಯನನೊಲಿಸಿದ ರಾವಣನನು ರಣಾಂ
ಗಣದೊಳಗೊರೆಸಿದೆ ಗೋವಿಂದ
ಕ್ಷಣವೆನಿಸದೆ (?) ಮಣಿಪುರದಲಿ ವಿ-ಭೀ
ಷಣಗೆ ಶಾಶ್ವತವಿತ್ತೆ ಗೋವಿಂದ ೭

ವಾರಣದಂತ ವಿಧಾರಣ ಕಂಸ ಸಂ
ಹಾರಣ ಭುಜಬಲ ಗೋವಿಂದ
ವಾರಣಪುರಪತಿದಾರಣಪ್ರಿಯ ಭೂ
ಭಾರೋತ್ತಾರಣ ಗೋವಿಂದ ೮

ಕಥೆಯ ನಿರ್ಮಿಸಿ ಪತಿವ್ರತೆಯರೆಲ್ಲ ಬಲು
ವ್ರತಗಳ ಕೆಡೆಸಿದೆ ಗೋವಿಂದ
ಜತನದಿಂದ ತ್ರಿ–ಪುರವನುರುಹಿ, ದೇ
ವತೆಗಳ ಸಲಹಿದೆ ಗೋವಿಂದ ೯

ವಾಜಿಯ ಮರುಕದಿ ತೇಜದಲೇರಿ ಕ
ನೋಜು ರಾವುತನಾದೆ ಗೋವಿಂದ
ವಾಜಿಯ ಬೆನ್ನೊಳು ರಾಜಿಪ ಗುಣದಂತೆ (?)
ಈ ಜಗದೊಳಗಿಪ್ಪೆ ಗೋವಿಂದ ೧೦

ಮೇದಿನಿಗೋಸುಗ ಕಾದಿ ಕಲಹದಿ ವಿ
ರೋಧಿಗಳನು ಕೊಂದೆ ಗೋವಿಂದ
ಸಾಧುಗಳಿಗೆ ಸುಖವ್ನೈದಿಪ ಕಾಗಿನೆಲೆ
ಯಾದಿ ಕೇಶವರಾಯ ಗೋವಿಂದ ೧೧

೮ ರಾಗ ಕಾಂಬೋದಿ—ಝಂಪತಾಳ

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ ಪ
ನೀ ದೇಹದೊಳಗೊ ನಿನ್ನೊಳು ದೇಹವೊ ಅ
ಬಯಲು ಆಲಯದೊಳಗೊ ಆಲಯವು ಬಯಲೊಳಗೋ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯೊಳಗೋ ಬುದ್ಧಿ ನಯನದೊಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ೧
ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಮನಸಿನೊಳಗೊ ಮನಸು ಜಿಹ್ವೆಯೊಳಗೊ
ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೆ ೨
ಕುಸುಮದೊಳು ಗಂಧವೋ ಗಂಧದೊಳು ಕುಸುಮವೊ
ಕುಸುಮ ಗಂಧಗಳೆರಡು ಘ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿ ಕೇಶವರಾಯ
ಉಸುರಲಿನ್ನಳವಲ್ಲ ಎಲ್ಲ ನಿನ್ನೊಳಗೊ ೩

೯ ರಾಗ ಆರಾಣ—ಅಟತಾಳ

ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ ಪ
ಕೂಗಿದರು ಧ್ವನಿ ಕೇಳಲಿಲ್ಲವೆ ನರಹರಿಯೆ ಅ
ಪರಮಪದದೊಳಗೆ ವಿಷಧರನ ತಲ್ಪದಲಿ ನೀ
ಸಿರಿಸಹಿತ ಕ್ಷೀರವಾರಿಧಿಯೊಳಿರಲು
ಕರಿರಾಜ ಕಷ್ಟದಲಿ ಆದಿಮೂಲಯೆಂದು
ಕರೆಯಲಾಕ್ಷಣ ಬಂದು ಒದಗಿದೆಯೊ ನರಹರಿಯೆ ೧

ಕಡುಕೋಪದಿಂ ಖಳನು ಖಡ್ಗವನೆ ಪಿಡಿದು ನಿ
ನ್ನೊಡೆಯನೆಲ್ಲಿಹನೆಂದು ನುಡಿಯೆ
ದೃಢಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ
ಸಡಗರದಿ ಸ್ತಂಭದಿಂದೊಡೆದೆ ನರಹರಿಯೆ ೨

ಯಮಸುತನ ರಾಣಿಗಕ್ಷಯ ವಸನವನಿತ್ತೆ
ಸಮಯದಲಿ ಅಜಮಿಳನ ಪೊರೆದೆ
ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ
ಕಮಲಾಕ್ಷ ಕಾಗಿನೆಲೆಯಾದಿ ಕೇಶವನೆ ೩

೧೦ ರಾಗ ಕಲ್ಯಾಣಿ—ಛಾಪುತಾಳ

ನೆಚ್ಚದಿರು ಸಂಸಾರ ನೆಲೆಯಲ್ಲವೀಕಾಯ ಪ
ಅಚ್ಯುತನ ನಾಮವನು ನೆನೆದು ಸುಖಿಯಾಗೋ ಅ

ಗಳಿಸದಿರು ಸೀಮೆಯನು ಗಳಿಸದಿರು ದ್ರವ್ಯವನು
ಗಳಿಸದಿರು ನೀ ದುರಿತ ರಾಸಿಗಳನು
ನಳಿನನಾಭನ ದಿವ್ಯ ನಾಮವನು ನೆನೆನೆನೆದು
ನೆಲೆಯಾದ ಪರಮಪದವಿಯ ಪಡೆಯೊ ಮನವೆ ೧

ನೋಡದಿರು ಪರಸತಿಯ ಕೂಡದಿರು ದುರ್ಜನರ
ಆಡದಿರು ಮಾತುಗಳ ಗರ್ವದಿಂದ
ಬೇಡದಿರು ಕೈಯ ಹಿಂದಕೆ ತೆಗೆವ ಲೋಭಿಯನು
ಕೊಂಡಾಡದಿರು ಬೀದಿಗೂಳುಂಬ ದೈವಗಳ ೨

ನಾನಾ ಜನ್ಮದಿ ಬಂದ ನಾಟಕದ ಬೊಂಬೆಯಿದು
ಮಾನಕ್ಕೆ ನೀ ಮೆಚ್ಚಿ ಮರುಳಾಗದೆ
ಜಾಣತನದಿಂ ಕಾಗಿನೆಲೆಯಾದಿ ಕೇಶವನ
ಮಾನಸಲಿದ ನೆನೆದು ಸುಖಿಯಾಗು ಮನವೆ ೩

೧೧ ರಾಗ ಕಾಂಬೋದಿ—ಝಂಪತಾಳ

ಆರಿಗಾದರು ಪೂರ್ವಕಲ್ಪನೆ ತಪ್ಪದು ಪ
ಬೇರೆ ಬಯಸಿದರೆ ಬರಲರಿಯದಯ್ಯ ಅ

ರಾಮಚಂದ್ರನ ಸೇವೆಮಾಡಿ ಮೆಚ್ಚಿಸಿ ಮಹಾ
ತಾಮಸನ ಗರ್ವವನು ಮುರಿದು ಬಂದ
ರೋಮ ಕೋಟಿ ಲಿಂಗನೆನಿಸಿದ ಹನುಮನಿಗೆ
ಗ್ರಾಮಗಳ ಕಾಯ್ದುಕೊಂಡಿಹುದೆ ಮನೆಯಾಯ್ತು ೧

ಸುರಪತಿಯ ಗೆದ್ದು ಸುಧೆಯನು ತಂದು ಮಾತೆಯ
ಸೆರೆಯ ಪರಿಹರಿಸಿ ಬಹು ಭಕ್ತನೆನಿಸಿ
ಹರಿಗೆ ವಾಹನನಾಗಿ ಹದಿನಾಲ್ಕು ಲೋಕವನು
ಚರಿಸಿದ ಗರುಡನಿಗೆ ಮನೆ ಮರದಮೇಲಾಯ್ತು ೨

ಪೊಡವಿ ಭಾರವ ಪೊತ್ತು ಮೃಡಗೆ ಭೂಷಣನಾಗಿ
ಹೆಡೆಯೊಳಗೆ ಮಾಣಿಕ್ಯವಿಟ್ಟುಕೊಂಡು
ಬಿಡದೆ ಶ್ರೀ ಹರಿಗೆ ಹಾಸಿಗೆಯಾದ ಫಣಿಪತಿಗೆ
ಅಡವಿಯೊಳಗಣ ಹುತ್ತ ಮನೆಯಾಯಿತಯ್ಯ ೩

ಮೂರು ಲೋಕದ ಒಡೆಯ ಮುಕ್ಕಣ್ಣನೆಂಬಾತ
ಸಾರುತಿದೆ ಸಟೆಯಲ್ಲ ವೇದವಾಕ್ಯ
ಪಾರ್ವತೀಪತಿಯಾದ ಕೈಲಾಸದೊಡೆಯನಿಗೆ
ಊರ ಹೊರಗಣ ಮಸಣ ಮನೆಯಾಯಿತಯ್ಯ ೪

ವಿಾರಲಳವಲ್ಲವೋ ಮುನ್ನ ಮಾಡಿದ್ದುದನು
ಯಾರು ಪರಿಹರಿಸಿಕೊಂಬುವರಿಲ್ಲವೊ
ಮಾರಪಿತ ಕಾಗಿನೆಲೆಯಾದಿಕೇಶವರಾಯ
ಕಾರಣಕೆ ಕರ್ತ ನೀ ಕಡೆ ಹಾಯಿಸಯ್ಯ ೫

೧೨ ರಾಗ ಕಾಂಬೋದಿ—ಝಂಪೆತಾಳ

*ಕಲಿಯುಗದ ಮಹಿಮೆಯನು ಕಂಡಷ್ಟು ಪೇಳುವೆನು ಪ
ಕಮಲನಾಭನ ಕೃಪೆಯ ಪಡೆದವರು ಕೇಳಿ ಅ

* ಕಲಿಯೇರಿ ಬಂತು ನಾವ್ ಕಡೆಬೀಳ್ವುವೆಂತು ಪ
ಕಲುಷಹರ ಶ್ರೀಕೃಷ್ಣ ಕೃಪೆ ಮಾಡೋತನಕ (ಪಾಠಾಂತರ) ಅ

ಸತ್ಯ ಧರ್ಮಗಳೆಲ್ಲ ಎತ್ತ ಪೋದವೊ ಕಾಣೆ
ಉತ್ತಮರ ಜೀವನಕೆ ದಾರಿಯಿಲ್ಲ
ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ
ಅರ್ಥ ಸಂಪನ್ನರಾಗ್ಯನುಭವಿಸುತಿಹರು ೧

ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯು ಆಗಿ
ಪುತ್ರ ಪಿತನಾಗಿ ಪಿತ ಪುತ್ರನಾಗಿ
ಮತ್ತೆ ಗಂಡನಿಗೆ ಹೆಂಡತಿಯೆ ಗಂಡಳು ಆಗಿ
ವರ್ತಿಸುವರಯ್ಯ ತಮಗೆದುರಿಲ್ಲವೆಂದು ೨

ಹಾವೆ ವರಸೆಯು ತಪ್ಪಿ ವೈರ ವರ್ಗವು ಹೆಚ್ಚಿ
ದೇವ ಬ್ರಾಹ್ಮಣ ಗುರುಹಿರಿಯುರನು ಜರಿದು
ಕೇವಲಾಧಮರೆಲ್ಲ ಸಿರಿ ಮದದಿ ಸೊಕ್ಕಿದರು
ಕಾವರಾರೈ ಸಾಧುಸಜ್ಜನರನೀಗ ೩

ವೇದ ವಿಪ್ರರು ತಮ್ಮ ವೃತ್ತಿ ಸ್ವಾಸ್ಥ್ಯವ ಕಳೆದು
ಆಧಾರವಿಲ್ಲದೆ ತಿರಿದು ತಿಂಬುವರು
ಕಾದುವ ಶೂರರಿಗೆ ಕಾಸು ಕೊಡುವವರಿಲ್ಲ
ಮೇದಿನಿಗೆ ಬೀಳ್ವ ಮಳೆ ಖಂಡಮಂಡಲವು ೪

ಅನ್ನವಸ್ತ್ರಗಳಿಂದ ಚೆನ್ನಾಗಿ ಬಾಳುವರ
ಭಿನ್ನ ತಂತ್ರವ ಮಾಡಿ ಕೆಡಿಸುತಿಹರು
ಗನ್ನಗತಕವ ಮಾಳ್ಪ ಗ್ರಾಮಣ್ಯಗಳ ಕಲಿತು
-ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ ೫

ಆಳಿದೊಡೆಯಂಗೆರಡು ಬಗೆಯುವಾತಗೆ ಒಳ್ಳೆ
ಮಾಳಿಗೆಯು ಮನೆ ತುರುವು ಧನಧಾನ್ಯವು
ವೇಳೆವೇಳೆಗೆ ಬರುವ ಹೆಂಡತಿಯ ಲೆಕ್ಕಿಸದೆ
ಸೂಳೆಯನು ನೆಚ್ಚಿ ಕಾಲವ ಕಳೆವರಯ್ಯ ೬

ಸೇರಿ ದ್ರೋಹವ ಮಾಳ್ಪ ಕ್ರೂರ ಕರ್ಮಿಗಳ ಮತ
ಪೂರೈಸಿ ಕೊಡುವರರಸುಗಳೆಲ್ಲರು
ಧಾರುಣಿಯ ಭಾರವನು ತಾಳಲಾರದೆ ದೇವಿ
ಶ್ರೀರಾಮ ರಾಮೆಂದು ಶಿರವ ತೂಗುವಳ್ಳೆ ೭

ಉತ್ತಮ ಪತಿವ್ರತೆಯು ಪತಿ ನೀನೆ ಗತಿಯೆನಲು
ಮುತ್ತೈದೆಗುಡುವುದಕೆ ವಸ್ತ್ರವಿಲ್ಲ
ಮತ್ತೆ ವ್ಯಭಿಚಾರಿಣಿಗೆ ತೊಡಿಗೆ ಬಂಗಾರಗಳು
ವರ್ತನೆಯಿದೇನಯ್ಯ ಕಲಿಯುಗದ ಮಹಿಮೆ ೮
ಪತಿವ್ರತೆಯರೆಂಬುವರು ಶತಸಹಸ್ರಕೆ ಒಂದು
ಮಿತಿಮೀರಿಯಿಹರಯ್ಯ ಇತರ ಜನರು
ಮತಿಗೆಟ್ಟು ಮನಸೋತು ಅನ್ಯ ಪುರುಷರ ಕೂಡಿ
ಗತಿಗೆಟ್ಟು ಪೋಗುವರು ಪರಲೋಕ ತೊರೆದು ೯
ಹರಿಹರರ ಪೂಜೆಗಳು ಹಗರಣಗಳಾದುವು
ಉರಿ ಮಾರಿ ಚಾಮುಂಡಿ ಶಕ್ತಿಗಳಿಗೆ
ಕುರಿ ಕೋಣ ನೈವೇದ್ಯ ಧೂಪದೀಪಗಳಿಂದ
ಪರಮಭಕ್ತಿಯ ಮಾಡಿ ಪೂಜಿಸುವರಯ್ಯ ೧೦
ನಡೆವ ಕಾರ್ಯಗಳೆಲ್ಲ ನುಡಿಯಲೆನ್ನಳವಲ್ಲ
ಒಡೆಯ ನೀನೇ ಬಲ್ಲೆ ಕಲಿಯುಗದ ಮಹಿಮೆ
ತಡವ ಮಾಡಲಿಬೇಡ ತಾಳಲಾರದು ಲೋಕ
ಮೃಡನ ವೈರಿಯ ಪೆತ್ತ ಆದಿಕೇಶವನೆ ೧೧

೧೩ ರಾಗ ಕಾಂಬೋದಿ—ಝಂಪೆತಾಳ

ಜಪವ ಮಾಡಿದರೇನು ತಪವ ಮಾಡಿದರೇನು ಪ
ಕಪಟ ಗುಣ ವಿಪರೀತ ಕಲುಷವಿದ್ದವರು ಅ
ಆದಿ ಗುರುವರಿಯದೆ ಅತ್ತಲಿತ್ತಲು ತೊಳಲಿ
ವೇದ ಶಾಸ್ತ್ರಗಳೋದಿ ಬಾಯಾರಲು
ಹಾದಿಯನು ಕಾಣದಂತಿರುತಿದ್ದು ಹಲವೆಂಟು
ವಾದತರ್ಕದೊಳಿದ್ದ ಭೇದವಾದಿಗಳು ೧
ನುಡಿನಡೆವ ಕಾಲದಲಿ ದಾನಧರ್ಮ ಮಾಡದೆ
ಅಡವಿಯೊಳು ಕೆರೆತುಂಬಿ ಬತ್ತಿದಂತೆ
ಮಡದಿ ಮಕ್ಕಳಿಗೆಂದು ಒಡವೆ ವಸ್ತ್ರವ ಗಳಿಸೆ
ಹಿಡಿಯಲಾ ಯಮನವರ ಕಟ್ಟಿಗೊಳಗಾಗಿ ೨

ಚಳಿ ಮಳೆ ಅತಿಕಾರುಗತ್ತಲೆಯೊಳಗೆದ್ದು
ಹೊಳೆಯೊಳಗೆ ಮುಳುಗಿ ಜಪತಪವ ಮಾಡಿ
ಕಳವಳಿಸಿ ನೂರೆಂಟು ತೊಳಲಿ ಬಳಲಬೇಡ
ನಳಿನಾಕ್ಷ ಆದಿಕೇಶವನ ನೆನೆಮನವೆ ೩

೧೪ ರಾಗ ಕಾಂಬೋದಿ—ಝಂಪೆತಾಳ

ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ ಪ
ಬಹು ಜನರು ನೆರೆ ತಿಳಿದು ಪೇಳಿ ಮತ್ತಿದನು ಅ

ದೇವರಿಲ್ಲದ ಗುಡಿಯು ಪಾಳು ಬಿದ್ದಂಗಡಿಯು
ಭಾವವಿಲ್ಲದ ಭಕುತಿ ಅದು ಕುಹಕ ಯುಕುತಿ
ಹೇಯವಿಲ್ಲದ ಹೆಣ್ಣು ಗಜ್ಜುಗ ಬೆಳೆದ ಕಣ್ಣು
ಸೇವೆಯರಿಯದ ಧಣಿಯು ಅವ ಕಲ್ಲು ಖಣಿಯು ೧

ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು
ನಿರ್ಮಲಿಲ್ಲದ ಮನಸು ತಾ ಕೊಳಚೆ ಹೊಲಸು
ಶರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು
ಮರ್ಮವಿಲ್ಲದ ಮಾತು ಒಡ ಮಡಕೆ ತೂತು ೨

ಮಕ್ಕಳಿಲ್ಲದ ಸಿರಿಯು ಕೊಳೆತ ತೆಂಗಿನ ಕಾಯು
ಸೌಖ್ಯವಿಲ್ಲದ ಊಟ ಅದು ಕಾಳ ಕೂಟ
ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು
ಸೊಕ್ಕಿ ನಡೆಯುವ ಭೃತ್ಯ ಅವ ಕ್ರೂರ ಕೃತ್ಯ ೩

ಕಂಡು ಕರೆಯದ ನಂಟ ಒಡಕು ಹರವಿಯ ಕಂಠ
ಉಂಡು ನಗದಿಹ ಮೋರೆ ಅದು ಕಹಿಯ ಸೋರೆ
ದಂಡಿಗಂಜುವ ಭಂಟ (ಒಡಕು ಹರವಿಯ ಕಂಠ)
ಗಂಡಗಂಜದ ನಾರಿ ಅವಳೆ ಹೆಮ್ಮಾರಿ ೪

ಬಿಟ್ಟು ಆಡುವ *ಗೆಳೆಯು ಹರಕು ತೊಗಲಿನ ಮಿಣೆಯು
ಕೊಟ್ಟು ಪೇಳುವ ದಾತ ಅವ ಹೀನಜಾತ
ಸೃಷ್ಟಿಯೊಳು ಕಾಗಿನೆಲೆಯಾದಿ ಕೇಶವನಂಘ್ರಿ
ಮುಟ್ಟಿ ಭಜಿಸದ ನರನು ಅವನೆ ವಾನರನು
(ಅವ ಕಾಡುಮರನು) ೫

೧೫ ರಾಗ ಪೀಲು—ಮಟ್ಟತಾಳ

ನಾನು ನೀನು ಎನ್ನದಿರು ಹೀನ ಮಾನವ ಪ
ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೊ ಅ

ಹೆಣ್ಣು ಹೊನ್ನು ಮಣ್ಣು ಮೂರು ನಿನ್ನದೇನೆಲೊ
ಅನ್ನದಿಂದ ಬಂದ ಕಾಮ ನಿನ್ನದೇನೆಲೊ
ಕರ್ಣದಿಂದ ಬರುವ ಘೋಷ ನಿನ್ನದೇನೆಲೊ
ನಿನ್ನ ಬಿಟ್ಟು ಪೋಪ ದೇಹ ನಿನ್ನದೇನೆಲೊ ೧

ಹಲವು ಜನ್ಮದಿಂದ ಬಂದಿರುವೆ ನೀನೆಲೊ
ಮಲದ ಗರ್ಭದಲಿ ನಿಂದಿರುವೆ ನೀನೆಲೊ
ಜಲದ ದಾರಿಯಲಿ ಬಂದಿರುವೆ ನೀನೆಲೊ
ಕುಲವು ಜಾತಿ ಗೋತ್ರವುಳ್ಳವನು ನೀನೆಲೊ ೨

ಕಾಲ ಕರ್ಮ ಶೀಲ ನೇಮ ನಿನ್ನದೇನೆಲೊ
ಜಾಲ ವಿದ್ಯೆ ಬಯಲ ಮಾಯೆ ನಿನ್ನದೇನೆಲೊ
ಕೀಲು ಬಡಿದ ತೊಗಲಬೊಂಬೆ ನಿನ್ನದೇನೆಲೊ
ಲೋಲ ಆದಿಕೇಶವನ್ನ ಭಕ್ತನಾಗೆಲೊ ೩

೧೬ ರಾಗ ಕೇದಾರಗೌಳ—ಅಟತಾಳ

ಬಂದಿದೆ ದೂರು ಬರಿದೆ ಪಾಂಡವರಿಗೆ ಪ
ಕೊಂದವರಿವರು ಕೌರವರನೆಂಬಪಕೀರ್ತಿ ಅ

* ಸ್ನೇಹವು

ಮುನ್ನಿನ ವೈರದಿ ಕಡು ಸ್ನೇಹಪಮಾಡಿ
ಉನ್ನಂತಲೆತ್ತಿ ಪಗಡೆಯಾಡಿಸಿ
ತನ್ನ ಕುಹಕದಿಂದ ಕುರುಬಲವನು ಕೊಂದ
ಗನ್ನಗತಕ ಶಕುನಿಯೊ ಪಾಂಡವರೊ ೧

ಮರಣ ತನ್ನಿಚ್ಛೆಯೊಳುಳ್ಳ ಗಾಂಗೇಯನು
ಧುರಪಲಿ ಷಂಢನ ನೆವದಿಂದಲಿ
ಸರಳ ಮಂಚದಮೇಲೆ ಮಲಗಿ ಸೊಮ್ಮುಗನನ್ನು
ಕೊರಳ ಕೊಯ್ದವ ಭೀಷ್ಮನೊ ಪಾಂಡವರೊ ೨

ಮಗನ ನೆವದಿ ಕಾಳಗವ ಬಿಸುಟು ಸುರ
ನಗರಿಗೆ ನಡೆದು ವೈರಾಗ್ಯದಿಂದ
ಜಗವರಿಯಲು ಕುರುವಂಶಕೆ ಕೇಡನು
ಬಗೆದು ಕೊಂದವ ದ್ರೋಣನೊ ಪಾಂಡವರೊ ೩

ತೊಟ್ಟ ಬಾಣವ ತೊಡಲೊಲ್ಲದೆ ಮಾತೆಗೆ
ಕೊಟ್ಟ ಭಾಷೆಗೆ ನಾಲ್ವರ ಕೊಲ್ಲದೆ
ನೆಟ್ಟನೆ ರಣಮುಖದಲಿ ತನ್ನ ಪ್ರಾಣವ
ಬಿಟ್ಟು ಕೊಂದವ ಕರ್ಣನೊ ಪಾಂಡವರೊ ೪

ಮಥಿನಿಸಿ ಸೂತತನವ ಮಾಡಿ ರಣದೊಳು
ಅತಿಹೀನಗಳೆಯುತ ರವಿಸುತನ
ರಥದಿಂದಿಳಿದು ಪೋಗೆ ಕೌರವ ಬಲವನು
ಹತ ಮಾಡಿದವ ಶಲ್ಯನೊ ಪಾಂಡವರೊ ೫

ಜಲದೊಳು ಮುಳುಗಿ ತಪವ ಮಾಡಿ ಬಲವನು
ಛಲದಿಂದೆಬ್ಬಿಸಿ ಕಾದುವೆನೆಂದವ
ಕಲಿಭೀಮಸೇನನ ನುಡಿಗೇಳಿ ಹೊರಹೊರಟು
ಕುಲವ ಕೊಂದವ ಕೌರವನೊ ಪಾಂಡವರೊ ೬

ಕೌರವ ಪಾಂಡವರಿಗೆ ಭೇದ ಪುಟ್ಟಿಸಿ
ಫೌಜೊಡ್ಡಿ ಕುರುಕ್ಷೇತ್ರದಿ ಕಾದಿಸಿ
ಸಂಶಯವಿಲ್ಲದೆ ಕುರುಬಲವನು ಕೊಂದ
ಹಿಂಸಕನಾದಿಕೇಶವನೊ ಪಾಂಡವರೊ ೭

೧೭ ರಾಗ ಕಾಂಬೋದಿ—ಝಂಪೆತಾಳ

ಭಜಿಸಿ ಬದುಕೆಲೊ ಮಾನವ ಪ
ಅಜಭವೇಂದ್ರಾದಿಗಳು ಪೂಜಿಸುವ ಪಾದವನು ಅ.

ಪಾಕಶಾಸನಗೊಲಿದು ಬಲಿಯ ಮೆಟ್ಟಿದ ಪಾದ
ಶಾಕು ಶಕಟನ ಒದ್ದು ಕೊಂದ ಪಾದ
ನಾಕಭೀಕರ ಬಕನ ಮೆಟ್ಟಿ ಸೀಳಿದ ಪಾದ
ಲೋಕಪಾವನೆ ಗಂಗೆ ಪುಟ್ಟಿದಾ ಪಾದವನು ೧

ಶಿಲೆಯಾದಹಲ್ಯೆಯನು ಶುದ್ಧ ಮಾಡಿದ ಪಾದ
ಒಲಿದು ಪಾರ್ಥನ ರಥವನೊತ್ತಿದ ಪಾದ
ಕಲಿ ಸುಯೋಧನನ ಓಲಗದಿ ಕೆಡಹಿದ ಪಾದ
ಕಲಕಿ (ಬಲಿದ, ಪಾ) ಕಾಳಿಂಗನ ಪೆಡೆ ತುಳಿದ ಪಾದವನು ೨

ಗರುಡ ಶೇಷಾದಿಗಳು ಪೊತ್ತು ತಿರುಗುವ ಪಾದ
ಧರೆಯ ಈರಡಿ ಮಾಡಿ ಅಳೆದ ಪಾದ
ಸಿರಿ ತನ್ನ ತೊಡೆಯ ಮೇಲಿರಿಸಿ ಒತ್ತುವ ಪಾದ
ಸಿರಿ ಕಾಗಿನೆಲೆಯಾದಿಕೇಶವನ ಪಾದವನು ೩

೧೮ ರಾಗ ಆರಭಿ (ದರ್ಬಾರು)—ಅಟತಾಳ

ನಾರಾಯಣ ನಿನ್ನ ನಾಮ ಒಂದಿರುತಿರೆ
*ಬೇರೊಂದು ನಾಮವಿನ್ಯಾಕಯ್ಯ ಪ

ನೆಟ್ಟನೆ ದಾರಿಯು ಬಟ್ಟೆಯೊಳಿರುತಿರೆ
ಬೆಟ್ಟವ ಬಳಸಲಿನ್ಯಾಕಯ್ಯ
ಅಷ್ಟೈಶ್ವರ್ಯವು ಮೃಷ್ಟಾನ್ನವಿರುತಿರೆ
ಬಿಟ್ಟಿ ಕೂಳನು ತಿನ್ನಲ್ಯಾಕಯ್ಯ ೧

---

* ಘೋರ ದುರಿತಗಳಿನ್ಯಾಕಯ್ಯ (ಪಾಠಾಂತರ) ೮
ಬಟ್ಟೆ ಭಾಟಾ—ರಾಜಮಾರ್ಗ

*ಪರುಶದ ಪಾಳೆಗಳಿರುತಿರೆ ಬೀದಿ
ಜರಿಗಲ್ಲ ತೊಳೆಯಲಿನ್ನ್ಯಾಕಯ್ಯ
ಹರಿವಾಣದೊಳಗಮೃತಾನ್ನವು ಇರುತಿರೆ
ತಿರುಪೆ ಕೂಳನು ತಿನ್ನಲ್ಯಾಕಯ್ಯ ೨

ಬೆಲ್ಲವು ಕರದೊಳಗಿರುತಿರೆ ಕಾಡ
ಕಲ್ಲನು ಕಡಿಯಲಿನ್ನ್ಯಾಕಯ್ಯ
ಬಲ್ಲಿದ ನೆಲೆಯಾದಿ ಕೇಶವನಿರುತಿರೆ
ಚಿಲ್ಲರೆ ದೈವದ ಹಂಬಲ್ಯಾಕಯ್ಯ ೩

೧೯ ರಾಗ ಮೋಹನ—ಝಂಪತಾಳ

ಯಾಕೆ ನೀನಿಲ್ಲಿ ಪವಳಿಸಿದೆ ಹರಿಯೆ ಪ
ಲೋಕೈಕ ವಿಖ್ಯಾತ ಪಶ್ಚಿಮ ರಂಗಧಾಮ ಅ

ತಮನೊಡನೆ ಹೋರಿ ಬೆಟ್ಟವನು ಬೆನ್ನಿನಲಿ ಪೊತ್ತು
ರಮಣಿ ಭೂಮಿಯನು ತಂದಾಯಾಸವೊ
ಅಮರ ವೈರಿಯ ಕರುಳ ಕಿತ್ತ ಕಡು ಧಾವತಿಯೊ
ಕ್ಷಮೆಯನಳೆದೀ ಪಾದಕಮಲ ನೋಯುತವೊ ೧

ಪೊಡವಿ ಪಾಲಕರ ವಂಶದ ವಕ್ಷವನೆ ಅಳಿದು
ಕೊಡಲಿಯನು ಬಿಸುಟು ಮಲಗಿದ ಭಾವವೂ
ಮಡದಿಯನು ಕದ್ದ ಒಯ್ದವನ ಶಿರವನೆ ತರಿದು
ಒಡಲಿನಾಯಾಸದಲಿ ಪವಡಿಸಿದ ಪರಿಯೊ ೨

ವಾಲಿ ಮೊದಲಾದ ಎದುರಾಂತ ವೀರರ ಕೊಂದು
ಕಾಳಿಮಡುವ ಧುಮುಕಿ ಮೈಯಲಸಿತೋ
ಲೀಲೆಗೋಸುಗ ಬಂದು ನಿರ್ವಾಣದಲಿ ನಿಂದು
ಆ ಲಜ್ಜೆಗಾಗಿ ನೀನಿಲ್ಲಿ ಮಲಗಿದೆಯೊ ೩

---

* ಸ್ಪರ್ಶಮಣಿಯ ಸಾಲುಗಳು

ನಾಲ್ಕು ಯುಗದಾಧಾರಿ ಕಡೆಗೆ ತುರಗವನೇರಿ
ಸಾಕಾಗಿ ದಣಿದು ನೀನಿಲ್ಲಿ ಮಲಗಿದೆಯೊ
ಸಾಕಾರಿಯಾಗಿ ಗೌತಮ ಮುನೀಶ್ವರನಿಗೆ
ಬೇಕೆಂದು ನೀ ಕೊಟ್ಟ ವರಕೆ ಮಲಗಿದೆಯೊ ೪

ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರು
ನಿನ್ನ ಎಬ್ಬಿಸುವರೊಬ್ಬರನು ಕಾಣೆ
ಉನ್ನಂತ ಕಾಗಿನೆಲೆಯಾದಿ ಕೇಶವರಾಯ
ಚೆನ್ನ ಶ್ರೀರಂಗಪಟ್ಟಣದ ರಂಗಧಾಮ ೫

೨೦ ರಾಗ ಮೋಹನ—ಅಟತಾಳ

ಕಷ್ಟಪಟ್ಟರು ಇಲ್ಲ ಕಳವಳೀಸಿದರಿಲ್ಲ
ಭ್ರಷ್ಟ ಮನ ನಿನ್ನ ಹಣೆಬರಹದಷ್ಟಲ್ಲದೆ ಪ.

ಸಿರಿವಂತನ ಸ್ನೇಹ ಮಾಡಿಕೊಂಡರು ಇಲ್ಲ
ಪರಿಪರಿ ವಿದ್ಯೆಗಳ ಕಲಿತರಿಲ್ಲ
ನರಿಬುದ್ಧಿಯಿಂದಲಿ ನಡೆದುಕೊಂಡರು ಇಲ್ಲ
ಅರಿಯದೇ ಹಲವು ಹಂಬಲಿಸಿದರು ಇಲ್ಲ ೧

ಕೊಂಡಾಡಿ ಕಾಡಿ ನೀ ಬೇಡಿಕೊಂಡರು ಇಲ್ಲ
ಕಂಡಕಂಡವರಿಗೆ ಕೈಮುಗಿದರಿಲ್ಲ
ಗಂಡಗತ್ತರಿ ಕೊರಳಿಗ್ಹಾಕಿಕೊಂಡರು ಇಲ್ಲ
ಪ್ರಚಂಡನಾದರು ಇಲ್ಲ ಪರಿಹಾಸ್ಯವೆಲ್ಲ ೨

ಕಟ್ಟಾಳು ಕಡುಜಾಣನಾಗಿ ಪುಟ್ಟಿದರಿಲ್ಲ
ಬೆಟ್ಟವನು ಕಿತ್ತು ತಂದಿಟ್ಟರಿಲ್ಲ
ಸೃಷ್ಟಿಯೊಳು ಕಾಗಿನೆಲೆಯಾದಿಕೇಶವರಾಯ
ಕೊಟ್ಟವರಿಗುಂಟು ಕೊಡದವರಿಗಿಲ್ಲ ೩

೨೧ ರಾಗ ಪಂತುವರಾಳಿ—ಆ''ತಾಳ

ಬಂದೆವಯ್ಯ ಗೋವಿಂದಶೆಟ್ಟಿ ನಿಮ್ಮ
ಹರಿವಾಣ ತೀರ್ಥ ಪ್ರಸಾದವುಂಟೆನಲಾಗಿ ಪ

ಅಪ್ಪವು ಅತಿರಸ ತುಪ್ಪ ಚಿನ್ನಿಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪರೂಪವಾದ ಕಜ್ಜಾಯ ರಾಸಿಗಳೆಲ್ಲ
ಛಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ ೧
ಒಡೆದ ಮಡಕೆಯೆಲ್ಲ ಅರೆದು ನಾಮವ ಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲು ತುಂಬಿ ಮಿಕ್ಕ ಒಗರ ಮಾರಿಸಿ
ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ ೨
ಶೇಷಗಿರಿಯಲ್ಲಿ ವಾಸ ಮಾಡಿಕೊಂಡು
ದೇಶಕ್ಕೆ ಪ್ರಸಾದ ನಡೆಸುವ ಶೆಟ್ಟಿ
ಆಸೆಮಾಡಿ ಹಣಕಾಸು ಗಳಿಪ ಆದಿ
ಕೇಶವ ನಾರಾಯಣ ತಿಮ್ಮಶೆಟ್ಟಿ ೩

೨೨ ರಾಗ ಆರಭಿ – ತಾಳ

ಬಲ್ಲವರಿನಿಬರು ಎಲ್ಲಾರು ಅರಿಯರು
ಫುಲ್ಲಲೋಚನ ಪೂರ್ಣಬ್ರಹ್ಮನೆಂಬುದನು ಪ
ಅಜಜ್ಞಾನಾಧಿಕ ಬಲ್ಲ ಅನಲ ಸ್ನೇಹಿತ ಬಲ್ಲ
ಗಜಚರ್ಮಾಂಬರ ಬಲ್ಲ ಗರುಡ ಬಲ್ಲ
ಭುಜಗೇಶ್ವರ ಬಲ್ಲ ಭೂರಿಲೋಚನ ಬಲ್ಲ
ತ್ರಿಜಗಾಧಿಪತಿ ತ್ರಿವಿಕ್ರಮನೆಂಬುದನು ೧
ಶುಕಯೋಗೀಶ್ವರ ಬಲ್ಲ ಸುಗುಣ ನಾರದ ಬಲ್ಲ
ಭಕುತ ಪ್ರಹ್ಲಾದ ಬಲ್ಲ ಬಲಿಯು ಬಲ್ಲ
ರುಕುಮಾಂಗದ ಬಲ್ಲ ಋಷಿ ಪರಾಶರ ಬಲ್ಲ
ಮಕರ ಕುಂಡಲಧರ ಪರಮಾತ್ಮನೆಂಬುದನು ೨
ಅಂಬರೀಷನು ಬಲ್ಲ ಅತ್ರಿ ಋಷಿಯು ಬಲ್ಲ
ಸಂಭ್ರಮದಿ ಮನು ಬಲ್ಲ ಸಹದೇವ ಬಲ್ಲ
ಬೆಂಬಿಡದುದ್ಧವ ಬಲ್ಲ ಬೇಡಿದ ಧ್ರುವ ಬಲ್ಲ
ಕಂಬು ಚಕ್ರಾಂಕಿತ ಕರ್ಮಹರನೆಂಬುದನು ೩

---

ಭೂರಿಲೋಚನ ಸಹಸ್ರಾಕ್ಷ—ಇಂದ್ರ

ವಸಿಷ್ಠ ಮುನಿ ಬಲ್ಲ ವರ ವಿಭೀಷಣ ಬಲ್ಲ
ವಿಶಿಖಶಯನ ಬಲ್ಲ ವಿದುರ ಬಲ್ಲ
ರಸಿಕ ವಾಲ್ಮೀಕಿ ಬಲ್ಲ ರಾಜ ಜನಕ ಬಲ್ಲ
ಶಶಿಮಿತ್ರನೇತ್ರ ಸರ್ವೋತ್ತಮನೆಂಬುದನು ೪

ᐩವಾಘೇಯಾಕ್ರೂರ ಬಲ್ಲ ವಚನದಿ ಶೌನಕ ಬಲ್ಲ
ಯೋಗಿ ಕಪಿಲ ಬಲ್ಲ ಭೃಗು ಬಲ್ಲನು
ತ್ಯಾಗಿ ಧರ್ಮಜ ಬಲ್ಲ ರಣದೊಳರ್ಜುನ ಬಲ್ಲ
ಕಾಗಿನೆಲೆಯಾದಿಕೇಶವನೆಂಬುದನು ೫

೨೪ ರಾಗ ಕಾಂಬೋದಿ—ಝಂಪೆತಾಳ

ಬೊಂಬೆಯಾಟವನಾಡಿಸಿದೆ ಮಹಾಭಾರತವ ಪ

ಅಂಬುಜಭವಾದಿ ಅಮರರು ನೋಡುತಿರಲು ಅ.

ಕುರುಭೂಮಿಯೆಂಬ ಪುರವೀಧಿಯನು ವಿರಚಿಸಿ
ಮರೆಯ ಮಾಯದ ಐದು ತೆರೆಯ ಹಾಕಿ
ಧರಣೀಶರೆಂಬ ನರಪ್ರತಿಮೆಗಳ ಅಳವಡಿಸಿ
ನರನ ರಥವಾಜಿಯ ಸೂತ್ರವನೆ ಹಿಡಿದು ೧

ಒದುವನು ನಾರದನು ವಾದ್ಯಗಾರನು ಶಂಭು
ಬಾದರಾಯಣ ದೇವ ಕ–ಥಾ ಪ್ರಸಂಗಿ
ಮೇದಿನಿಯ ಹೊರೆಗಳೆವ ಮೃತ್ಯುವಿನ ಹಾಸ್ಯರಸ
ವೇದನಿಕರಗಳು ಕೈವಾರಿಸುತ್ತಿರಲು ೨

ಹದಿನೆಂಟು ಅಕ್ಷೋಹಿಣೀ ಮಾರ್ಬಲವ ನೆರಹಿ
*ಹದಿನೆಂಟು ದಿನ ಕದನ ನಾಟ್ಯ ನಡಿಸಿ
ಅದರೊಳೈವರನುಳುಹಿ ಭೂಮಿಭಾರವನಿಳಿಹಿ
ಮುದದಿ ಬ್ರಹ್ಮ ಕಪಾಲವನು ತೃಪ್ತಿಗೊಳಿಸಿ ೩

---

ವಿಶಿಖಶಯನ=ಭೀಷ್ಮ, ᐩವಾಘೇಯ=ಸಾರಥಿ
* ಹದಿನೆಂಟು ದಿನ ಕದನ ಕೇಳಿಯ ನಡಿಸಿ (ಪಾ).

ಲೋಕದೊಳಗಿವನ್ನೈದನೇ ಎ ವೇದವೆಂದೆನಿಸಿ
ಪಾಕಶಾಸನ ಸಭೆಯನು ಮೆಚ್ಚಿಸಿ
ಈ ಕಥೆಯ ಕೇಳ್ದ ಜನಮೇಜಯನ ಪತಿಕರಿಸಿ
ತಾ ಕಪಟನಾಟಕದ ಸೂತ್ರಧರನೆನಿಸಿ ೪
ಇಂತೆಸವ ಲೀಲಾವಿನೋದ ರಚನೆಗಳಿಂದ, ಲೋ
ಕಾಂತರಂಗಳನು ಸಂಚರಿಸುತ
ಸಂತಸದಿ ಭರತ ಸಂಸಾರವನು ಪೊರೆವ ಕೃಪೆ
ಯಾಂತೆಸೆವ ಕಾಗಿನೆಲೆಯಾದಿ ಕೇಶವರಾಯ ೫

೨೪ ರಾಗ ಕಾಂಬೋದಿ—ಝಂಪೆತಾಳ

ದಾಸದಾಸರ ಮನೆಯ ದಾಸಿಯರ ಮಗ ನಾನು
ಸಾಸಿರ ನಾಮದೊಡೆಯ ರಂಗಯ್ಯನ ಮನೆಯ ಪ
ಶಂಕುದಾಸರ ಮನೆಯ ಮಂಕುದಾಸನು ನಾನು
ಮಂಕುದಾಸನು ನಾನು ಮರುಳುದಾಸ
ಸಂಕೀರ್ತನೆಯ ಮಾಡಿ ನನೆವ ಭಕ್ತರ ಮನೆಯ
ಬಿಂಕದಿ ಬಾಗಿಲ ಕಾಯ್ವ ಬಡ ದಾಸ ನಾನಯ್ಯ ೧
ಕಾಳಿದಾಸರ ಮನೆಯ ಕೀಳುದಾಸ ನಾನಯ್ಯ
ಆಳು ದಾಸನು ನಾನು ಮೂಳ ದಾಸ
ಫಾಲಾಕ್ಷಸಖ ನಿನ್ನ ಭಜಿಪ ಭಕ್ತರ ಮನೆಯ
ಅಳಿನಾಳಿನ ದಾಸ ಅಡಿದಾಸ ನಾನಯ್ಯ ೨
ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ
ಕುಲವಿಲ್ಲದ ದಾಸ ಕುರುಬ ದಾಸ
ಛಲದಿ ನಿನ್ನ ಭಜಿಸುವರ ಮನೆಯ ಮಾದಿಗ ದಾಸ
ಸಲೆ ಮುಕ್ತಿ ಪಾಲಿಸೆನ್ನೊಡೆಯ ಕೇಶವನೆ ೩

೨೫ ರಾಗ ಮುಖಾರಿ—ಝಂಪೆತಾಳ

ಪೂರ್ವ ಜನ್ಮದಲಿ ನಾ ಮಾಡಿದ ಕರ್ಮದಿಂ
ಉರ್ವಿಯೊಳು ಜನಿಸಿದೆನೊ ಕೃಷ್ಣ ಪ

ಕಾರುಣ್ಯನಿಧಿ ಎನ್ನ ಕಾಯಬೇಕಯ್ಯ ಹರಿ
ವಾರಿಜನಾಭನೆ ಮುದ್ದುಕೃಷ್ಣ ಪ.

ಪುಟ್ಟಿದಂದಿನಾರಭ್ಯ ಸುಖವೆಂಬುವುದನರಿಯೆ
ಕಷ್ಟಪಟ್ಟೆನು ಕೇಳೊ ಕೃಷ್ಣ
ತೊಟ್ಟಿಲ ಶಿಶು ತಾಯ್ಗೆ ಬಾಯ್ಬಿಟ್ಟ ತೆರನಂತೆ ಕಂ
ಗೆಟ್ಟು ಶೋಕಿಪೆನೊ ಕೃಷ್ಣ
ಮುಟ್ಟಲೆಮ್ಮರು ಎನ್ನ ಬಂಧುಗಳು ಕಂಡರೆ
ಅಟ್ಟಿ ಬಡಿವುತಲಿಹರೊ ಕೃಷ್ಣ
ದಟ್ಟ ದಾರಿದ್ರ್ಯವನು ಪರಿಹರಿಸದಿದ್ದರೆ
ಮುಟ್ಟುವುದು ದೂರು ನಿನಗೆ ಕೃಷ್ಣ ೧

ಕಾಸಿನಾ ಆಸೆಯಲಿ ಬಯಸಿ ಬಹು ದಿನದಿಂದ
ಘಾಸಿಪಟ್ಟೆನು ನಾನು ಕೃಷ್ಣ
ಈ ಶರೀರವನಾಂತು ಕಷ್ಟಪಟ್ಟೆನು ಬಿಡದೆ
ನೀ ಸಲಹಬೇಕಯ್ಯ ಕೃಷ್ಣ
ಹೇಸಿಕೆಯಾಗಿರ್ಪ ಸಂಸಾರವನು ಮಾಯಾ
ಪಾಶದೊಳು ಬಿಗಿವರೇ ಕೃಷ್ಣ
ಘಾಸಿಯನು ಮಾಡದೆ ದೋಷವನು ಪರಿಹರಿಸೊ
ಸಾಸಿರನಾಮದ ಮುದ್ದುಕೃಷ್ಣ ೨

ಲೋಕದೊಳು ಎನ್ನಂಥ ಪಾಪಿಗಳು ಉಂಟೆಂದು
ನೀ ಕೇಳಿ ಬಲ್ಲೆಯಾ ಕೃಷ್ಣ
ನಾಕೇಳು ಎನಗೊಂದು ಗತಿಯ ತೋರಿಸಿ ಸದ್ವಿ
ವೇಕಿಯನು ಮಾಡಯ್ಯ ಕೃಷ್ಣ
ರಾಕೇಂದುಮುಖಿ ದ್ರೌಪದಿಯ ಮಾನವನು ಕಾಯ್ದು
ಆಕೆಗಕ್ಷಯವಿತ್ತೆ ಕೃಷ್ಣ
ಪಿನಾಕಿಯ ಸಖ ಉಡುಪಿ ಆದಿಕೇಶವರಾಯ
ಸಾಕಾರ ಮೂರುತಿಯೆ ಕೃಷ್ಣ ೩

೨೬ ರಾಗ ಕೇದಾರಗೌಳ—ಅಟತಾಳ

ನೀನುಪೇಕ್ಷೆಯ ಮಾಡೆ ಬೇರೆ ಗತಿಯಾರೆನಗೆ
ನಿಗಮಗೋಚರ ಮುಕುಂದ ಪ

ಗಾನರಸಲೋಲ ಆಗಮಶೀಲ ಭಕ್ತ ಪರಿ
ಪಾಲ ಗೋಪಾಲಬಾಲ ಅ

ಜಪತಪಾನುಷ್ಠಾನ ಜಪಿತನಂದೆನಿಸುವೆನೆ
ಜಾಣತನವೆನ್ನೊಳಿಲ್ಲ
ಅಪರಿಮಿತ ಕರ್ಮವನು ಅನುಸರಿಸಿ ನಡೆಯುವೆನೆ
ನಿಪುಣತ್ವ ಮೊದಲೆ ಇಲ್ಲ
ಗುಪಿತದಿಂ ದಾನಧರ್ಮವನು ನಾ ಮಾಡುವೆನೆ
ಅಪರಿಮಿತ ಧನವು ಇಲ್ಲ
*ರಪಣ ನಿಪುಣತ್ವ ವೊಂದಿಲ್ಲದಾ ಕೃಪಣನಿಗೆ
ಸುಪವಿತ್ರ ನೀನೆ ಅಲ್ಲದಿಲ್ಲ ೧

ಆನೆ ನೊಸಳೆಗೆ ಸಿಲುಕಿ ಅರೆಬಾಯಿ ಬಿಡುತಿರಲು
ಮೌನದಿಂ ಬಂದು ಕಾಯ್ದೆ
ಏ ನಾರಗಾ ಎಂದಜಮಿಳಗೆ ಮುಕ್ತಿಯನು
ನೀನೊಲಿದು ಕೃಪೆ ಮಾಡಿದೆ
ಹಾನಿಯಿಲ್ಲದ ಪದವಿ ನೀನಿತ್ತು ಧ್ರುವಗೆ ಕಡು
ದೀನತ್ವವನು ಬಿಡಿಸಿದೆ
ದಾನವಾಂತಕ ಸಕಲ ದಿವಿಜ ಮುನಿವಂದ್ಯ ಅಭಿ
ಮಾನಿ ಎನ್ನನು ಸಲಹದೇ ಬರಿದೆ ೨

ಈಷಣತ್ರಯದ ಬಯಲಾಸೆಯಲಿ ಭ್ರಮೆಗೊಂಡು
ಬೇಸರದಿ ಮನದಿ ನೊಂದು
ಹೇಸಿಕೆಯ ಸಂಸಾರ ಸಾಗರದಿ ಮುಳುಗಿ ಬಹು
ಘಾಸಿ ಪಡಲಾರೆನಿಂದು

* ಆಯುಧ—ಸಾಧನ

ಮೋಸವಿಲ್ಲದೆ ಯಮನ ಪಾಶವನು ಪರಿವುದಕೆ
ಕೌಶಲವ ತೋರಿ ಇಂದು
ದಾಸನೆಂದೆನಿಸಿ ಡಂಗುರವ ಹೊಯಿಸಿದೆಯೊ ನೆಲೆ
ಯಾದಿ ಕೇಶವನೆ ಹರಿಯೆ-ಧೊರೆಯೇ ೩

೨೭ ರಾಗ ನಾದನಾಮಕ್ರಿಯ—ಏಕತಾಳ

ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು
ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ ಪ
ವೇದ ಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ
ಬೋಧನೆಯ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೧
ಚಂಡಭಟರಾಗಿ ನಡೆದು ಕತ್ತಿ ಢಾಲು ಕೈಲಿ ಹಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೨
ಅಂಗಡಿಗಳನ್ನೆ ಹೂಡಿ ವ್ಯಂಗ ಮಾತುಗಳಾಡಿ
ಭಂಗ ಬಿದ್ದು ಗಳಿಸುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೩
ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮಮಾಡಿ
ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೪
ಬೆಲ್ಲದಂತೆ ಮಾತನಾಡಿ ಎಲ್ಲರನು ಮರುಳು ಮಾಡಿ
ಸುಳ್ಳು ಬೊಗಳಿ ತಿಂಬುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೫
ಕೊಟ್ಟಣವ ಕುಟ್ಟಿಕೊಂಡು ಕಟ್ಟಿಗೆಯ ಹೊತ್ತುಕೊಂಡು
ಕಷ್ಟ ಮಾಡಿ ತಿಂಬುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೬
ತಾಳ ದಂಡಿಗೆ ಶ್ರುತಿ ಮೇಳ ತಂಬೂರಿಗೊಂಡು
ಸೂಳೆಯಂತೆ ಕುಣಿವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೭
ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಭೈರಾಗಿ
ನಾನಾ ವೇಷಗಳೆಲ್ಲ ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೮
ಹಳ್ಳದಲ್ಲಿ ಕುಳಿತುಕೊಂಡು ಕಲ್ಲು ದೊಣ್ಣೆ ಹಿಡಿದುಕೊಂಡು
ಕಳ್ಳತನವ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೯

ಒಂದಣ ಪಲ್ಲಕ್ಕಿ ಏರಿ ಮಂದಿ ಮಂಬರೆಲ್ಲ ಕೂಡಿ
ಚಂದದಿಂದ ಮೆರೆವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ೧೦
ಉನ್ನಂತ ನೆಲೆಯಾದಿ ಕೇಶವನ ಧ್ಯಾನವನ್ನು
ಮನ ಮುಟ್ಟಿ ಮಾಡುವುದು ಮುಕ್ತಿಗಾಗಿ–ಆನಂದಕಾಗಿ ೧೧

## ೨೮. ಕೇಶವನಾಮ

ಸುವ್ವಿ ಮಟ್ಟು

ಸುವ್ವಿ ಕೇಶವಾದಿ ಸುವ್ವಿ ಸುವ್ವಿ ಶ್ರೀ ಕೃಷ್ಣ ಸುವ್ವಿ
ಕೇಶವಾದಿ ಕೃಷ್ಣ ಸುವ್ವಿ ಸುವ್ವಿ ಲಾಲಿ ಪ
ಈಶ ನಿಮ್ಮ ಪಾದ ಭಜನೆ ತೋಷದಿಂದ (ಆಸೆಯಿಂದ) ಮಾಡುವೆನು
ದೋಷ ರಾಸಿ ನಾಶಮಾಡೊ ಶ್ರೀಶ ಕೇಶವ ೧
ಶರಣು ಹೊಕ್ಕೆನಯ್ಯ ಎನ್ನ ಮರಣ ಸಮಯದಲ್ಲಿ ನಿನ್ನ
ಚರಣ ಸ್ಮರಣೆ ಕರುಣಿಸಯ್ಯ ನಾರಾಯಣ ೨
ಶೋಧಿಸೆನ್ನ ಮನದ (ಭವದ) ಕಲುಷ ಬೋಧಿಸಯ್ಯ ಜ್ಞಾನವೆನಗೆ
ಬಾಧಿಸುವ ಯಮನ ಬಾಧೆ ಬಿಡಿಸೊ ಮಾಧವ ೩
ಹಿಂದನೇಕ ಯೋನಿಗಳಲ್ಲಿ ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸೊ ತಂದೆ ಗೋವಿಂದ ೪
ಭ್ರಷ್ಟನೆನಿಸಬೇಡ ಕೃಷ್ಣ ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಡನೆ ಇಟ್ಟು ಕಷ್ಟ ಬಿಡಿಸೊ ವಿಷ್ಣುವೆ ೫
ಮದನನಯ್ಯ ನಿನ್ನ ಮಹಿಮೆ ವದನದಲ್ಲಿ ನುಡಿಯುವಂತೆ
ಹೃದಯದಲ್ಲಿ ಒದಗಿಸಯ್ಯ ಮಧು-ಸೂಧನ ೬
ಕವಿದುಕೊಂಡು ಇರುವ ಪಾಪ ಸವೆದು ಪೋಗುವಂತೆ ಮಾಡೊ
ಜವನ ಬಾಧೆಯನ್ನು ಬಿಡಿಸೊ ತ್ರಿ-ವಿಕ್ರಮ ೭
ಕಾಮ ಜನಕ ನಿನ್ನ ನಾಮ ಪ್ರೇಮದಿಂದ ಪಾಡುವಂಥ
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನ ೮
ಮೊದಲು ನಿನ್ನ ಪಾದಪೂಜೆ ಒದಗುವಂತೆ ಮಾಡೊ ಎನ್ನ
ಹೃದಯದೊಳಗೆ ಸದನಮಾಡಿ ಮುದದಿ ಶ್ರೀಧರ ೯

ಹುಸಿಯನಾಡಿ ಹೊಟ್ಟೆ ಹೊರೆವ ವಿಷಯದಲ್ಲಿ ರಸಿಕನಾದೆ
ಹುಸಿಗೆ ಹಾಕದಿರೋ ಎನ್ನ **ಹೃಷೀಕೇಶನೆ** ೧೦

ಕಾಮ ಕ್ರೋಧವನ್ನು ಬಿಡಿಸೊ ನಾಮ ಜಿಹ್ವೆಯೊಳಗೆ ನುಡಿಸೊ
ಶ್ರೀ ಮಹಾನುಭಾವನಾದ **ದಾಮೋದರ** ೧೧

ಅಬ್ಧಿಯೊಳಗೆ ಬಿದ್ದು ನಾನು ಒದ್ದುಕೊಂಬೆನಯ್ಯ ಭವದಿ
ಗೆದ್ದು ಬರುವ ಬುದ್ಧಿ ತೋರೊ **ಪದ್ಮನಾಭನೆ** ೧೨

ಪಂಕಜಾಕ್ಷ ನೀನು ಎನ್ನ ಸಂಕು ಬುದ್ಧಿ ಬಿಡಿಸಿ ನಿನ್ನ
ಕಿಂಕರನ್ನ ಮಾಡಿಕೊಳ್ಳೊ **ಸಂಕರ್ಷಣ** ೧೩

ಏಸುಜನ್ಮ ಬಂದರೇನೋ ದಾಸನಾಗಲಿಲ್ಲ (ನಲ್ಲನೇನೊ ಪಾ) ನಾನು
ಘಾಸಿ ಮಾಡದಿರು ಇನ್ನು **ವಾಸುದೇವನೆ** ೧೪

ಬುದ್ಧಿಶೂನ್ಯನಾಗಿ ನಿನಗೆ ಕದ್ದ ಕಳ್ಳನಾದೆ ನಾನು
ತಿದ್ದಿ ಹೃದಯ ಶುದ್ಧಿ ಮಾಡೋ **ಪ್ರದ್ಯುಮ್ನನೆ** ೧೫

ಜನನಿ ಜನಕ ನೀನೆಯೆಂದು ನೆನೆವೆ ನಿನ್ನ ದೀನಬಂಧು
ಎನಗೆ ಮುಕ್ತಿ ಪಾಲಿಸಿಂದು **ಅನಿ-ರುದ್ಧನೆ** ೧೬

ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡೊ ನೇಮ
ಇರಿಸು ಚರಣದಲ್ಲಿ ಪ್ರೇಮ **ಪುರುಷೋತ್ತಮ** ೧೭

ಸಾಧು ಸಂಗ ಕೊಟ್ಟು ನಿನ್ನ ಪಾದ ಭಜಕನೆನಿಸು ಮುನ್ನ
ಭೇದ ಮಾಡದಿರು ಎನ್ನ ಶ್ರೀ **ಅಧೋಕ್ಷಜ** ೧೮

**ಚಾರುಚರಣ** ತೋರಿ ಎನಗೆ ಪಾರುಗಾಣಿಸಯ್ಯ ಕೊನೆಗೆ
ಭಾರ ಹಾಕಿ ಇರುವೆ ನಿನಗೆ **ನಾರಸಿಂಹನೆ** ೧೯

ಸಂಚಿತಾರ್ಥ ಪಾಪಗಳನು ಕಿಂಚಿತ್ತಾದರುಳಿಯದಂತೆ
ಮುಂಚಿತಾಗಿ ಕಳೆಯಬೇಕೊ ಸ್ವಾಮಿ **ಅಚ್ಯುತ** ೨೦

ಜ್ಞಾನ ಭಕ್ತಿ ಕೊಟ್ಟು ನಿನ್ನ ಧ್ಯಾನದಲ್ಲಿ ಇಟ್ಟು ಎನ್ನ
ಹೀನಬುದ್ಧಿ ಬಿಡಿಸೊ ಮುನ್ನ ಶ್ರೀ **ಜನಾರ್ಧನ** ೨೧

ಜಪತಪಾನುಷ್ಠಾನವನ್ನು ಒಪ್ಪುವಂತೆ ಮಾಡಲಿಲ್ಲ
ತಪ್ಪು ಕೋಟಿ ಕ್ಷಮಿಸಬೇಕೊ **ಉ-ಪೇಂದ್ರನೆ** ೨೨

ಮೊರೆಯ ಇಡುವೆನಯ್ಯ ನಿನಗೆ ತ್ವರದಿ ಭವವ ನೆರೆಯ ಬಿಡಿಸೊ
ಇರಿಸೊ ಭಕ್ತರೊಳಗೆ ಪರಮಪುರುಷ ಶ್ರೀ ಹರೇ ೨೩
ಪುಟ್ಟಿಸಲೇ ಬೇಡವಿನ್ನು ಪುಟ್ಟಿಸಿದಕೆ ಪಾಲಿಸಿನ್ನು
ಇಷ್ಟು ಮಾತ್ರ ಬೇಡಿಕೊಂಬೆ ಶ್ರೀ ಕೃಷ್ಣನೆ ೨೪
ಸತ್ಯವಾದೀ ನಾಮಗಳನು ನಿತ್ಯದಲ್ಲಿ ಪಠಿಸುವರನು
ಅರ್ಥಿಯಿಂದ ಸಲಹುತಿಹನು ಕರ್ತೃ ಕೇಶವ ೨೫
ಮರೆತುಬಿಡದೆ ಹರಿಯನಾಮ ಬರೆದು ಓದಿ ಕೇಳುವರಿಗೆ
ಕರೆದು ಕೊಡುವ ಮುಕ್ತಿ ವೇಲಾಪುರದ ಕೇಶವ ೨೬

೩೯ ರಾಗ ಸೌರಾಷ್ಟ್ರ—ಅಟತಾಳ

ವರಕವಿಗಳ ಮುಂದೆ ನರಕವಿಗಳ ವಿದ್ಯೆ ಮಾಡಬಾರದು ಪ
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು ಅ.
ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು, ಬಹು
ಕೋಪಿಗಳಿದ್ದಲ್ಲಿ ಅನುಭವಗೋಷ್ಟಿಯ ಆಡಬಾರದು ೧
ಅಡಿಸತ್ತ ಮಡಕೆಗೆ ಜೋಡಿಸಿ ಒಲೆಗುಂಡು ಹೂಡಬಾರದು, ಬಹು
ಬಡತನ ಬಂದಾಗ ನಂಟರ ಬಾಗಿಲ ಸೇರಬಾರದು ೨
ಹರಿಯ ನಿಂದಿಸಿ ಹರ ಘನನೆಂದು ನರಕಕ್ಕೆ ಬೀಳಬಾರದು
ಪರರನ್ನು ಬೈದು ಪಾತಕಕ್ಕೆ ಮುನ್ನೊಳಗಾಗಬಾರದು ೩
ಮಡದಿಯ ನುಡಿಕೇಳಿ ಜಗಳಕೊಬ್ಬರ ಕೂಡೆ ಹೋಗಬಾರದು
ಬಾಯಿ—ಬಡಕರು ಇದ್ದಲ್ಲಿ ವಸ್ತಿ ಬಿಡಾರವ ಮಾಡಬಾರದು ೫
ಮುಂದೆ ಭಲಾಯೆಂದು ಹಿಂದೆ ನಿಂದಿಪರನ್ನು ಕೂಡಬಾರದು
ನಮ್ಮ ತಂದೆ ಬಾಡದಾದಿಕೇಶವನ ಸ್ಮರಣೆಯ ಬಿಡಬಾರದು ೬

೪೦ ರಾಗ ಆನಂದಭೈರವಿ—ಅಟತಾಳ

## ಲಾಲಿ

ಲಾಲಿ ಪಾವನಚರಣ ಲಾಲಿ ಅಘಹರಣ
ಲಾಲಿ ವೆಂಕಟರಮಣ ಲಲಿತ ಕಲ್ಯಾಣ ಪ

ವನಜಾಕ್ಷ ಮಾಧವ ವಸುದೇವತನಯ
ಸನಕಾದಿ ಮುನಿವಂದ್ಯ ಸಾಧುಜನಪ್ರಿಯ
ಇನಕೋಟಿ ಶತತೇಜ ಮುನಿಕಲ್ಪಭೂಜ
ಕನಕಾದ್ರಿನಿಲಯ ವೆಂಕಟರಾಯ ಜೀಯ ೧

ಜಗದೇಕನಾಯಕ ಜಲಜದಳನೇತ್ರ
ಖಗರಾಜವಾಹನ ಕಲ್ಯಾಣ ಚರಿತ
ಸಗರತನಯಾರ್ಚಿತ ಸನಕಾದಿ ವಿನುತ
ರಘುವಂಶ ಕುಲತಿಲಕ ರಮಣೀಯಗಾತ್ರ ೨

ನಂದಗೋಪ ಕುಮಾರ ನವನೀತ ಚೋರ
ಮಂದಾಕಿನೀ ಜನಕ ಮೋಹನಾಕಾರ
ಇಂದುಧರ ಸತಿ ವಿನುತ ವಿಶ್ವಸಂಚಾರ
ನಂದಗೋವಿಂದ ಮುಚುಕುಂದನುತಸಾರ ೩

ಪಕ್ಷಿವಾಹನ ವಿಷ್ಣು ಪಾಹಿ ಪರಮೇಶ
ರಕ್ಷಕೌಸ್ತುಭಭೂಷ ವೈಕುಂಠವಾಸ
ಅಕ್ಷಯ ಫಲದಾತ ಅಖಿಳ ಲೋಕೇಶ
ಲಕ್ಷಣ ಪರಿಪೂರ್ಣ ಲಕ್ಷ್ಮೀ ಪ್ರಾಣೇಶ ೪

ನರಮೃಗಾಕಾರಿ ಹಿರಣ್ಯಕ ವೈರಿ
ಕರಿರಾಜ ರಕ್ಷಕ ಕಾರುಣ್ಯ ಮೂರ್ತಿ
ಹರಿ ಆದಿಕೇಶವ ಗುರು ಅಪ್ರಮೇಯ
ಸಿರಿಧರ ಶೇಷಗಿರಿ ವರ ತಿಮ್ಮರಾಯ ೫

೩೧ ರಾಗ ಕೇದಾರಗೌಳ—ಆಟತಾಳ

ಅರಸಿನಂತೆ ಭಂಟನೋ ಹನುಮರಾಯ ಪ

ಅರಸಿನಂತೆ ಭಂಟ ತಾನೆಂಬುದನ್ನು
ಕುರುಹು ತೋರಿದ ಮೂಲೋಕದಿ ಹನುಮಂತ ಅ

ಒಡೆಯನಂಬುಧಿಯೊಳು ಹೊಕ್ಕು ದೈತ್ಯನ ಕೊಂದು
ತಡೆಯದೆ ಶ್ರುತಿಯುಜಗಿತ್ತನೆಂದು
ಸಡಗರದಿಂದ ಕಡಲ ದಾಂಟಿ ಮಹಿಜೆ ಪೇ
ರ್ಮುಡಿಯ ಮಾಣಿಕವ ರಾಘವಗಿತ್ತೆ ಹನುಮ ನೀ ೧

ಮಂದರಾಚಲ ಗೋವರ್ಧನಗಿರಿ ಲೀಲೆ
ಯಿಂದಲಿ ಹರಿ ನೆಗಹಿದನೆನುತ
ಸಿಂಧುಬಂಧನಕೆ ಸಮಸ್ತ ಪರ್ವತಗಳ
ತಂದು ನಳನ ಕೈಯಲಿಳುಹಿದೆ ಹನುಮ ನೀ ೨

ಸಿರಿಧರವರ ಕಾಗಿನೆಲೆಯಾದಿಕೇಶವ
ಸುರರಿಗಮೃತವನ್ನು ಎರೆದನಂದು
ವರಸಂಜೀವನವನು ತಂದು ಕಪಿಗಳ ಪ್ರಾಣ
ಕೆರೆದು ಶ್ರೀರಾಮ ದೂತನಾದ್ಯೋ ಹನುಮ ನೀ ೩

೩೨ ರಾಗ ಮುಖಾರಿ—ಝಂಪೆತಾಳ

ಹೂವ ತರುವರ ಮನೆಗೆ ಹುಲ್ಲು ತರುವೆ ಪ
ಆವ ಪರಿಯಲಿ ಕಾಯೊ ದೇವ ಚಿನ್ಮಯನೆ ಅ

ಈರೇಳು ಜನುಮದಿಂ ದಾಸನಾಗಿಹೆ ನಾನು
ಸೇರಿದೆನೊ ತವಶರಣರ ಸೇವೆಗೆ
ಘೋರ ದುರಿತಗಳೆಂಬ ವಾರಿಧಿಯ ಬತ್ತಿಸಿ
ನಾರಸಿಂಹನೆ ಕಾಯೊ ನಮ್ಮ ಕುಲಸ್ವಾಮಿ ೧

ರಂಗನಾಥನೆ ನಿನ್ನ ಡಿಂಗರಿಗನೋ ನಾನು
ಡಂಗುರವ ಹೊಯಿಸಯ್ಯ ದಾಸನೆಂದು
ಭಂಗಪಡಿಸದೆ ನೀನು ಶರಣರೊಳಗಿಂ ಬಿಟ್ಟು
ಗಂಗೆಜನಕನೆ ಕಾಯೊ ಚರಣಕ್ಕೆ ಶರಣು ೨

ಎಷ್ಟು ಮಾಡಲು ನಿನ್ನ ಭಂಟನೋ ವೈಷ್ಣವರ
ಹುಟ್ಟು ದಾಸಿಯ ಮಗನೊ ಪರದೇಶಿಯೊ
ಸೃಷ್ಟಿಗೊಡೆಯನೆ ನೆಲೆಯಾದಿಕೇಶವನೆ ಕೈ
ಬಿಟ್ಟೆಯಾದರೆ ನಿನಗೆ ಹರಿದಾಸರಾಣೆ ೩

೩೩ ರಾಗ ಮುಖಾರಿ—ತಾಳ

ಮುಂದೆ ದಯವಿರಲಿ ಶ್ರೀ ಹರಿಯೆ, ನೊಂದೆ ನಾನು ಪ

ನೊಂದೆ ನಾನು—ಸತ್ತು ಹುಟ್ಟುವ ಕೋಟಲೆಗಳಿಂದ
ನೊಂದೆ ನಾನು—ಅರಿಷಡ್ವರ್ಗದಾಟಗಳಿಂದ
ನೊಂದೆ ನಾನು -ಪಂಚೇಂದ್ರಿಯಂಗಳ ಬಯಕೆಯಿಂದ
ನೊಂದೆ ನಾನು ಶ್ರೀ ಹರಿಯೆನ್ನದೆ ಅ

ಹುಟ್ಟುತಲೆ ಜಾತ ಷೋಡಶವರ್ಗಗಳೆಂಬ
ಕಟ್ಟಳೆಯ ದಿನಗಳೊಳ್ ನಂಟರಿಷ್ಟರು ಕೂಡಿ
ತೊಟ್ಟಿಲೊಳು ಒರೆಸಿಟ್ಟು ಮುದ್ದಾಡಿ
ಕಟ್ಟಿ ಮುಂಜಿ ಮದುವೆಯಂ ಮಾಡಿ, ಉಂಡುಟ್ಟು
ಬಿಟ್ಟು ಪ್ರಾಣಂ ಪೋಗೆ ಪೆಣನೆಂದು ಮೂಲೆಯೊಳು
ಗಟ್ಟಿ ಕುಳ್ಳಿರಿಸಿ ಹೊಟ್ಟೆಯ ಹೊಯ್ದುಕೊಂಡಳುತ
ಸುಟ್ಟು ಸುಡುಗಾಡಿನಲಿ ಪಿಂಡಗಳನಿಕ್ಕಿ ಬಲು
ಕಟ್ಟಳೆಯ ಕಾಣಿಸಿದರಯ್ಯ ಹರಿಯೆ ೧

ಎಲುವಗಳುವಂ ಮಾಡಿ ಬಲು ನರಗಳಂ ಬಿಗಿದು
ಚೆಲುವ ತೊಗಲಂ ಪೊದಿಸಿ ಮಲ ಮಾಂಸವಂ ತುಂಬಿ
ಹೊಲೆಗೂಡಿನಲ್ಲಿರಿಸಿದಾ ಬಳಿಕ
ತಲೆಹುಳುಕ ನಾಯಂತೆ ಮನೆಮನೆಯ ತಿರುತಿರುಗಿ
ಕಳವು ಹಾದರ ಪಂಚ ಮಹಾಪಾತಕಗಳಂ ಮಾಡಿ
ನೆಲೆಯಿಲ್ಲದಲೆ ನರಕದೊಳಗಾಡಿ ಮುಳುಗಿದೆನು
ಒಲಿದು ರಕ್ಷಿಸು ನಾಗವೈರಿ ವಾಹನನೆ
ನಳಿನಲೋಚನನೆ ನೀನನ್ನ ಬಿಡದೆ ೨

ಒಂದು ಕ್ಷಣ ವಾಯು ಬರೆ ದುರ್ಗಂಧ ಹೇಸುವುದ
ತಂದೆಯೊಡಲೊಳ್ ಮೂರು ಮಾಸ ತಾಯುದರದಲ್ಲಿ
ನಿಂದು ನವಮಾಸಂಗಳಲ್ಲಿ
ಒಂದಾಗಿ ಮಲಮೂತ್ರದಲಿ ಕುದಿದು ಕುದಿದು

ಬಂದೆ ಎಂಭತ್ನಾಲ್ಕು ಲಕ್ಷ ಯೋನಿಗಳಲ್ಲಿ
ನೊಂದೆ ಮುನ್ನೂರ ಅರವತ್ತು ಬೇನೆಗಳಿಂದ
ಒಂದು ಕ್ಷಣವೂ ಯಮನ ಬಾಧೆ ತಾಳಲಾರೆ
ಹಿಂದಿಟ್ಟುಕೋ ಮುರಾರೆ ೩

ಹಲವು ಜನುಮದಿ ತಾಯಿ ಎನಗಿತ್ತ ಮೊಲೆಹಾಲು
ನಲಿದು ಉಂಬಾಗ ಹನಿ ನೆಲಕೆ ಬಿದ್ದುದು ಕೂಡಿ
ಅಳೆಯೆ ಕ್ಷೀರಾಂಬುಧಿಗೆ ಇಮ್ಮಿಗಿಲೊ
ಹಲವು ಬಗೆಯಲಿ ಅಳುವ ಅಶ್ರುಜಲವನು ಕೂಡಿ
ಅಳೆದು ನೋಡಿದರೆ ಲವಣಾರ್ಣವಕೆ ಮೂರುಮಡಿ
ಎಲುವುಗಳ ಕೂಡಿದರೆ ಮೇರುವಿಗೆ ನಾಲ್ಕುಮಡಿ
ಸುಲಿದು ಚರ್ಮವ ಹಾಸಿದರೆ ಧರೆಗೆ ಐದುಮಡಿ
ನೆಲೆಯಾವುದೀ ದೇಹಕೆ ೪

ತಂದೆತಾಯಿಗಳಾರು ಅಂದಿದ್ದ ಊರೇನು
ಮಂದಿರದೆಲ್ಲಿ ತಾ ತಂದ ಸತಿಸುತರಾರು
ಬಂದಂಥ ಸುಖದುಃಖವೇನು
ಹಿಂದೆನ್ನ ಕುಲಗೋತ್ರ ನಾಮಂಗಳೆನಗೇನು
ಅಂದು ಕೊಂದವರಾರು ಇಂದು ಕಾಯ್ದವರಾರು
ಕಂದ ಬಾರೆಂದು ಲಾಲಿಸಿದವರ ನಾ ಕಾಣೆ
ತಂದೆ ನೆಲೆಯಾದಿಕೇಶವನೆ ನಿನ್ನಯ ಪಾದ
ದ್ವಂದ್ವವನು ಬಿಡೆನು ಬಿಡೆನೊ ೫

೩೪ ರಾಗ ಹಿಂದೂಸ್ಥಾನಿ ಕಾಪಿ—ಏಕತಾಳ

ದಾಸನಾಗೊ ಭವಪಾಶ ನೀಗೋ, ವಿ ಶೇಷನಾಗೊ ಪ
ಏಸು ಕಾಯಂಗಳ ಕಳೆದು ಎಂಭತ್ನಾಲ್ಕುಲಕ್ಷ ಜೀವ
ರಾಸಿಯನ್ನು ದಾಟ ಬಂದಿ, ಈ ಶರೀರ ತಾನಲ್ಲ-ತನ್ನದಲ್ಲ
ಆಸೆ ಥರವಲ್ಲ ಸ್ಥಿರವಲ್ಲ ಮುಂದೆ ಬಾಹೋದಲ್ಲ
ಆಶಾ ಕ್ಲೇಶ ದೋಷವೆಂಬ ಅಬ್ಧಿಯೊಳು ಮುಳುಗಿ ಯಮನ
ಪಾಶಕ್ಕೊಳಗಾಗದೆ ನಿರ್ದೋಷಿಯಾಗೋ, ಸಂತೋಷಿಯಾಗೊ ಅ.

ಕಾಶಿ ವಾರಣಾಸಿ ಕಂಚಿ ಕಾಳಹಸ್ತಿ ರಾಮೇಶ್ವರ
ಏಸುದೇಶ ತಿರುಗಿದರೆ ಬಾಹೋದೇನೋ ಅಲ್ಲಿ ಹೋದೇನೋ
ದೋಷನಾಶೆ ಕೃಷ್ಣವೇಣಿ ಗಂಗೆ ಗೋದಾವರಿ ಭವ
ನಾಶಿ ತುಂಗಭದ್ರೆ ಯಮುನೆ ವಾಸದಲ್ಲಿ ಉಪವಾಸದಲ್ಲಿ
ಮಾಸಲಾಗಿ ಮಿಂದು ಜಪ ತಪ ಹೋಮ ನೇಮಗಳ
ಏಸು ಬಾರಿ ಮಾಡಿದರು ಫಲವೇನು ಈ ಛಲವೇನು
ವಾಸುದೇವನೆಂಬ ಒಳಗಿಹ ಹಂಸನ ಸೇರಿ
ಲೇಸನುಂಡು ಮೋಸಗೊಳದೆ ಮುಕ್ತನಾಗೊ ನೀ ಶಕ್ತನಾಗೊ ೧

ಅತ್ತಲೋ ಇತ್ತಲೋ ಎತ್ತಲೋ ಈ ಸಂಸಾರ
ಬತ್ತಲೆಗೆ ಬತ್ತಲೆ ನಿತ್ಯವಲ್ಲ ಪರಿಮಿತಿಯಿಲ್ಲ
ಕತ್ತಲೆ ಕಳವಳದೊಳು ಕಾಣಬಾರದೆ ನೀನು
ಸತ್ಯವೆಂಬ ದಾರಿಯನ್ನು ಸೇರಲಿಲ್ಲ ಲೇಸು ದೊರಲಿಲ್ಲ
ಉತ್ತಮ ಅ ಉ ಮ ವೆಂಬ ಓಂಕಾರ ಬೀಜಾಕ್ಷರ
ಚಿತ್ತದಲಿ ಗ್ರಹಿಸು ನೀ ಬಿಡಬೇಡ ಬಿಟ್ಟು ಕೆಡಬೇಡ
ಹೊತ್ತಾರೊ ಬೈಗಾನೋ ಈಗಲೊ ಆಗಲೊ ಕಾಯ
ನಿತ್ಯವೆಂದು ಸ್ಥಿರವೆಂದು ನಂಬಬೇಡ ಈ ಡಂಭ ಬೇಡ ೨

ಆಯಿತೊ ಹೋಯಿತೊ ಏನಾಯಿತೊ ಈ ದೇಹಕ್ಕೆ
ತಾಯಿ ಯಾರೊ ಇನ್ನು ತಂದೆ ಯಾರೊ
ಮತ್ತೆ ಮಡದಿ ಯಾರೊ ಮಕ್ಕಳ್ಯಾರೊ
ಮಾಯದೊಳು ಸಿಲುಕಿ ಬಲು ಕಾಲದಿಂ ಶ್ರೀರಘು
ರಾಯನೆಂಬ ವಸ್ತುವಿನ ಸ್ಮರಣೆ ಬಿಟ್ಟು, ಭವದಿ ಮಮತೆಯಿಟ್ಟು
ನಾಯ ಬಾಯ ಅರಿವೆಯಂತೆ ನಾನಾ ಕೋಟೆಯೊಳು ಬಿದ್ದು
ಬಾಯ ಬಾಯ ಬಿಡುತಲಿ ಸಾಯ್ವದೇನೊ ನೀ ನೋಯ್ವದೇನೊ
ತ್ರಾಹಿ ತ್ರಾಹಿ ತ್ರಾಹಿಯೆಂದು ತ್ರೈಲೋಕ್ಯದೊಡೆಯ ಪುಣ್ಯ
ದಾಯಕನ ಹೊಂದಿ ನೀ ಧನ್ಯನಾಗೊ, ಮತ್ತೆ ಮಾನ್ಯನಾಗೊ ೩

ಅಂದಿಗೊ ಇಂದಿಗೊ ಒಮ್ಮೆ ಸಿರಿಕಮಲೇಶನನ್ನು
ಒಂದು ಬಾರಿ ಅರುಹಿಂದ ನೆನೆಯಲಿಲ್ಲ ಮನ ದಣಿಯಲಿಲ್ಲ
ಬಂದು ಬಂದು ಭ್ರಮೆಗೊಂಡು ಮಾಯಾ ಮೋಹಕ್ಕೆ ಸಿಕ್ಕಿ
ನೊಂದು ಬೆಂದು ಒಂದರಿಂದ ಉಳಿಯಲಿಲ್ಲ ಬಂಧ ಕಳೆಯಲಿಲ್ಲ
ಸಂದೇಹವ ಮಾಡದಿರು ಅರಿವು ಎಂಬ ದೀಪವಿಟ್ಟು
ಇಂದು ಕಂಡ್ಯ ದೇಹದಲ್ಲಿ ಪಿಂಡಾಂಡ, ಹಾಗೆ ಬ್ರಹ್ಮಾಂಡ
ಇಂದು ಹರಿಯ ಧ್ಯಾನವನ್ನು ಮಾಡಿ ವಿವೇಕದಿ ಮು
ಕುಂದನಿಂದ ಮುಕುತಿಯ ಬೇಡು ಕಂಡ್ಯ, ನೀ ನೋಡು ಕಂಡ್ಯ ೨
ನೂರು ಬಾರಿ ಶರಣುಮಾಡಿ ನೀರಮುಳುಗಲ್ಯಾಕೆ ಪರ
ನಾರಿಯರ ನೋಟಕೆ ಗುರಿಯುಮಾಡಿದಿ, ಮನ ಸೆರೆಯಮಾಡಿದಿ
ನೋರೆಯೊಳು ಸುರೆತುಂಬಿ ಮೇಲೆ ಹುವ್ವಿನ ಹಾರಹಾಕಿ
ಗೀರುಗಂಧ ಅಕ್ಷತೆಯ ಧರಿಸಿದಂತೆ, ನೀ ಮೆರೆಸಿದಂತೆ
ಗಾರುಡಿಯ ಮತ ಬಿಟ್ಟು ನಾದಬ್ರಹ್ಮನ ಪಿಡಿದು
ಸಾರಿಸೂರಿ ಮುಕ್ತಿಯನ್ನು ಶಮನದಿಂದ, ಮತ್ತೆ ಸುಮನದಿಂದ
ನಾರಾಯಣ ಅಚ್ಯುತಾನಂತಾದಿಕೇಶವನ್ನ
ನಾರಾಮೃತವನುಂಡು ಸುಖಿಸೊ ಲಂಡಜೀವವೆ, ಎಲೊ ಭಂಡಜೀವವೆ ೩

೩೪ ರಾಗ ಕಾಂಬೋದಿ—ಝಂಪೆತಾಳ

ಡಿಂಬದೊಳಗಿರುವ ಪ್ರಾಣ ಕಂಭ ಸೂತ್ರ ಬೊಂಬೆಯಂತೆ
ಎಂದಿಗಿದ್ದರೊಂದು ದಿನ ಸಾವು ತಪ್ಪದು ಪ
ಹುಟ್ಟುತೇನೂ ತಾರಲಿಲ್ಲ ಸಾಯುತೇನೂ ಒಯ್ಯಲಿಲ್ಲ
ಸುಟ್ಟು ಸುಟ್ಟು ಸುಣ್ಣದ್ದರಳು ಆಯಿತೀ ದೇಹ
ಹೊಟ್ಟೆ ಬಲು ಕೆಟ್ಟದೆಂದು ಎಷ್ಟು ಕಷ್ಟ ಮಾಡಿದಾಗ್ಯೂ
ಬಿಟ್ಟು ಹೋಗುವಾಗ ಗೇಣು ಬಟ್ಟೆಗಾಣದು ೧
ಹೆಣ್ಣು ಹೊನ್ನು ಮಣ್ಣು ಮೂರು ತನ್ನಲಿದ್ದೂ ಉಣ್ಣಲಿಲ್ಲ
ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದೊ
ಅನ್ನ ವಸ್ತ್ರ ಭೋಗಿಯಾಗಿ ತನ್ನ ಸುಖವ ಕಾಣಲಿಲ್ಲ
ಮಣ್ಣುಪಾಲು ಆದಮೇಲೆ ಆರಿಗಾಗೋದೊ ೨

ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು
ಅಳ್ಳಂಚೀರ (?) ಬೊಂಬೆಯಂತೆ ಆಡಿಹೋಯಿತು
ಹಳ್ಳ ಹರಿದ ಮೇಲೆ ಗುಳ್ಳೆ ಉರುಳಿತಲ್ಲೋ ನೀರಮೇಲೆ
ಉಳ್ಳೆ ಪೊರೆಯಂತೆ ಕಾಣೊ ಸಂಸಾರದ ಆಟ ೩

ಹತ್ತು ಎಂಟು ಲಕ್ಷ ಗಳಿಸಿ ಮತ್ತೆ ಸಾಲದೆಂತು ಪರರ
ಅರ್ಥಕಾಗಿ ಆನೆಬಟ್ಟನ್ಯಾಯ ಮಾಡುವರು
ಬಿತ್ತಿ ಬೆಳಸು ತನ್ನದೆಂಬೊ ವ್ಯರ್ಥ ಚಿಂತೆಯನ್ನು ಮಾಡಿ
ಸತ್ತುಹೋದಮೇಲೆ ಅರ್ಥ ಯಾರಿಗಾಗೋದೊ ೪

ವಾರ್ತೆ ಕೀರ್ತಿ ಯೆಂಬೊವೆರಡು ಬಂದವಯ್ಯ ಸತ್ತಮೇಲೆ
ವಸ್ತು ಪ್ರಾಣನಾಯಕನು ಎಲ್ಲಿ ದೊರಕ್ಯಾನು
ಕರ್ತೃ ಕಾಗಿನೆಲೆಯಾದಿ ಕೇಶವನ್ನ ಚರಣಕಮಲ
ನಿತ್ಯದಲ್ಲಿ ಭಜಿಸಿ ಸುಖಿಯಾಗಿ ಬಾಳಿಲೊ ೧

೩೭ ರಾಗ ಪಂತುವರಾಳಿ—ಅಟತಾಳ

ಕುಲಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರು ಬಲ್ಲಿರಾ ಪ

ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ
ಅಟ್ಟು ಉಣ್ಣದ ವಸ್ತುಗಳಿಲ್ಲ
ಗುಟ್ಟು ಕಾಣಿಸಬಂತು ಹಿರಿದೇನು ಕಿರಿದೇನು
ನೆಟ್ಟನ ಸರ್ವಜ್ಞನ ನೆನೆಕಂಡ್ಯ ಮನುಜ ೧

ಜಲವೆ ಸಕಲ ಕುಲಕ್ಕೆ ತಾಯಲ್ಲವೆ
ಜಲದ ಕುಲವನೇನಾದರು ಬಲ್ಲಿರ
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲವೀ ದೇಹ
ನೆಲೆಯನರಿತು ನೀ ನೆನೆಕಂಡ್ಯ ಮನುಜ ೨

ಹರಿಯೆ ಸರ್ವೋತ್ತಮ ಹರಿಯೆ ಸರ್ವೇಶ್ವರ
ಹರಿಮಯವೆಲ್ಲವನುತ ತಿಳದು
ಸಿರಿ ಕಾಗಿನೆಲೆಯಾದಿ ಕೇಶವರಾಯನ
ಚರಣಕಮಲವ ಕೀರ್ತಿಸುವನೆ ಕುಲಜ ೩

೩೭ ರಾಗ ಪಂತುವರಾಳಿ—ರೂಪಕತಾಳ

ನಾಕು ಸಾಕು ಮನುಜ ಸೇವೆಯು, ರಂಗಯ್ಯ ಇನ್ನು ಪ
ಸಾಕು ಸಾಕು ಮನುಜಸೇವೆ ಮಾಡಿ ದಣಿದು ನೊಂದೆ ನಾನು
ಬೇಕು ನಿನ್ನ ಪಾದಭಜನೆ ಕೊಟ್ಟು ಸಲಹೊ ರಂಗಯ್ಯ ಅ

ಹೊತ್ತಾರೆದ್ದು ಹೋಗಿ ಪರರ ಚಿತ್ತವೃತ್ತಿಯನ್ನು ತಿಳಿದು
ಹತ್ತಿರಿದ್ದು ಹಲವು ಕೆಲಸ ಭೃತ್ಯನಂತೆ ಮಾಡಿ ರಿಕ್ತ
ಹಸ್ತದಿಂದ ಮನೆಯ ಸೇರುವೆ, ಆಸೆಗಾಗಿ
ಮತ್ತೆ ಕಂಡ ಕಡೆಗೆ ತೊಲಗುವೆ, ಬಂದು ಊಟ
ರಾತ್ರಿಯಲ್ಲಿ ತಿಂದು ಒರಗುವ–ರಂಗಯ್ಯ ರಂಗ ೧

ಸ್ನಾನಸಂಧ್ಯಾನುಷ್ಠಾನ ನೇಮವೆಲ್ಲ ತೊರೆದುಬಿಟ್ಟು
ಹೀನನಾಗಿ ಕೆಟ್ಟ ಜನರ ಮನೆಗಳನ್ನು ತಿರುಗಿ ತಿರುಗಿ
ಶ್ವಾನನಂತೆ ದಿನವ ಕಳೆವೆನೊ, ದುರಾಸೆಯನ್ನು
ಮನದಲ್ಲಿಟ್ಟುಕೊಂಡು ಕುದಿವೆನೊ,
ಕೊನೆಗೂ ಎಳ್ಳು-ಕಾಳಿನಷ್ಟು ಸುಖವ ಕಾಣೆನೊ ರಂಗಯ್ಯ ರಂಗ ೨

ಒಡಲಿನಾಸೆಗಾಗಿ ನೊಣನು ತುಡುಕಿ ಬಿದ್ದು ಜೇನಿನೊಳಗೆ
ಮಿಡುಕುವಂತೆ ಬಾಯಿಬಿಡುವೆ ಬಿಸರುಹಾಕ್ಷನೆ
ಬಿಡಿಸು ಎನ್ನ ಪಾಶಬಂಧವ, ದೋಷದೂರ
ಕಾಗಿನೆಲೆಯಾದಿಕೇಶವ, ಕನಕದಾಸ
ನೊಡೆಯ ವೆಂಕಟಾದ್ರಿ ಮಾಧವ–ರಂಗಯ್ಯ ರಂಗ ೩

೩೮ ರಾಗ ಪೂರ್ವಿ—ಛಾಪುತಾಳ

ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ
ನಿತ್ಯ ಅನ್ನದಾನವಿರಲು ಭಯವು ಯಾತಕೆ ಪ

ತಾನು ಉಣ್ಣದೆ ಪರರಿಗಿಕ್ಕದ ಧನವಿದ್ದ್ಯಾತಕೆ
ಮಾನಿನಿಯ ತೊರೆದ ಮೇಲೆ ಭೋಗವ್ಯಾತಕೆ
ಜ್ಞಾನವಿಲ್ಲದೆ ನೂರುಕಾಲ ಬದುಕಲ್ಯಾತಕೆ
ಮಾನಹೀನನಾಗಿ ಬಾಳ್ವ ಮನುಜನ್ಯಾತಕೆ ೧

ಮಾತು ಕೇಳದೆ ಮಲೆತು ನಡೆವ ಮಕ್ಕಳ್ಯಾತಕೆ
ಪ್ರೀತಿಯಿಲ್ಲದೆ ಎಡೆಯಲಿಕ್ಕಿದ ಅನ್ನವ್ಯಾತಕೆ
ನೀತಿಯರಿತು ಸಮಯದಿರುವ ಭಂಟನ್ಯಾತಕೆ
ಸೋತು ಹೆಣ್ಣಿಗೆ ಹೆದರಿ ನಡೆವ ಪುರುಷನ್ಯಾತಕೆ ೨
ಸನ್ನೆಯರಿತು ನಡೆಯದಿರುವ ಸತಿಯಿದ್ಯಾತಕೆ
ಮನ್ನಣೆಂದ ನಡೆನದಿರುವ ಘೂರೆಯಿದ್ಯಾತಕೆ
ಮುನ್ನ ಕೊಟ್ಟು ಪಡೆಯದಿನ್ನು ಬಯಸಲ್ಯಾತಕೆ
ಪ್ರ-ಸನ್ನ' ಆದಿಕೇಶವನಲ್ಲದೆ ದೈವವ್ಯಾತಕೆ ೩

೩೯ ರಾಗ ಸುಖಾರಿ—ಝಂಪತಾಳ

ಜಗದ ಅಂತರ್ಯಾಮಿಯೆಂದೆಂದು ನಿಮ್ಮ
ನಿಗಮ ಸಾರುವ ಮಾತು ಪುಸಿಯೆ ರಂಗ ಪ
ಭೇದವಿಲ್ಲದೆ ಸಕಲ ಜೀವರನು ಪೊತ್ತಿಹಳು
ಭೂದೇವಿಯೆಂಬಾಕೆ ನಿಮ್ಮ ಅರ್ಧಾಂಗಿಯು
ನಾಥನವು ಸಿರಿಯು ಸಂಪತ್ತು ಭಾಗ್ಯವನೀವ
ಆ ದಯಾನಿಧಿ ಲಕ್ಷ್ಮಿ ನಿಮ್ಮ ಸತಿ ದೇವ ೧
ಎಂಭತ್ತು ನಾಲ್ಕು ಲಕ್ಷ ಜೀವರಾಸಿಗಳನ್ನು
ಬೊಂಬೆಗಳ ಮಾಡಿ ಭವದಿಂದಲಿ
ತುಂಬಿ ಕಲೆಗಳನೊತ್ತಿ ನೊಸಲ ಬರೆಹವ ಬರೆವ
ಅಂಬುಜೋದ್ಭವ ನಿಮ್ಮ ಹೆಮ್ಮಗನು ದೇವ ೨
ಸಕಲ ಜೀವರಾಸಿಗಳ ಕಲ್ಪಿಸುವ ಬೀಜ
ಸುಖದಿಂದ ಮಾಯಾಂಗನಯಕೊಡಲೊಳು
ಅಕ್ಕರದಿ ಪಿಂಡಾಂಡಗಳ ಕಟ್ಟಿ ಬಲಿಸುವ
ಮಕರಾಂಕನೆಂಬುವನು ನಿಮ್ಮ ಕಿರಿಮಗ ದೇವ ೩
ಜಂಗಮಸ್ಥಾವರಕ್ಕಾಧಾರವಾಗಿಹಳು
ಭಂಗಪಡುವ ಜನರ ಕರ್ಮವ ಕಳೆವಳು
ಹಿಂಗದೆ ಜಗವ ಪಾವನವ ಮಾಡುವ ಪುಣ್ಯ
ಗಂಗೆಯೆಂಬುವಳು ನಿಮ್ಮ ಮಗಳು ದೇವ ೪

ಇಂತು ಅಣುರೇಣು ತೃಣಕಾಷ್ಟದೊಳಗೆಲ್ಲ
ಸಂತೋಷವಾಗಿಹುದು ನಿಮ್ಮ ಸ್ಮರಣೆ
ಯಂತ್ರವಾಹಕನೆಂಬ ಬಿರುದು ಸಲ್ಲುವುದು ನಿಮಗೆ
ಚಿಂತಾಯಕನೆ ಕಾಗಿನೆಲೆಯಾದಿಕೇಶವನೆ ೨೪

೪೦ ರಾಗ ಮಧ್ಯಮಾವತಿ—ಆದಿ ತಾಳ

ಕುಲ ಕುಲ ಕುಲವೆನ್ನುತಿಹರು
ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ಪ

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ ೧

*ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ
ತೆಗೆದು ಪೂಸುವರು ದ್ವಿಜರೆಲ್ಲರು
ಒಗೆಯಿಂದ ನಾರಾಯಣನಾವ ಕುಲವಯ್ಯ
ಜಗವಲ್ಲಭನಾವ ಕುಲ ಪೇಳಿರಯ್ಯ ೨

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ ಮಹಾತ್ಮನು ನೆಲೆಯಾದಿಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ ೩

೪೧ ರಾಗ ಆನಂದಭೈರವಿ—ತಾಳ

ದೇವಿ ನಮ್ಮ ದ್ಯಾವರು ಬಂದರು
ಬನ್ನೀರೆ ನೋಡ ಬನ್ನೀರೆ

---

*ಭರದಿ ಮಾರ್ಜಾಲಿದಿಸ್ವೇದ ಉದಿಸಲಾಗಿ
ಬಿಡದೆ ಭೂಸುರರೆಲ್ಲ ಪೂಸಿಕೊಂಬುವರೊ
ಮೃಗಗಳ ಮೈಯಲ್ಲಿ ಕಸ್ತೂರಿಯಿರಲಾಗಿ
ನಗಧರನಿಗೆ ಸಮರ್ಪಣೆ ಮಾಡುವರೊ (ಅಧಿಕ ಪಾಠ)

ಬನ್ನೀರೆ ನೋಡ ಬನ್ನೀರೆ
ನೋಡ ಬನ್ನೀರೆ ನೋಡ ಬನ್ನೀರೆ ಪ
ಕೆಂಗಣ್ಣ ಮೀನ-ನಾಗಿ ನಮರಂಗ
ಗುಂಗಾಡಿ ಸೋಮನ ಕೊಂದಾನ್ರೀ
ಗುಂಗಾಡಿ ಸೋಮನ ಕೊಂದು
ವೇದವ ಬಂಗಾರದೊಡಲಗಿತ್ತಾನ್ರೀ ೧
ದೊಡ್ಡ ಮಡುವಿ-ನೊಳಗೆ ನಮರಂಗ
ಗುಡ್ಡವ ಹೊತುಕೊಂಡು ನಿಂತಾನ್ರೀ
ಗುಡ್ಡವ ಹೊತುಕೊಂಡು ನಿಂತ ಸುರರನ್ನು
ದೊಡ್ಡವರನ್ನು ಮಾಡ್ಯಾನ್ರೀ ೨
ಚನ್ನಕಾಡಿನ ಹಂದಿ-ಯಾಗಿ ನಮರಂಗ
ಚಿನ್ನದ ಕಣ್ಣನ ಕೊಂದಾನ್ರೀ
ಚಿನ್ನದ ಕಣ್ಣನ ಕೊಂದು ಭೂಮಿಯ
ವನ್ನಜಸಂಭವಗಿತ್ತಾನ್ರೀ ೩
ಸಿಟ್ಟಲಿ ಸಿಂಹ-ನಾಗಿ ನಮರಂಗ
ಹೊಟ್ಟೆಯ ಕರುಳ ಬಗೆದಾನ್ರೀ
ಹೊಟ್ಟೆಯ ಕರುಳ ಹಾರವ ಮಾಡಿ
ಪುಟ್ಟಗೆ ವರವ ಕೊಟ್ಟಾನ್ರೀ ೪
ಹುಡುಗ ಹಾರುವ-ನಾಗಿ ನಮರಂಗ
ಬೆಡಗಿಲಿ ಮುಗಿಲಿಗೆ ಬೆಳೆದಾನ್ರೀ
ಬೆಡಗಿಲಿ ಮುಗಿಲಿಗೆ ಬೆಳೆದು ಬಲಿಯನ್ನು
ಅಡಿಯಿಂದ ಪಾತಾಳಕ್ಕೊತ್ತಾನ್ರೀ ೫
ತಾಯ ಮಾತನು ಕೇಳಿ ಸಾಸಿರ ತೋಳಿನ
ಆವಿನ ಕಳ್ಳನ ಕೊಂದಾನ್ರೀ
ಆವಿನ ಕಳ್ಳನ ಕೊಂದು ಭೂಮಿಯ
ಆ-ವನಿಸುರರಿಗಿತ್ತಾನ್ರೀ ೬

ಪಿಂಗಳ ಕಣ್ಣಿನ ಕೋಂಗಗಳಾ ಕೂಡಿ
ಹಿಂಗಸೆ ಲಂಕೆಗೆ ಪೋದಾನಮ್ಮ
ಹಿಂಗಸ ಲಂಕೆಗೆ ಪೋಗಿ ನಮರಂಗ
ಹೆಂಗಸು ಕಳ್ಳನ ಕೊಂದಾನ ೭
ಕರಿಯ ಹೊಳೆ-ಯಲ್ಲಿ ತುರುಗಳ ಕಾಯುತ್ತ
ಉರಗನ ಮಡುವ ಧುಮುಕ್ಯಾನಮ್ಮ
ಉರಗನ ಹೆಡೆ ಮೇಲೆ ಹಾರಾರಿ ಕುಣಿವಾಗ
ನಾರೇರಿಗೊರವ ಕೊಟ್ಟ್ಯಾನಮ್ಮ ೮
ಭಂಡನಂದ-ದಿ ಪುಂಡರೀಕಾಕ್ಷನು
ಕಂಡಕಂಡಲ್ಲಿಗೆ ತಿರುಗ್ಯಾನಮ್ಮ
ಕಂಡಕಂಡಲ್ಲಿಗೆ ತಿರುಗಿ ತ್ರಿಪುರರ
ಹೆಂಡಿರನೆಲ್ಲ ಕೆಡಿಸ್ಯಾನಮ್ಮ ೯
ಚಲುವ ಹೆಂಡತಿ-ಕುದುರೆಯ ಮಾಡಿ
ಒಳ್ಳೆಯ ರಾವುತನಾದಾನಮ್ಮ
ಒಳ್ಳೆಯ ರಾವುತನಾಗಿ ನಮರಂಗ
ಡೊಳ್ಳ ಹೊಟ್ಟೆಯ ಮೇಲೊದ್ದಾನಮ್ಮ ೧೦
ಡೋಲಿನ ಮೇಲ್ಕಯ್ಯ ಭರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಟ್ಯಾನಮ್ಮ
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚಲುವ ಕನಕಪ್ಪ ಕುಣಿದಾನಮ್ಮ ೧೧

೪೨ ರಾಗ ಪಂತುವರಾಳಿ—ಆಟತಾಳ

ಯಮದೂತನಿನ್ನೇನು ಮಾಡುವನು ಕೇಳೊ ಪ
ಕಮಲಾಕ್ಷ ನಿನ್ನರಿಕೆಯುಳ್ಳ ಪಾತಕಿಗೆ

---

*ಬಿಂಕದ ಗೋವಳನಾಗಿ ನಮರಂಗ
ಡೊಂಕಿನ ಮುದುಕಿಯ ಕೂಡ್ಯಾನಮ್ಮ
ಡೊಂಕಿನ ಮುದುಕಿಯ ಕೂಡಿ
ಮಾವನ ಬಿಂಕವನೆಲ್ಲ ಮುರಿದಾನಮ್ಮ

ಮಂಡಲದೊಳಗೊಬ್ಬ ಜಾರಸ್ತ್ರೀಯಳು ತನ್ನ
ಗಂಡನರಿಕೆಯಿಂದ ವ್ಯಭಿಚಾರಗೈಯೆ
ಮಂಡಲ ಪತಿಯು ರೋಷಿಸಿ ಹಿಡಿದೆಳೆತಂದು
ಚಂಡಿಮಾಡಲು ಬೆದರುವಳೆ ಕೇಳೆಲೊ ಹರಿ ೧

ಕಳುವಿನ ಒಡವೆಯ ಒಡೆಯಗೆ ಪಾಲೀವ
ಕಳ್ಳಬಂಟ ಕನ್ನವ ಕೊರೆಯುತ್ತಿರ
ಕಳ್ಳವು ಮಾಡಿದನೆಂದು ಹಿಡಿದೆಳೆತಂದರೆ
ತಳವಾರನೇನು ಮಾಡುವನೊ ಕೇಳೆಲೊ ಹರಿ ೨

ಮನ ವಚನದಿ ಮಾಡಿದ ಪುಣ್ಯ ಪಾಪಗಳ
ನಿನಗರ್ಪಿಸುವೆ ಕಾಲಕಾಲದಲ್ಲಿ
ಘನ ಕೃಪಾಂಬುಧಿ ಕಾಗಿನೆಲೆಯಾದಿಕೇಶವನೆ
ಎನಗೊಬ್ಬರೇನು ಮಾಡುವರು ಕೇಳೆಲೊ ಹರಿ ೩

೪೩ ರಾಗ ಮುಖಾರಿ—ಅಟತಾಳ

ನನ್ನಿಂದ ನಾನೇ ಜನಿಸಿ ಬಂದೆನೆ ಕೃಷ್ಣ,
ಎನ್ನ ಸ್ವತಂತ್ರವು ಲೇಶವಿದ್ದರು ತೋರು ಪ

ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ,
ನಿನ್ನದು ತಪ್ಪೋ ಎನ್ನದು ತಪ್ಪೋ ಪರಮಾತ್ಮ ಅ

ಎಲುವುಗಳೆಲ್ಲ ಜೊತೆಮಾಡಿ ನರಗಳ
ಹೊಲೆ ಚರ್ಮವ ಹೊದಿಸಿ ದೇಹದೊಳು
ಮಲಮೂತ್ರಗಳನ್ನು ಬಲಿಸಿ ಹೃದಯದಲ್ಲಿ
ನೆಲಸಿ ಚೇತನವನಿತ್ತವ ನೀನಲ್ಲವೆ ೧

ಜನನಿಯ ಜಠರದಿ ನವಮಾಸವು
ಘನದಿ ನೀ ಪೋಷಿಸುತಿರೆ ನಾನು
ಜನಿಸಲಾರೆನು ಎನೆ ಜನಿಸೆಂದಿಕ್ಕಳದಿಂದ
ವನಜಾಕ್ಷ ನೂಕಿದವನು ನೀನಲ್ಲವೆ ೨

ಜನಿಸಿದಾರಭ್ಯ ಇಂದಿನ ಪರಿಯಂತ
ಘನಘನ ಪಾಪಸುಕರ್ಮಂಗಳ
ಮನಕೆ ಬೋಧಿಸಿ ಮಾಡಿಸಿ ಮುಂದೆ ಇದನೆಲ್ಲ
ಅನುಭವಿಸುವುದು ಜೀವನೊ ನೀನೊ ದೇವ ೩

ಅಂಧಕನ ಕೈಲಿ ಕೋಲಿತ್ತು ಕರೆದೊಯ್ವನು
ಮುಂದಡಿ ತಪ್ಪಿ ಗುಂಡಿಗೆ ಕೆಡಹಲು
ಅಂಧಕನ ತಪ್ಪೊ ಮುಂದಾಳಿನ ತಪ್ಪೊ
ಹಿಂದಾಡಬೇಡ ಎನ್ನಲ್ಲಿ ತಪ್ಪಿಲ್ಲವೊ (ಹಿಂದೋಡಬೇಡ ಪಾ) ೪

ಕಂದನ ಆಡಿಸುತ್ತಲಿರೆ ತಾಯಿ
ಕಂದ ಬಾವಿಯ ಇಂದಿ ನೋಡುತ್ತಿರೆ,
ಬಂದು ಬೇಗದಿ ಬಿಗಿದಪ್ಪದಿರಲು ಆ
ಕಂದನ ತಪ್ಪೊ ಮಾತೆಯ ತಪ್ಪೊ ಪರಮಾತ್ಮ ೫

ದೂರು ನಿನ್ನದು ಭಾರ ನಿನ್ನದೊ ರಂಗ
ನಾರಿ ಮಕ್ಕಳು ತನುಮನ ನಿನ್ನದಯ್ಯ
ಕ್ಷೀರದೊಳದ್ದು ನೀರೊಳಗದ್ದು ಗೋವಿಂದ
ಹೇರೊಪ್ಪಿಸಿದ ಮೇಲೆ ಸುಂಕವೆ ಸಿರಿ ಕೃಷ್ಣ ೬

ನ್ಯಾಯವಾದರೆ ದುಡುಕು ನಿನ್ನದೊ ರಂಗ ಮತ್ತ
ನ್ಯಾಯವಾದರೆ ಪೇಳುವರಾರೋ
ಮಾಯಾರಹಿತ ಕಾಗಿನೆಲೆಯಾದಿಕೇಶವ
ಕಾಯಯ್ಯ ತಪ್ಪನೆಣಿಸದೆ ವಿಠ್ಠಲರಾಯ ೭

೪೪ ರಾಗ ಸಾವೇರಿ—ಆಟತಾಳ

ದೇಶಾಧಿಪತಿ ನರಹರಿಯೆ ನಿನ್ನಯ ಪಾದ
ದಾಸರ ದಾಸನೆಂದೆನಿಸಬೇಕೆನ್ನ ಪ

ರಜತಮೋಗುಣ ಪ್ರವರ್ತಕ ಮೂಲಾಂತರದಿಂ
ಯಜಮಾನತನದಹಂಕಾರವನೊಲ್ಲೆ
ಭುಜ ಚಕ್ರ ಧರಿಸಿ ಸಾತ್ವಿಕರ ಪಾದಾಂಬುಜ
ರಜ ಭಜಕರ ಭಜಕನೆಂದೆನಿಸೆನ್ನ ೧

ಸಿರಿಗಂಧ ಕುಂಕುಮ ಸಾದು ಜವ್ವಾಜಿ ಕ
ಸ್ತೂರಿ ತಿಲಕವನಿಡುವುದ ನಾನೊಲ್ಲೆ
ಸಿರಿ ಊರ್ಧ್ವ ಪುಂಡ್ರ ದ್ವಾದಶನಾಮವಿಡುವರ
ಪರಿಚಾರಕರ ಪರಿಚಾರಕನೆನಿಸೆನ್ನ ೨

ಸ್ವಾದು ಕಲ್ಪಿತವಾದ ಭಕ್ಷ್ಯಭೋಜ್ಯಗಳನು
ಆದರದಮೃತಾನ್ನ ಉಣುವುದನೊಲ್ಲೆ
ಓದಿ ಹೇಳುವ ಕೇಳುವ ಹರಿದಾಸರ
ಪಾದ ತೀರ್ಥ ಪ್ರಸಾದವನುಣಿಸೆನ್ನ ೩

ಕಾಲಕರ್ಮದೊಳುಪೇಕ್ಷೆಯಮಾಡಿ ಹರಿಭಕುತಿ
ಶೀಲ ರಹಿತ ಬ್ರಾಹ್ಮಣನಾಗಲೊಲ್ಲೆ
ಕೀಲನರಿತು ಹರಿಭಕುತಿ ಮಾಳ್ಪ ಚಂ
ಡಾಲನ ಮನೆಯ ಬಾಗಿಲ ಕಾಯಿಸೆನ್ನನು ೪

ಅರ್ಥ ವಿಷಯಂಗಳ ಫಲವ ಬಯಸಿ ಪುಣ್ಯ
ತೀರ್ಥಯಾತ್ರೆಯನು ಮಾಡುವುದನೊಲ್ಲೆ
ದೈತ್ಯಮರ್ದನ ಬಾಡದಾದಿಕೇಶವ ನಿನ್ನ
ಕೀರ್ತನಗೈವರ ಸ್ತುತಿಕನೆಂದೆನಿಸೆನ್ನ ೫

೪೫ ರಾಗ ಕಾಂಬೋಧಿ—ಝಂಪೆತಾಳ

ಎಲ್ಲಿಂದ ಬಂದೆ ಮುಂದೆತ್ತ ಪಯಣ
ಇಲ್ಲಿ ನಿನಗೆಷ್ಟು ದಿನವಾಲಸ್ಯ ಮರುಳೆ ಪ

ಮಾತೆಯುದರದೊಳು ನವಮಾಸ ಮಲಮೂತ್ರದೊಳು
ಯಾತನೆಯು ಯೋನಿಮುಖ ಮಾರ್ಗವಿಡಿದು
ಭೂತಳಕೆ ಬಂದ ಹದನೇನು ತೀರಿಸಿಕೊಂಡೆ
ಜಾತಿ ಯಾವುದು ನಿನ್ನ ಪೆಸರೇನು ಮರುಳೆ ೧

ಮುಂದ್ಯಾವ ಪಥವ ಸೇರುವೆ ಮರುಳೆ ಸಾಕಿನ್ನು
ಹಿಂದೆ ನೆರವಾಗಿ ನಿನಗಾಪ್ತರುಂಟೆ
ಬಂದುಗೂಡಿದ ಸತಿಸುತರಲ್ಲ ವರ್ಜಿಪರು
ನಿಂದು ಮಾತಾಡು ಬಳಲಿದ ಬರಿದೆ ಮರುಳೆ ೨

ಒದವಿದ್ಯಾತ್ಮಕೆ ನಿನ್ನ ಸ್ಥಳವೆಲ್ಲಿ ನೆಲೆಯಾಗಿ
ಇರುವ ಮಂದಿರವಾ ವೈಸಗಸೆಸಗೆ [illegible]
ಪರಯೂ ಗೆ [illegible]
ಸಿರಿ ಚರಣಕಮಲವನು ನೆರ ನಂಬಿ ಸುಖಿಸೂ ೩

೪೭ ರಾಗ ಸುರಟಿ—ಆದಿತಾಳ

ವ್ಯರ್ಥವಾಯಿತಲ್ಲಾ ಜನ್ಮವು ಸಾರ್ಥಕವಾಗಲಿಲ್ಲ ಪ
ಅರ್ಥದಾಸೆಯುಲಿ ಪೃಥ್ವಿಯೊಳಗೆ ಸುತ್ತಿ
ಮತ್ತನಾಗಿ ಬಲು ಕೃತ್ಯಗಳನು ಮಾಡಿ ಅ
ಹರಿಯು ನೆನೆಯಲಿಲ್ಲ ಹರುಷದಿ | ಗರುವ ಪುಟ್ಟಿತಲ್ಲ
ಪರಮ ಮೂರ್ಖರಲಿ ನಿರುತ ಸಂಗ ಮಾಡಿ
ಗುರುಹಿರಿಯರ ದಯ ದೊರೆಯದ ಸುಮ್ಮನೆ ೧
ಏನು ಹೇಳಲೇನು ಎನಗೆ | ಹೀನ ಬಿಡದು ಮುನ್ನ
ಶ್ವಾನಗಿಂತ ಬಲು ಮಾನಗೆಟ್ಟು ನಾ
ದೀನನಾಗಿ ಮನೆಮನೆಗಳ ತಿರುಗಿ ೨
ಭಾಗವತರ ಪಾದಕ್ಕೊಂದಿನ | ಬಾಗಿ ನಡೆಯಲಿಲ್ಲ
ರಾಗ ರಂಗು ಬಲು ರಚನೆಗಳಿಂದಲಿ (ಭಕ್ತಿಭಾವದೊಳು ಪಾ)
ಬೇಗಿ ಚನ್ನಕೇಶವನನು ನೆನೆಯದೆ ೩

೪೮ ರಾಗ ಕಾಂಬೋದಿ—ಝಂಪೆತಾಳ

ಆರು ಬಲ್ಲರು ಹರಿಹರಾದಿಗಳ ಮಹಿಮೆಯನು ಪ
ವಾರಿಜೋದ್ಭವ ಸುರೇಂದ್ರಾದಿಗಳಿಗಳವಲ್ಲ ಅ
ಪೌರತ್ರಯವ ಗೆಲ್ವ ಸಮಯದಲಿ ತಪಮಾಡಿ
ನಾರಾಯಣಾಸ್ತ್ರವನು ಪಡೆದನೀಶ
ಗೌರೀ ಮನೋಹರನ ಘನತರಾರ್ಚನೆಗೈದು
ಚಾರುತರ ಚಕ್ರವನು ಪಡೆದನಾ ಶೌರಿ ೧
ಬಲಿ ಚಕ್ರವರ್ತಿ ಭಕ್ತಿಗೆ ಮೆಚ್ಚಿ ಅವನ ಬಾ
ಗಿಲ ಕಾಯ್ದನಚ್ಯುತನು ಅನುಗಾಲದಿ
ಬಲು ಭುಜನು ಬಾಣಾಸುರನ ಗೃಹದ್ವಾರವನು
ಬಳಸಿ ಕಾಯ್ದನು ಹರನು ವರವ ತಾನಿತ್ತು ೨

ಭೋಗಿಶಯನನು ಆಗಿ ಭೋಗಿಭೂಷಣನಾಗಿ
ವಾಗೀಶನಾಗಿ ಸೃಷ್ಟಿ ಸ್ಥಿತಿ ಲಯ-
ಕ್ಕಾಗು ಕಾರಣ ಕಾರ್ಯ ಕರ್ಮಾದಿ ರೂಪಕ್ಕೆ
ಕಾಗಿನೆಲೆಯಾದಿಕೇಶವನ ಮಹಿಮೆಯನು ೩

೪೮ ರಾಗ ಧನ್ಯಾಸಿ—ಆದಿತಾಳ

ಕೇಶವನೊಲುಮೆಯು ಆಗುವತನಕ್ಹರಿ
ದಾಸರೊಳಿರುತಿರು ಹೇ ಮನುಜ ಪ

ಆಶಾಪಾಶವ ಹರಿದು ವಿಲಾಸದಿ
ಶ್ರೀಶನ ನುತಿಗಳ ಪೊಗಳುತ ಮನದೊಳು ಅ

ಮೋಸದಿ ಜೀವರ ಘಾಸಿ ಮಾಡಿದ ಪಾಪ
ಕಾಶಿಗೆ ಹೋದರೆ ಹೋದೀತೇ
ಶ್ರೀಶನ ಭಕುತರ ದೂಷಿಸಿದ ಫಲ
ಕಾಸು ಕೊಟ್ಟರೆ ಬಿಟ್ಟೀತೆ
[1]ಆಸೆ ಕೊಟ್ಟು ನಿರಾಸೆ ಮಾಡಿದ ಫಲ
ಮೋಸವ ಮಾಡದೆ ಬಿಟ್ಟೀತೆ
ಭೂಸುರಸ್ವವ ಹ್ರಾಸಮಾಡಿದ ಫಲ
ಏಸೇಸು ಜನುಮಕ್ಕು ಬಿಟ್ಟೀತೆ ೧

ಸತ್ಯ ಧರ್ಮಗಳ ನಿತ್ಯವು ಬೋಧಿಸೆ
ತೊತ್ತಿನ ಮನಸಿಗೆ ಸೊಗಸೀತೆ
ತತ್ವದರ್ಥ ವಿಚಿತ್ರದಿ ಬೋಧಿಸೆ
ಕತ್ತೆಯ ಚಿತ್ತಕೆ ಹತ್ತೀತೆ
ಪುತ್ಥಳಿ ಬೊಂಬೆಯ ಚಿತ್ರದಿ ಬಣ್ಣಿಸಿ
ಮುತ್ತು ಕೊಟ್ಟರೆ ಮಾತನಾಡೀತೆ
ಕಸ್ತೂರಿ ತಿಲಕವನೊತ್ತಿ ಫಣೆಯೊಳಡೆ
ಅರ್ಥಿಯ ತೋರದೆ ಇದ್ದೀತೆ ೨

[1] ಆಸೆಯ ಕೊಟ್ಟು ನಿರಾಸೆ ಮಾಡಿದ ಫಲ
ಕ್ಲೇಶಪಗೊಳಿಸದೆ ಬಿಟ್ಟೀತೆ (ಪಾಠಾಂತರ)

ನ್ಯಾಯವ ಬಿಟ್ಟನ್ಯಾಯವ ಪೇಳುವ
ನಾಯಿಗೆ ನರಕವು ತಪ್ಪೀತೆ
ಬಾಯ ಕೊಬ್ಬಿನಲಿ ಬೈಯುವ ಮನುಜಗೆ
ಘಾಯವಾಗದೆ ಬಿಟ್ಟೀತೆ
ತಾಯಿತಂದೆಯರ ನೋಯಿಸಿದವನಿಗೆ
ಸಾಯದ ಮರಣವು ತಪ್ಪೀತೆ
ಮಾಯಾಜಾಲವ ಕಲಿತ ಮನುಜನಿಗೆ
ಕಾಯ ಕಷ್ಟವು ಬಿಟ್ಟೀತೆ ೩
ಸಾಧು ಸಜ್ಜನರ ನೋಯಿಸಿದ ಮಾಯಾ
ವಾದಿಗೆ ನರಕವು ತಪ್ಪೀತೆ
ಬಾಧಿಸಿ ಪರರ ಅರ್ಥವ ತೆಗೆದರೆ
ವ್ಯಾಧಿ ಕಾಡದೆ ಬಿಟ್ಟೀತೆ
ಭೇದವೆಣಿಸಿ ಬಲು ಕ್ಷುದ್ರವ ಕಲಿತರೆ
ಮೋದವೆಂದಿಗೂ ಆದೀತೆ
ಕದ್ದು ಒಡಲ ಪೊರೆಯುವನ ಮನೆಯೊಳ
ಗಿದ್ದದ್ದೋಗದೆ ಉಳಿದೀತೆ ೪
ಜೀಣನ ವಶದೊಳು ನಾನಾ ದ್ರವ್ಯವಿರೆ
ದಾನಧರ್ಮಕೆ ಮನಸಾದೀತೆ
ಹೀನ ಮನುಜನಿಗೆ ಜ್ಞಾನವ ಬೋಧಿಸೆ
ಹೀನ ವಿಷಯವಳಿದ್ಹೋದೀತೆ
ಮಾನಿನಿ ಮನ ನಿಧಾನವಿಲ್ಲದಿರೆ
ಮಾನಾಭಿಮಾನಗಳುಳಿದೀತೆ
ಭಾನುಪ್ರಕಾಶನ ಭಜನೆಯ ಮಾಡದ
ಹೀನಗೆ ಮುಕುತಿಯು ದೊರಕೀತೆ ೫
ಅಂಗಜ ವಿಷಯಗಳನು ತೊರೆದಾತಗೆ
ಅಂಗನೆಯರ ಸುಖ ಸೊಗಸೀತೆ
ಸಂಗ ದುಃಖಗಳ ಹಿಂಗಿದ ಮನುಜಗೆ
ಶೃಂಗಾರದ ಬಗೆ ರುಚಿಸೀತೆ

ಇಂಗಿತವರಿತ ನಿಸ್ಸಂಗಿ ಶರೀರ ವ–
ಜ್ರಾಂಗಿಯಾಗದೆ ತಾನಿದ್ದೀತೆ
ಮಂಗಳ ಮಹಿಮನ ಅಂಘ್ರಿಯ ಕಾಣದ
ಮಂಗಗೆ ಮುಕುತಿಯು ದೊರಕೀತೆ ೬
ಕರುಣಾಮೃತದಾಭರಣವ ಧರಿಸಿದ
ಶರಣಗೆ ಸಿರಿಯು ತಪ್ಪೀತೆ
ಕರಣಪಾಶದುರವಣೆ ಹರಿದಾತಗೆ
ಶರಣರ ಕರುಣವು ತಪ್ಪೀತೆ
ಅರಿತು ಶಾಸ್ತ್ರವಾಚರಿಸುವ ಯೋಗ್ಯಗೆ
ಗುರು ಉಪದೇಶವು ತಪ್ಪೀತೆ
ವರ ವೇಲಾಪುರದಾದಿ ಕೇಶವನ
ಸ್ಮರಿಸುವನಿಗೆ ಮೋಕ್ಷ ತಪ್ಪೀತೆ ೭

೨೯ ರಾಗ ಕಲ್ಯಾಣಿ—ಆಟತಾಳ

ಕಲಿ ಹೆಚ್ಚಿ ಬಂದಿತಲ್ಲಾ ರಂಗಯ್ಯ | ಕಾಯೆನ್ನ ಸಿರಿಯನಲ್ಲಾ ಪ
ಒಲು ಘೋರ ಪಾತಕದಿಳೆಯು ತಲ್ಲಣಗೊಂಡು
ಕಳವಳಿಸುತಲಿದೆ ಕಾಲ ವಿಪರೀತದಿ ಅ.

ಅತ್ತೆಯ ಸೊಸೆ ಬೈವಳು ಪುತ್ರರು ತಮ್ಮ
ಹೆತ್ತ ತಾಯಿಯ ಬಿಡುವರು
ಉತ್ತಮ ಗರತಿಗೆ ಅಪವಾದ ಅವಿವೇಕ
ಎತ್ತ ನೋಡಲು ಬೆಚ್ಚಿ ಚೆದರುತು
ನೃತ್ತತನದಲಿ ಮನೆಯ ರಚಿಸಿಹರ್
ಭಕ್ತಿಯೆಂಬುದ ಬಯಸದಿರುವರು
ಕತ್ತಲಾಯಿತು ಕಲಿಯ ಮಹಿಮೆ ೧

ನಿತ್ಯ ನೇಮವು ನಿಂತಿತು, ಹೋಯಿತು ಅಲ್ಪ
ಜಾತಿಗೆ ಐಶ್ವರ್ಯವು
ದಾತರಾದವರಿಗೆ ಧಾರಣೆ ಪಾರಣೆ
ಜಾತಿ ನೀತಿಗಳೆಲ್ಲ ಒಂದಾಗಿ

ಪಾತಕದಿ ಮನವೆರಗಿ ಮೋಹಿಪ
ಮಾತಾ ಪಿತೃ ಗುರು ದೈವ ದ್ರೋಹದಿ
ಭೂತಳವು ನಡನಡುಗುತಿಹುದು ೨
ಬಿನ್ನಣೆ ಮಾತುಗಳು ಮತ್ತು
ಮತ್ಸರ ಕ್ರೋಧಗಳು
ಅನ್ಯಾಯದಿಂದಲಿ ಅರ್ಥವ ಗಳಿಸೋರು
ತನ್ನ ಕಾಂತನ ಬಿಟ್ಟು ಸ್ತ್ರೀಯರು
ಅನ್ಯರಿಗೆ ಮನವೆರಗಿ ಮೋಹಿಪರ್
ಬಣ್ಣಗೆಟ್ಟಿತು ವರ್ಣ ತಪ್ಪಿತು
ಪ್ರ-ಸನ್ನ ಶ್ರೀ ನೆಲೆಯಾದಿಕೇಶವ ೩

೫೦ ರಾಗ ಆರಬಿ ತಾಳ

ಕಣಿಯ ಹೇಳ ಬಂದೆ ನಾರಾಯಣನಲ್ಲದಿಲ್ಲವೆಂದು, ಸಿಕ್ಕ
ಬಣಗು ದೈವದ ಗೊಡವೆ ಬೇಡ ನರಕ ತಪ್ಪದು ಪ
ಎಕ್ಕನಾತಿಯರು [1]ಕಾಟ [2]ಜಕ್ಕಿಯರು ಕನ್ಯೆಯರು
ನೊಕ್ಕಿನಿಂದ ಸೊಂಟಮುರುಕ ಬೈರೇದೇವರು
ಮಿಕ್ಕ ಮಾರಿ ಮಸಣಿ ಚೌಡಿ ಮೈಲಾರಿ ಮೊದಲಾದ
ಇಂಥ-ರಕ್ಕಸ ದೈವದ ಗೊಡವೆಬೇಡ ನರಕ ತಪ್ಪದು ೧
ಸುತ್ತಣವರ ಮಾತಕೇಳಿ ಗುತ್ತಿಯ ಯಲ್ಲಮ್ಮಗೊಲಿದು
ಬತ್ತಲೆ ದೇವರ ಮುಂದೆ ಬಲಿಯ ನೋಡಿರೊ
ಮತ್ತೆ ಬೇವಿನುಡಿಗೆಯನ್ನು ಅರ್ಥಿಯಿಂದ ಉಟ್ಟುಕೊಂಡು
ಮುಕ್ತಿ ಕಾಂಬೆವೆಂಬ ಆಸಕ್ತಿ ಬೇಡಿರೊ ೨
[3]ತೂಗಿವವರ ಮಾತಕೇಳಿ ಖೂಳರೆಲ್ಲರು ಕೂಡಿಕೊಂಡು
ಹಾಳು ಮಾಡಿ ಕೈಯಲಿದ್ದ ಹೊನ್ನು ಹಣಗಳ
ಬಾಳುತಿಪ್ಪ ಕೋಣ ಕುರಿಯ ಏಳ ಬೀಳ ಕೊರಳ ಕೊಯಿದು
ಬೀಳಬೇಡಿ ನರಕಕೆಂದು ಹೇಳಬಂದೆನೊ ೩

1 ಉಗ್ರತರ ದೇವತೆ (ಕಾಟನಾಯಕ ಮುಂತಾಗಿ), 2 ತದ್ಭವ, ಯಕ್ಷಿ (ತ್ಸ)
3 ದೇವತೆಯ ಮುಂದೆ ಆವೇಶ ಬಂದು ಕುಣಿಯುವವರು

[1]ಹೊಳ್ಳದ [2]ಬಿಚ್ಚೇರು ತಾವು ಸುಳ್ಳರೆಲ್ಲರು ಕೂಡಿಕೊಂಡು
ಬೆಳ್ಳನೆ ಬೆಳತನಕ ನೀರ ತಡಿಯಲ್ಲಿ ಕುಳಿತು
[3]ಗುಳ್ಳ [4]ಗೊರಜೆ ಕೂಡಿ ತಿಂದು [5]ಕಳ್ಳುಕೊಡನ ಬರಿದುಮಾಡಿ
ಇಂಥ ಪೊಳ್ಳು ದೈವದ ಗೊಡವೆ ಬೇಡ ನರಕ ತಪ್ಪದು ೪

ಪ್ರೊಡವಿಗಧಿಕ ವಿಜಯನಗರದೊಡೆಯ ಕಟ್ಟಿ ವೆಂಕಟೇಶ
ಕಡು ಚೆಲ್ವ ಸತ್ವದ ಧೀರ ಕನಕನೊಡೆಯನ
ಬಡದಾದಿ ಕೇಶವನ ಪಾದ ಬಿಡದೆ ಭಜಿಸಿರೋ
ಇಂಥ–ಜಡದೈವದ ಗೊಡವೆ ಬೇಡ ನರಕ ತಪ್ಪದು ೫

೫೧ ರಾಗ ಗೌಳಿಪಂತು—ತಾಳ

ಎಳ್ಳು ಕಾಳಿನಷ್ಟು ಭಕ್ತಿಯನ್ನೊಳಗಿಲ್ಲ ಪ
ಕಳ್ಳರಿಗೆ ಕಳ್ಳನಂತೆ—ಬೆಳ್ಳಕ್ಕಿಯಂದದಿ ಡಂಭ ಅ

ಗಾಣದೆತ್ತಿನಂತೆ ಕಣ್ಣ ಮುಚ್ಚಿ ಪ್ರದಕ್ಷಿಣೆಯ ಮಾಡಿ
ಕಾಣದೆ ತಿರುಗುವೆನೆರಡು ಕಣ್ಣಿದ್ದು ನಾನು
ಮಾಣಿಕ್ಯದ ರಾಶಿಯಲ್ಲಿ ಅಂಧಕರ್ಬರು ಕೂಡಿ
ಆಣಿಮುತ್ತ ಹಿಡಿದು ಹಿಡಿದು ಬಿಡುವಂತೆ ಭ್ರಮಿತನೈಯ ೧

ಗುಂಡು ಮುಳುಕನ್ಹಕ್ಕಿಯಂತೆ ಕಂಡ ಕಂಡ ನೀರ ಮುಳುಗಿ
ಮಂಡೆಶೂಲೆ ಬಾಹೋದಲ್ಲೆ ಗತಿಯ ಕಾಣೆನೊ
ಮಂಡೂಕನಂದದಿ ನೀರ ತಡಿಯಲ್ಲಿ ಕುಳಿತು ಹಾಗೆ
ಮುಂಡ ಮುಸುಗನಿಕ್ಕಿ ಮೂಗಹಿಡಿದುಬಿಡುವೆ ಭ್ರಮಿತನಯ್ಯ ೨

ಇಕ್ಕಳದ ಕೈಲಿ ಪಿಡಿದ ಕಾದ ಕಬ್ಬಿಣದಂತೆ
ಸಿಕ್ಕಿ ಸಿಡಿಮಿಡಿಗೊಂಬೆ ಗತಿಯ ಕಾಣದೆ
ಹೊಕ್ಕಳ್ಹೂವಿನ ಕನಕನೊಡೆಯನಾದಿ ಕೇಶವ-ಮರೆ
ಹೊಕ್ಕೆ ಎನ್ನ ಮನ್ನಿಸೊ ನೀ ದೇವ ದೇವೋತ್ತಮ ೩

1 ತುಚ್ಛರಾದ, 2 ಭಿಕ್ಷುಕರು, 3 ಗುಳ್ಳದಕಾಯಿ, 4 ಒಂದು ಬಗೆ ಸೊಪ್ಪು, 5 ಹೆಂಡದ ಮಡಕೆ

೫೨ ರಾಗ ನಾದನಾಮಕ್ರಿಯ—ಅಟತಾಳ

ತಾಳಲಲ್ಲಲ್ಲಲ್ಲಲ್ಲೋ ಮ್ಮೈ ಸುತ್ತ ಳಲ್ಲಲ್ಲಲ್ಲೋ ಪ.

ಹೆಚ್ಚಿದ ತಮನೆಂಬ, ದನುಜ ವೇದವ ಕದ್ದು
ಬಚ್ಚಿಟ್ಟು ನೀರೊಳು ಮುಳುಗಿರಲು
ಮಚ್ಛ್ಯ ರೂಪದಿಂದ ಪೋಗಿ ಅವನ ಕೊಂದ
ಅಚ್ಯುತರಾಯನೆಂಬೊ ಮಾಸಾಳಮ್ಮಾ ೧

ಸಿಂಧು ಮಥನಮಾಡಿ ಅಮರರು ಕಡೆಯಲು
ಮಂದರ ನೀರೊಳು ಮುಳುಗಿರಲು
ಚಂದದಲೆತ್ತಿದ ಕೂರ್ಮಾವತಾರ ಗೋ
ವಿಂದನೆಂಬುವ ಮಾಸಾಳಮ್ಮಾ ೨

ರೂಢಿಯ ಕದ್ದು ಕೊಂಡೋಡುವ ದೈತ್ಯನ
ನೀಡಿ ತಿವಿದು ಕೋರೆ ದಾಡಿಯಿಂದ
ಕ್ರೋಢ ರೂಪದಿಂದ ಪೋಗಿ ಅವನ ಕೊಂದ
ಕಾಡುವರಹನೆಂಬೊ ಮಾಸಾಳಮ್ಮಾ ೩

ಲೇಸು ತಪ್ಪಿದನೆಂದು ಹಿರಣ್ಯಕ ತನಯನ
ಘಾಸಿ ಮಾಡಲು ಕಂಭವಡೆದುದಿಸಿ
ರೋಷದಿ ದೈತ್ಯನ ಕರುಳ ಕಿತ್ತ ನರ
ಕೇಸರಿ ರೂಪಿನ ಮಾಸಾಳಮ್ಮಾ ೪

ಆ ಮಹಾ ಸಿರಿಯ ಗರ್ವದಿ ಮುಂದರಿಯದೆ
ಭೂಮಿಯ ಬಲಿಯು ತಾನಾಳುತಿರೆ
ನೇಮಿಸಿ ಮೂರನೆ ಹೆಜ್ಜೆಯೊಳೆಳಕೊಂಡ
ವಾಮನ ರೂಪಿನ ಮಾಸಾಳಮ್ಮಾ ೫

ಕಾಮಧೇನುವಿಗಾಗಿ ಕಾರ್ತವೀರ್ಯಾರ್ಜುನ
ಆ ಮಹಾಮುನಿಯ ಪ್ರಾಣಕೆ ಮುನಿಯೆ
ತಾಮಸವಿಲ್ಲದೆ ಕ್ಷತ್ರಿಯರ ಸಂಹರಿಸಿದ
ರಾಮ ಭಾರ್ಗವನೆಂಬ ಮಾಸಾಳಮ್ಮಾ ೬

ಜನಕಸುತೆಯ ಕದ್ದೊಯ್ಯಲು ಲಂಕೆಗೆ
ಎಣಿಕೆಯಿಲ್ಲದ ಶರಧಿಯ ಕಟ್ಟಿ
ಘನ ಕೋಪದಿ ದಶಶಿರನ ಕತ್ತರಿಸಿದ
ಇನಕುಲ ರಾಮನೆಂಬ ಮಾಸಾಳಮ್ಮಾ ೭

ದೇವಕಿ ಬಸುರೊಳು ಬಂದು ಗೋಕುಲದಿ
ಅವ ಕಾವ ಗೊಲ್ಲರ ಸಲಹಿ
*ಮಾವನ ಕೊಂದು ಮತ್ತೈವರ ಸಲಹಿದ
ದೇವ ಕೃಷ್ಣನೆಂಬ ಮಾಸಾಳಮ್ಮಾ ೮

ಪತಿವ್ರತೆಯರ ವ್ರತವಳಿಯಬೇಕೆನುತಲಿ
ಅತಿಶಯದಿಂದ ತ್ರಿಪುರದೊಳಗೆ
ಮತಗೆಡಿಸಿ ಬಹು ಭಂಗಪಡಿಸಿದ
ರತಿಪತಿ ಪಿತನೆಂಬ ಮಾಸಾಳಮ್ಮಾ ೯

ಖುಲ್ಲ ಮನುಜರನು ಕೊಲ್ಲಬೇಕೆನುತಲಿ
ಭಲ್ಲೆ ಹಿಡಿದು ತುರಗವನೇರಿ
ಬಲ್ಲಿದ ಕಲ್ಕ್ಯವತಾರವ ತಾಳಿದ
ವಲ್ಲಭರಾಯನೆಂಬ ಮಾಸಾಳಮ್ಮಾ ೧೦

ಮಂಗಳಮಹಿಮ ಭುಜಂಗಶಯನ ಕಾ
ಳಿಂಗ ಮಥನ ದೇವೋತ್ತುಂಗ
ಅಂಗಜಪಿತ ನೆಲೆಯಾದಿಕೇಶವ ಅಂತ
ರಂಗದೊಳಿರುತಿಹ ಮಾಸಾಳಮ್ಮಾ ೧೧

೫೩ ರಾಗ ಪೂರ್ವಿ—ಮಟ್ಟ ತಾಳ

ಮಗನಿಂದ ಗತಿಯುಂಟೆ ಜಗದೊಳಗೆ ಪ
ನಿಗಮಾರ್ಥ ತತ್ವ ವಿಚಾರದಿಂದಲ್ಲದೆ ಅ

---

* ಮಾವನ ಶಿರವನು ತರಿದು ಪಾಂಡವರ
ಭಾವನೆನಿಸಿದ ಮಾಸಾಳಮ್ಮಾ (ಪಾಠಾಂತರ)

ತ್ರಿಗುಣರಹಿತ ಪರಮಾತ್ಮನ ಧ್ಯಾನದಿ
ಹಗಲಿರುಳು ನಿತ್ಯಾನಂದದಿಂದ
ಬಿಗಿದು ಪ್ರಪಂಚ ವಾಸನೆಯ ಬಿಟ್ಟವರಿಗೆ
ಮಗನಿದ್ದರೇನು ಇಲ್ಲದಿದ್ದರೇನಯ್ಯ ೧
ಲಲನೆ (ಸತಿ) ಪುರುಷರು ಕೂಡಿ ತಂತಮ್ಮ ಕಾಮಕ್ಕೆ
ಸಲುವಾಗಿ ಕೂಡಲು ಶುಕ್ಲ ರಕ್ತ
ಮಿಳಿತವಾದ ಪಿಂಡ ಪೂರ್ವದ ಗತಿಯಿಂದ
ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೆ ೨
ಪರಮ ದುಷ್ಟನಾಗಿ ಮರೆದು ಸ್ವಧರ್ಮವ
ಗುರುಹಿರಿಯರ ಸಾಧುಗಳ ನಿಂದಿಸಿ
ಬೆರೆದನ್ಯ ಜಾತಿಯ ಪರನಾರಿಯರ ಘೋರ
ನರಕದಿ ಹಿರಿಯರ ನೂಕಿಸಿ ಬೀಳುವ ೩
ಸತ್ಯ ಒಬ್ಬ ಪುತ್ರ ಶಾಂತಿ ಒಬ್ಬ ಪುತ್ರ ದು
ರ್ವೃತ್ತಿ ನಿಗ್ರಹವೊಬ್ಬ ಸಮಚಿತ್ತವೊಬ್ಬ
ಉತ್ತಮರೀ ನಾಲ್ಕು ಮಕ್ಕಳಿದ್ದ ಮೇಲೆ
ಹೆತ್ತರೇನು ಇನ್ನು ಹೆರದಿದ್ದರೇನಯ್ಯ ೪
ಸುತರಿಲ್ಲದವರಿಗೆ ಸದ್ಗತಿಯಿಲ್ಲವೆಂತೆಂಬ
ಕೃತಕ ಶಾಸ್ತ್ರವು ಲೌಕಿಕ ಭಾವಕೆ
ಕ್ಷಿತಿಯೊಳು ಕಾಗಿನೆಲೆಯಾದಿಕೇಶವ ಜಗ
ತ್ಪತಿಯ ಭಜಿಸಗೆ ಸದ್ಗತಿಯಿಲ್ಲದ್ಹೋಗೋದೆ ೫

೫೪ ರಾಗ ಪಂತುವರಾಳಿ—ತಾಳ

ಒಡವೆ ಹೋಯಿತು ಮನ ದೃಢವಾಯಿತು ಪ
ಹಿಡಿದರೆ ಓಡುವ ಕಳ್ಳ ಬಿಡದೆ ಕದ್ದುಕೊಂಡು ಹೋದ ಅ
ಆರು ಜೋಡಿನ ವಾಲೆಯಿತ್ತು ಮೂರು ಮುತ್ತಿನ ಮೂಗುತಿಯಿತ್ತು
ಮೇಲೆ ಇಪ್ಪತ್ತು ನಾಲ್ಕು ಸರವು ಒಂದಿತ್ತು
ಈರೈದು ತಾಳಿಗಳಿತ್ತು ಬಿರುದಿನ ಕಪ್ಪೆಂಟಿತ್ತು
ದಾರಿ ನೋಡಿಕೊಂಡು ಇದ್ದ ಛಾಯನೆಂಬ ಕಳ್ಳ ಕದ್ದ ೧

ಎಪ್ಪತ್ತೆರಡುಸಾವಿರ ಸೂತ್ರದ ಹಸ್ತಕಟ್ಟು ಎರಡಿತ್ತು
ಕಪ್ಪು ಬಿಳುಪು ಕೆಂಪು ವರ್ಣದ ಪದಕ ಒಂದಿತ್ತು
ಒಪ್ಪವಿತ್ತ ಹಸ್ತಕಡಗ ಆಶಾಪಾಶವೆರಡಿತ್ತು
ಒಪ್ಪವನ್ನು ಸಾಧಿಸಿ ನೇತ್ರನೆಂಬ ಕಳ್ಳ ಕದ್ದ ೨

ಹುಟ್ಟು ಸಾವು ಎರಡು ಎಂಬ ಘಟ್ಟಿ ತೂಕದ ನಗವು ಇತ್ತು
ಕಷ್ಟ ಸುಖ ಕರ್ಮಗಳೆಂಬ ಸಂಚಿಗಳತ್ತು
ಅಷ್ಟು ಇಷ್ಟು ಚಿಲ್ಲರೊಡವ ಪೆಟ್ಟಿಗೆಯಲಿ ತುಂಬಿತ್ತು
ದೃಷ್ಟಿ ನೋಡಿಕೊಂಡು ಇದ್ದ ಧರ್ಮನೆಂಬ ಕಳ್ಳ ಕದ್ದ ೩

ಎಲ್ಲ ಒಡವೆ ಹೋಯಿತಾದರು ಫುಲ್ಲಳಾಗಿ ಮೆರೆಯುತಾಳೆ
ಚೆಲ್ವನೊಬ್ಬ ಪುರುಷನ ಕಂಡು ತಾಳಲಾರದೆ
ಬಲ್ಲಿದವಳು ಈಕೆಯೆಂದು ಇವಳ ಬಗೆ ತಿಳಿಯಿತೆಂದು
ಕೊಲ್ಲಬಾರದೆನುತ ಹೇಳಿ ಮನೆಯಬಿಟ್ಟು ಹೊರಡಿಸಿದ ೪

ಇಂಥಾ ಒಡವೆ ಹೋಯಿತೆಂದು ಚೋದ್ಯಪಟ್ಟು ನೋಡುತಿರಲು
ತಂತ್ರಮಾಡಿ ಆದಿಕೇಶವ ಹರಿಯು ತಾ ಬಂದು
ತಂತ್ರವನ್ನು ಹೇಳಿ ಜ್ಞಾನಮಾರ್ಗವನ್ನು ಬಿಟ್ಟುಕೊಟ್ಟು
ಸಂತೋಷವಾಗಿರು ಎಂದು ಚಿಂತೆ ಬಿಡಿಸಿ ಸಲಹಿದ ೫

೫೫ ರಾಗ ಕೇದಾರಗೌಳ—ಆದಿತಾಳ

ಭಂಟನಾಗಿ ಬಾಗಿಲ ಕಾಯ್ವೆ ಹರಿಯ ಪ
ವೈಕುಂಠದ ಸೊಂಪಿನ ದಾಸರ ಮನೆಯ ಅ

ಹೊರಸುತ್ತು ಪ್ರಾಕಾರವ ಸುತ್ತಿ ಬರುವೆ
ಬರುವ ಹೋಗುವರ ವಿಚಾರಿಸಿ ಬಿಡುವೆ
ಕರದಿ ಕಂಬಿಯ ಪೊತ್ತು ಅಲ್ಲಿ ನಿಂದಿರುವೆ
ಹರಿಯ ಸಮ್ಮುಖದ ವಾಲಗ (ಓಲಗ) ದೊಳು ಇರುವೆ ೧

ಹೊತ್ತು ತೊಂಡನಾಗಿ ಬಾಗಿಲ ಕಾಯ್ವೆ
ಚಿತ್ರದ ಚಾವಡಿ *ರಂಜೆ ಬೆಳಗುವೆ
ಮುತ್ತಿನ ರಂಗವಲ್ಲಿಯ ಪೊತ್ತು ತುಂಬುವೆ
ರತ್ನದ ಕಂಬಳಿ ಪೊತ್ತು ಹಾಸುವೆನು ೨

---

* ರಂಜಿಸಲು = ಪ್ರಕಾಶಿಸಲು

ವೇಳೆವೇಳೆಗೆ ನಾ ಊಳಿಗ ಮಾಡುವೆ
ಮೇಳವಂಟಿಗೆ (?) ಚಾಮರ ಹಾಕುವೆ
ತಾಳ ದಂಡಿಗೆ ಭೃಂಗಿ ಮೇಳಗಳ ಕೂಡಿ
ಶ್ರೀಲೋಲನ ಕೊಂಡಾಡಿ ಪಾಡುವೆನು ೩

ಎಂಜಲ ಹರಿವಾಣಂಗಳ ಬೆಳಗುವೆ
ಕಂಜನಾಭನ ಪಾದಂಗಳ ತೊಳೆವೆ
ರಂಜಿಪ ಕುಸುಮ ಮಾಲಿಕೆಗಳ ತರುವೆ
ಸಂಜೆಗೆ ಪಂಜಿನ ದಾಸನಾಗಿರುವ ೪

ಮೀಸಲ ಊಳಿಗವ ನಾ ಮಾಡಿಕೊಂಡಿರುವೆ
ಶೇಷಪ್ರಸಾದವ ಉಂಡುಕೊಂಡಿರುವೆ
ಶೇಷಾಚಲ ಕಾಗಿನೆಲೆಯಾದಿಕೇಶವನ
ದಾಸರ ದಾಸರ ದಾಸರ ಮನೆಯ ೫

೪೮ ರಾಗ ಧನ್ಯಾಸಿ—ಝಂಪೆತಾಳ

ಮುಟ್ಟಬೇಡ ಮುಟ್ಟಬೇಡ ಮುರಹರನ ದಾಸರನು ಪ
ಕಟ್ಟುಮಾಡಿದ ಯಮನು ತನ್ನ ದೂತರಿಗೆ ಅ

ತಿರುಮಣಿ ತಿರುಚೂರ್ಣ ಶೃಂಗಾರ ಧರಿಸುವರ
ಸಿರಿತುಳಸಿ ವನಮಾಲೆಯಿಂದೊಪ್ಪುವವರ
ತಿರುಮಂತ್ರ ತೀರ್ಥಪ್ರಸಾದಕ್ಕೊಳಗಾದವರ
ತಿರುಪತಿ ಯಾತ್ರೆಯನು ಮಾಡಿದ ಮಹಾತ್ಮರನು ೧

ಬಡವರಾಗಲಿ ಭಾಗ್ಯವಂತರಾಗಲಿ ಅವರು
ಕಡುಕರ್ಮಿ ಘೋರ ಪಾತಕರಾಗಲಿ
ನಡೆ ನುಡಿಗೆ ಮಾಧವನ ಬಿಡದೆ ಕೊಂಡಾಡುವರ
ಗೊಡವೆ ಬೇಡೆಂದು ಯಮಧರ್ಮ ಸಾರಿದನು ೨

ವಾಸುದೇವನ ವಾಸರವನಾಚರಿಸುವವರ
ಬೇಸರದೆ ಹರಿಪ್ರಸಂಗವ ಮಾಳ್ಪರ
ಶೇಷಶಯನ ಕಾಗಿನೆಲೆಯಾದಿಕೇಶವನ
ದಾಸಾನುದಾಸರಿಗೆ ದಾಸರಾದವರ ೩

೫೭ ರಾಗ ಕೇದಾರಗೌಳ—ಅಟತಾಳ

ದಾನ ಧರ್ಮವ ಮಾಡಿ ಸುಖಿಯಾಗು ಮನವೆ ಪ.

ಹೀನವೃತ್ತಿಯಲಿ ನೀ ಕೆಡಬೇಡ ಮನವೆ ಅ

ಎಕ್ಕನಾತಿ ಯಲ್ಲಮ್ಮ ಮಾರಿ ದುರ್ಗಿಯು ಚೌಡಿ
ಅಕ್ಕರಿಂದಲಿ ಪೂಜೆ ಮಾಡಲೇಕೆ
ಕಿಕ್ಕಿರಿದು ಯಮನ ದೂತ–ರೆಳೆ–ದೊಯಿವಾಗ
ಶಕ್ತೇರು ಬಿಡಿಸಿ ಕೊಂಡಾರೇನೂ ಮರುಳೆ ೧

ಸಂಭ್ರಮದಲ್ಲೊಂದ್ಹೊತ್ತು ನೇಮದಲ್ಲಿದ್ದು
ತಂಬ್ಬಿಟ್ಟನಾದೀಪ ಹೊರಲೇತಕೆ
ಕೊಂಬು ಹೋತು ಕುರಿ ಕೋಣನಾ ಬಲಿಗೊಂಬ
ದೊಂಬಿ ದೈವಗಳ ಭಜಿಸದಿರು ಮನವೆ ೨

ಚಿಗುರೆಲೆ ಬೇವಿನಸೊಪ್ಪು ನಾರಸೀರೆ
ಬಗೆಬಗೆಯಿಂದ ಶೃಂಗಾರ ಮಾಡಿ
ನೆಗೆನೆಗೆದು ಆಡಲು ಕುಣಿಯಲು ನಿನಗಿನ್ನು
ಮಿಗಿಲಾದ ಮುಕುತಿಯುಂಟೇ ಹುಚ್ಚು ಮನವೆ ೩

ದಾನ ಧರ್ಮ ಪರೋಪಕಾರವ ಮಾಡು
ದೀನನಾಗಿ ನೀ ಕೆಡಬೇಡವೊ
ಜ್ಞಾನವಿಲ್ಲದೆ ಹೀನದೈವವ ಭಜಿಸಲು
ಏನುಂಟು ನಿನಗಿನ್ನು ಎಲೆ ಹುಚ್ಚು ಮನವೆ ೪

ನರಲೋಕದಿ ಯಮನ ಬಾಧೆಯ ಕಳೆಯಲು
ವರ ಪುಣ್ಯ ಕಥೆಗಳ ಕೇಳುತಲಿ
ಸಿರಿಯಾದಿ ಕೇಶವರಾಯನ ನೆರೆನಂಬಿ
ಸ್ಥಿರವಾದ ಪದವಿಯ ಪಡೆ ಹುಚ್ಚು ಮನವೆ ೫

೫೮ ರಾಗ ಕೇದಾರಗೌಳ—ಅಟತಾಳ

ತನು ನಿನ್ನದು ಜೀವನ ನಿನ್ನದು ರಂಗ ಪ

ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ ಅ.

ಸವಿನುಡಿ ವೇದ ಪುರಾಣ ಶಾಸ್ತ್ರಂಗಳ
ಕಿವಿಯಿಂದ ಕೇಳುವ ಕಥೆ ನಿನ್ನದು
ನವಮೋಹನಾಂಗೇರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ೧
ಒಡಗೂಡಿ ಗಂಧ ಕಸ್ತೂರಿ ಪರಿಮಳಂಗಳ
ಬಿಡದೆ ಲೇಪಿಸಿಕೊಂಬುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ ೨
ಮಾಯಾಪಾಶದ ಬಲೆಯೊಳಗೆ ಸಿಲ್ಕಿರುವಂಥ
ಕಾಯ ಪಂಚೇಂದ್ರಿಯಂಗಳು ನಿನ್ನವು
*ಮಾಯಾರಹಿತ ಕಾಗಿನೆಲೆಯಾದಿಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೆ ೩

೫೯ ರಾಗ ಸಾವೇರಿ—ಆಟತಾಳ

ಶೇಷಶಯನ ನಿಮ್ಮ ಪರಮ ಭಾಗವತರ ಸಹ
ವಾಸದೊಳಿರಿಸು ಕಂಡ್ಯ ಎನ್ನನು ಪ
ಬೇಸರದೆ ನಿನ್ನ ಹೃದಯಾಬ್ಜದೊಳಗಿರುವ
ದಾಸರೊಳಿರಿಸು ಕಂಡ್ಯ ಎನ್ನನು ಅ.
[1]ತಂದೆಯೊಡಲನು ಸೀಳಿಸಿದವರೊಳು [2]ದೇ
ವೇಂದ್ರನ ತಲೆಗೆ ತಂದವರೊಳು, [3]ದು
ರ್ಗಂಥ ವೆಣ್ಣಿಗೆ ಚಂದನದ ಕಂಪನಿತ್ತಂಥ
ಬಾಂಧವರೊಳಗಿರಿಸು ಕಂಡ್ಯ (ಎನ್ನನು) ೧
[4]ತೋಯಜವೆಂಬ ಪುಷ್ಪದ ಪೆಸರವರೊಳು
[5]ತಾಯಿ ಸೊಸೆಗೆ ಮಕ್ಕಳಿತ್ತವರೊಳು
[6]ಆಯದಿ ದ್ವಾದಶಿ ವ್ರತವ ಸಾಧಿಸಿದಂಥ
ರಾಯರೊಳಿರಿಸು ಕಂಡ್ಯ ಎನ್ನನು ೨

---

* ನ್ಯಾಯದಿ ಕನಕನೊಡೆಯ ಆದಿಕೇಶವ. (ಪಾಠಾಂತರ)

1 ಪ್ರಹ್ಲಾದ 2 ನಾರದ 3 ಪರಾಶರ 4 ಪುಂಡರೀಕ 5 ವ್ಯಾಸ 6 ಅಂಬರೀಷ

[1]ಗಿಳಿ [2]ನಾಯಿ ಪೆಸರಿನವರೊಳು [3]ಮುಗಿಲ
ಹೊಳೆಯ ಹೊಟ್ಟೆಲಿ [4]ಹುಟ್ಟಿದವರೊಳು
[5]ಕೆಳದಿಯ ಜರಿದು [6]ಶ್ರೀ ಹರಿದಿನ ಗೆದ್ದಂಥ
[7]ಹಳಬರೊಳಿರಿಸು ಕಂಡ್ಯ ಎನ್ನನು ೩

[8]ಅಂಕಕ್ಕೆ ರಥವ ನಡೆಸಿದವರೊಳು ನಿ
[9]ಶ್ಶಂಕೆ ಧರ್ಮಪ ಗೆದ್ದ ಹಿರಿಯರೊಳು
[10]ಲಂಕೆಯ ಅನುದಿನ ಸ್ಥಿರ ರಾಜ್ಯವಾಳಿದ
ಕಿಂಕರರೊಳಿರಿಸು ಕಂಡ್ಯ ಎನ್ನನು ೪

[11]ಕಾಟಿಗೆ ಕಾಸು ಕೊಟ್ಟವರು ರಾಯರ ಪಙ್ತಿ
ಊಟವ ಬಯಸಿದಂತೆ ನಾ ಬೇಡಿದೆ
ನಾಟಕಧರ ನೆಲೆಯಾದಿಕೇಶವ ನಿ
ನ್ನಾಟದೊಳಿರಿಸು ಕಂಡ್ಯ ಎನ್ನನು ೫

### ೬೦ ರಾಗ ಭೈರವಿ – ಆಟತಾಳ

ರಮಣಿ ಕೇಳೆಲೆ ಮೋಹನ ಶುಭಕಾಯನ
ಅಮರ ವಂದಿತ ರವಿ ಶತಕೋಟಿ ತೇಜನ
ವಿಮಲ ಚರಿತ್ರದಿ ಮೆರವ ಶ್ರೀಕೃಷ್ಣನ
ಕಮಲ ವದನೆ ನೀ ತೋರೆ ರಮಣಿ ಪ

[12]ಬಾಯೊಳಗಿಹಳ [13]ಗಂಡನ [14]ನಿಜತಮ್ಮನ
[15]ತಾಯ [16]ಪಿತನ [17]ಮಡದಿಯ [18]ಧರಿಸಿದನ
[19]ಸ್ತ್ರೀಯಳ [20]ಸುತನ ಕೈಯಲಿ [21]ಶಾಪ ಪಡೆದನ
[22]ದಾಯಾದ್ಯನ [23]ಮಗನ

---

1 ಶುಕ 2 ಶೌನಕ 3 ಗಂಗೆ 4 ಭೀಷ್ಮ 5 ಮೋಹಿನಿ 6 ರುಕ್ಮಾಂಗದ 7 ಬಕದಾಲ್ಭ್ಯ 8 ಅರ್ಜುನ 9 ವಸಿಷ್ಠ 10 ವಿಭೀಷಣ 11 ಗಂಜಿಗೆ

12 ಸರಸ್ವತಿ 13 ಬ್ರಹ್ಮ 14 ಮನ್ಮಥ 15 ಲಕ್ಷ್ಮಿ 16 ಸಮುದ್ರರಾಜ 17 ಗಂಗೆ 18 ಶಿವ 19 ಪಾರ್ವತಿ 20 ಗಣಪತಿ 21 ಚಂದ್ರ 22 ಸೂರ್ಯ 23 ಕರ್ಣ

[1]ಸಾಯಕವದು ತೀವ್ರದಿ ಬರುತಿರೆ ಕಂಡು
[2]ಮಾಯಾಪತಿ ಭೂಮಿಯನೊತ್ತಿ ತನ್ನಯ
[3]ಬೀಯಗಾರನ ತಲೆಗಾಯಿದಂಥ
ರಾಯನ ಕರೆದು ತೋರೇ ರಮಣಿ ೧

[4]ನಾಲಿಗೆ ಎರಡರವನ [5]ಭುಂಜಿಸುವನ
[6]ಮೇಲೇರಿ ಬಹನ [7]ತಂದೆಯು [8]ಇಹಗಿರಿಯನು
[9]ಲೀಲೆಯಿಂದಲಿ ಕಿತ್ತೆತ್ತಿದ ಧೀರನ
[10]ಕಾಳಗದಲಿ ಕೊಂದನ
[11]ಲೋಲಲೋಚನೆಯ [12]ಮಾತೆಯ [13]ಪುತ್ರ [14]ನಣುಗನ
[15]ಮೇಲುಶಕ್ತಿಗೆ [16]ಉರವಾಂತು [17]ತನ್ನವರನ್ನು
ಪಾಲಿಸಿದಂಥ ದಾತನಹ ದೇವನ
ಲೋಲೆ ನೀ ಕರೆದು ತೋರೇ ರಮಣಿ ೨

[18]ಉರಿಯೊಳು ಜನಿಸಿದವನ [19]ನಿಜ ತಂಗಿಯ
[20]ಶರಗ ಪಿಡಿದ ಖಳ [21]ನಣ್ಣನ [22]ತಂಗಿಯ
[23]ವರನ ತಲೆಯನು ಕತ್ತರಿಸಿದ [24]ಧೀರನ
[25]ಗುರುವಿನೊಳುದಿಸಿದನ[26]
[27]ಶರವ ತಪ್ಪಿಸಿ ತನ್ನ ದಾಸರ್ಗೆ ಅನುದಿನ
ಕರೆದು ವರವನಿತ್ತು ಮನ್ನಿಸಿ ಸಲಹುವ
ಉರಗ ಗಿರಿಯ ವೆಂಕಟಾದಿ ಕೇಶವನ
ಗರತಿ ನೀ ಕರೆದು ತಾರೇ ರಮಣಿ ೩

---

1 ಸರ್ಪಾಸ್ತ್ರ 2 ಕೃಷ್ಣ 3 ಅರ್ಜುನ 4 ಹಾವು 5 ನವಿಲು 6 ಷಣ್ಮುಖ 7 ಶಿವ 8 ಕೈಲಾಸ 9 ರಾವಣ 10 ರಾಮ 11 ಸೀತೆ 12 ಭೂಮಿದೇವಿ 13 ನರಕಾಸುರ 14 ಭಗದತ್ತ 15 ವರಾಹಾಸ್ತ್ರ 16 ಕೃಷ್ಣ 17 ಪಾಂಡವರು 18 ಧೃಷ್ಟದ್ಯುಮ್ನ 19 ದ್ರೌಪದಿ 20 ದುಶ್ಶಾಸನ 21 ದುರ್ಯೋಧನ 22 ದುಶ್ಶಳೆ 23 ಸೈಂಧವ 24 ಅರ್ಜುನ 25 ದ್ರೋಣ 26 ಅಶ್ವತ್ಥಾಮ 27 ಬ್ರಹ್ಮಾಸ್ತ್ರ

—(ನಾರಾಯಣಾಸ್ತ್ರ)

೬೦ ರಾಗ ಮುಖಾರಿ—ತಾಳ

ನೀನಾರ ಬಾಂಧವನೊ ನಿಖಿಳ ಯಾದವರೊಳಗೆ
ಮಾನಾಭಿಮಾನ ವೆಳ್ಳನಿತಿಲ್ಲ ಕೃಷ್ಣ ಪ

ದೇವಕಿದೇವಿಯುದರದಿ ಜನಿಸಿ ಬಾಲ್ಯದಲಿ
ಓವಿ ಮೊಲೆ ಕುಡಿಸಿದಳ ಅಸುವ ಸೆಳೆದು
ಮಾವ ಕಂಸನ ಕೊಂದು ಮನುಜ ವೇಷವ ತಾಳಿ
ಗಾಂ-ಡೀವಿಯರಮನೆಯ ಬಂಡಿಯ ಬೋವನಾದೆ ೧

ಸುರನದಿಯ ಸುತನು ಪಾಂಡವರಿಗಾಪ್ತನು ನಿನಗೆ
ಪರಮ ಭಕ್ತನು ಸ್ವಯಿಚ್ಛಾಮರಣಿಯು
ಧುರದೊಳಗೆ ಪೂರ್ವ ವೈರದ ಶಿಖಂಡಿಯ ತೋರಿ
ಶರಮಂಚದೊಳುಪಾಯದಲಿ ಮಲಗಿಸಿದೆ ೨

ಸೋದರತ್ತೆಯ ಸೊಸೆಯ ಮಗ ನಿನಗೆ ಭಾವಿಸಲು
ಸೋದರಳಿಯನು ಮೂರು ಲೋಕವರಿಯೆ
ನಾಧಿಸಿಯೆ ಅಸಮ ಚಕ್ರ ವ್ಯೂಹವ ರಚಿಸಿ
ಸೋದರನ ಷಡುರಥರ ಕೈಲಿ ಕೊಲ್ಲಿಸಿದೆ ೩

ಕುರುಪತಿಯ ಮೈದುನನ ಕೊಲ್ಲ ಬಗೆದವನ ಸಂ
ಗರದೊಳೇರಿಸಿ ನುಡಿದ ನುಡಿಯ ಕೇಳ್ದು
ಪರಿದು ರವಿಮಂಡಲಕೆ ಮರೆಯ ಚಕ್ರದಿ ಮಾಡಿ
ನರನ ಕೈಯಿಂದ ಸೈಂಧವನ ಕೊಲ್ಲಿಸಿದೆ ೪

ಶಪಥದಲಿ ರಣದೊಳರಸನ ಹಿಡಿವೆನೆಂಬವಗೆ
ತಪಸಿಗಳ ತಂದು ತತ್ವವ ಬೋಧಿಸಿ
ಕಪಟವರಿಯದ ನೃಪನ ಕೈಯೊಳನೃತವ ನುಡಿಸಿ
ಉಪಮೆಯಲಿ ಶಸ್ತ್ರ ಪಂಡಿತನ ಕೊಲ್ಲಿಸಿದೆ ೫

ಯಮಳರನು ಪಡೆದ ತಾಯಿಗೆ ಸಹೋದರನು ಭೂ
ರಮಣರೊಳಗಗ್ಗಳೆಯ ನತಿಧೈರ್ಯನು
ಸಮರದಲಿ ರವಿಸುತನ ರಥಕೆ ಸೂತನ ಮಾಡಿ
ಯಮಸುತನ ಕೈಲಿ ಮಾವನನು ಕೊಲ್ಲಿಸಿದೆ ೬

ಜನವರಿಯದಂತೆ *ಜೀವನದೊಳಡಗಿರ್ದವಗೆ
ಮನಕೆ ಖತಿಗೊಳಿಸಿ ಬರೆ ಸೆಳೆದು ನಗುತ
ಅನುವರದೊಳಾಯತದ ತೊಡೆಯ ಸನ್ನೆಯ ತೋರಿ
ಅನಿಲಜನ ಕೈಲಿ ಕೌರವನ ಕೊಲ್ಲಿಸಿದೆ ೭

ಉರಿಯೊಳಗೆ ಜನಿಸಿದಂಗನೆಯ ನಿಜಸುತರು ಮಂ
ದಿರದೊಳೈವರು ನಿದ್ರೆಗೈಯುತಿರಲು
ನರವೃಕೋದರ ಧರ್ಮನಂದನರ ನಗಲಿಸಿಯೆ
ಗುರುಸುತನ ಕೈಲಿ ಬಾಲಕರ ಕೊಲ್ಲಿಸಿದೆ ೮

ಈ ವಿಧದೊಳವರ ಸುರಲೋಕದಲಿ ನೆಲೆಗೊಳಿಸಿ
ಭಾವಮೈದುನರೈವರನು ರಕ್ಷಿಸಿ
ಭೂವಲಯದೊಳು ಕೀರ್ತಿಪಡೆದು ಎಸೆವ ನಮ್ಮ
ದೇವ ನೆಲೆಯಾದಿಕೇಶವ ವೆಂಕಟೇಶ ೯

೬೨ ರಾಗ ಶ್ರೀರಾಗ—ತಾಳ

ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ ದು
ಷ್ಕರ್ಮೇಂದ್ರಿಯಕ್ಕೆ ಕಾಲ್ಕೆರಗುತ್ತಲಿಹೆ ಮರುಳೆ ಪ

ಪುಸ್ತಕವನಿಟ್ಟು ಪೌರಾಣ ಶಾಸ್ತ್ರಂಗಳಿಂ
ವಿಸ್ತರಿಸಿ ಹರಿಯ ಕಲ್ಯಾಣಗುಣ ಕಥೆಯ
ಸ್ವಸ್ಥದಿಂ ಕುಳ್ಳಿರ್ದು ಕೇಳೆಂಬ ರಾವಿನಲಿ
ಮಸ್ತಕಕೆ ವ್ಯಥೆ ಬಂದು ಮನೆಗ್ಹೊರಟು ನೀ ಬರುವೆ

ಹಸ್ತದಿಂ ಹಣ ಭತ್ತ ಹಚ್ಚಡಂಗಳ ಕೊಟ್ಟು
ᐩಕುಸ್ತರಿಸಿ ಬಿನಗು ಚಾರಿತ್ರ್ಯವಂ ಲಾಲಿಸುತ
ದುಸ್ತರ್ಕಲೆತ್ತ ಚದುರಂಗ ಪಗಡೆಗುದ
ಯಸ್ತಮಾನದತನಕ ನೀನೇಳದಿಹೆ ಮರುಳೆ ೧

* ನೀರಿನಲ್ಲಿ
ᐩ ಉಪಚಾರಮಾಡಿ

ಸುರಭಿ ಶಾವಂತಿ ಮಲ್ಲಿಗೆ ನೊಲ್ಲೆ ಬಕುಳ ಪಾ
ದರಿ ಚಂಪಕಾ ಕಾಂಚಿ ಕಣಿಗಲು ಶ್ರೀ ತುಳಸಿ
ಪರಿಮಳದ ಪಚ್ಚೆತೆನೆ ಹರಿಪಾದಕರ್ಪಿಸುತೆ
ನಿರುಮಾಲ್ಯ ಪರಿಮಳವ ನಾಘ್ರಾಣಿಸೆನೆ ಒಲ್ಲೆ
ಬಿರಿವ ಕೆಂಜಾಜಿ ಪುಷ್ಪಂಗಳಂ ವನಿತೆಯರ
ಸಿರಿ ಮುಡಿಗೆ ಮುಡಿಸಿ ಕುಂತಳ ಸೌರಭವ ಕಂಡು
ಹರುಷದಿಂ ರೋಮ ಪುಳಕಿತನಾಗುತಡಿಗಡಿಗೆ
ಪರಮ ಸಂತೋಷಮಂ ನೀ ಪಡೆಯುತಿಹೆ ಮರುಳೆ ೨

ಶತಲಕ್ಷ ಕೋಟಿ ಪ್ರಣತೆಯಲ್ಲಿ ಬೆಳಗಿ ಗೋ
ಘೃತ ತೈಲ ದೀಪವಚ್ಯುತ ನಿಲಯದಲಿ ಭಾಗ
ವತ ನೃತ್ಯವಂ ನೋಡುತತಿಶಯದ ಹರಿದಿನ
ವ್ರತದಲ್ಲಿ ಜಾಗರವ ಮಾಡದಲೆ ನಿದ್ರೆಗೈವೆ
ಕೃತಕ ಪಣ್ಯಾಂಗನೆಯ ಚತುರ ನೃತ್ಯಕೆ ಮನೋ
ರಥ ಸಿದ್ಧಿಗೊಳಿಸಿ ಈಕ್ಷಿಪೆನೆಂದು ಕುಶಲ ಸಂ
ನುತಿವಿಡಿದು ಬೆಳತನಕ ಕುಳ್ಳಿರುತ ಜಡತೆ ವ
ರ್ಜಿತನಾಗಿ ಪರಮ ಸಂತಸ ಪಡೆಯುತಿಹೆ ಮರುಳೆ ೩

ಗಂಧ ಶಾಲ್ಯಾನ್ನ ನವಘೃತ ತೋಯ ಪಳಿದ್ಯ ನಲ
ವಿಂದ ಪರಮಾನ್ನ ಮಹಶಾಕ ಶಿಖರಣೆಪೇಯ
ಒಂದೆರಡು ಪರುರವಿಸಿ ದ್ವಾದಶೀಯಲಿ ಶ್ರೀ ಮು
ಕುಂದಾರ್ಪಣವ ಮಾಡಿ ಮನೆಯೊಳಗೆ ಉಣ್ಣದಿಹೆ
ಬಂದ್ಯಾವನಾದೊಡಂ ಕರೆಯೆ ದೇಹದ ಪುಣ್ಯ
ವೆಂದವರ ಮನೆಗಳಿಗೆ ಪೋಗಿ ನೀ ಕುಳ್ಳಿರ್ದ
ಚಂದದಿಂ ಬಣ್ಣಿಸುತ ಮಿಂಚು ಕೂಳುಗಳನ್ನು
ತಿಂದೊಡಲ ಪೊರೆದು ಕಾಲವ ಕಳೆಯುತಿಹೆ ಮರುಳೆ ೪

ತಿದ್ದಿಡುವ ವಿಮಲ ವೈಷ್ಣವರು ಬರುತಿರಲು ಕಂ
ಡೆದ್ದು ಪದಗಳಿಗೆ ನಮಸ್ಕಾರವನು ಮಾಡದಲೆ
ಉದ್ದು ಕನ್ನಡಿಮೇಲೆ ಉರುಳುವೊಲ್ ಷಡ್ವರ್ಗ
ಕೆದ್ದು ದುಷ್ಕರಪದಕೆ ಬಿದ್ದು ನೀ ನರಳುತಿಹೆ
ಮದ್ದ ನಾ ಪೇಳುವೆನು ಬುದ್ಧಿಯಂ ತಿಳಿ ವಿಶ್ವ
ದುದ್ಧಾರಕನು ಕಾಗಿನೆಲೆಯಾದಿಕೇಶವನ
ಚಿದ್ಗುಣ ಸ್ಮರಣೆಯನು ಮಾಡುತಲಿ ಜವನವರ
ಗೆದ್ದು ಸಿರಿ ವೈಕುಂಠ ಪದವಿಯನು ಪಡೆ ಮರುಳೆ ೫

೬೩ ರಾಗ ಸೌರಾಷ್ಟ್ರ—ಅಟತಾಳ

ಮಾಡು ದಾನ ಧರ್ಮ ಪರ ಉಪಕಾರವ ಮರೆಯದಿರೆಚ್ಚರಿಕೆ ಪ
ಕೇಡ ನೆನೆಯಬೇಡ ನಂಬಿದವರ ಮೇಲೆ ಕೆಡುವೆ ನೀನೆಚ್ಚರಿಕೆ ಅ

ಬಾಳು ಬದುಕು ಸಿರಿ ಇರುವಾಗ ಬಂಧು ಬಳಗಗಳೆಚ್ಚರಿಕೆ
ಹಾಳು ಸಂಸಾರಕ್ಕೆ ಹಲವರ ಬಾಯ್ಗಳ ಬಡಿಯದಿರೆಚ್ಚರಿಕೆ ೧
ಮೂಢರ ಒಡನಾಡಿ ಮುಂದೆ ಕೆಡಲಿಬೇಡ ಮೋಸ ನೋಡೆಚ್ಚರಿಕೆ
ನಾಡೊಳು ಸುಜನರ ನೋಡಿ ನಡೆ ಕಂಡ್ಯ ನಟನೆ ಬೇಡೆಚ್ಚರಿಕೆ ೨
ಚೆನ್ನಾಗಿ ಬದುಕಿದೆ ಗಳಿಸಿದೆ ನಾನೆಂಬ ಹೆಮ್ಮೆ ಬೇಡೆಚ್ಚರಿಕೆ
ನಿನ್ನಾಯ ಮುಗಿಯಲು ಯಮದೂತರು ಬಂದು ಎಳೆಯುವರೆಚ್ಚರಿಕೆ ೩
ಹೆಣ್ಣು ಹೊನ್ನು ಮಣ್ಣು ನಿನ್ನನಗಲಿಸಿ ಹೋಗುವರೆಚ್ಚರಿಕೆ
ಮುನ್ನ ಮಾಡಿದ ಪುಣ್ಯ ಬೆನ್ಹತ್ತಿ ಬರುವುದು ಮುಂದೆ ನೋಡೆಚ್ಚರಿಕೆ ೪
ಒಬ್ಬರಂತೆಲ್ಲರ ನೋಡಿ ಸತ್ಕರ್ಮದಿ ಉಬ್ಬ ಬೇಡೆಚ್ಚರಿಕೆ
ಕಬ್ಬು ಬಿಲ್ಲನ ಪಿತನ ಏಕಾಂತ ಭಾವದಿ ನೆರೆನಂಬು ಎಚ್ಚರಿಕೆ ೫
ತಿಂದೋಡಿ ಬಂಧುಬಳಗ ತಪ್ಪಿಸಿಕೊಂಬರೆಂದು ನೋಡೆಚ್ಚರಿಕೆ
ಎಂದೆಂದು ಅಗಲದ ಬಂಧು ಶ್ರೀ ಹರಿ ನಮಗೆಂದು ನೋಡೆಚ್ಚರಿಕೆ ೬
ಕಾಲನ ದೂತರು ಯಾವಾಗ ಎಳೆವರೊ ಕಾಣದು ಎಚ್ಚರಿಕೆ
ಬೇಲೂರು ಪುರವಾಸ ನೆಲೆಯಾದಿಕೇಶವನಾಳಾಗು ಎಚ್ಚರಿಕೆ ೭

೬೪ ರಾಗ ಸುಖಾರಿ—ಝಂಪೆತಾಳ

ಸಂಸಾರವೆಂಬ ಸಾಗರವನುತ್ತರಿಸುವೊಡೆ
ಕಂಸಾರಿ ನಾಮವೊಂದೇ ಸಾಕು ಮನವೆ ಪ.

ಯತಿಯಾಗ ಬೇಡ ನೀ ವೈರಾಗ್ಯವನ ಪಿಡಿದು
ವ್ರತವ ಮಾಡಿದೆನೆಂಬ ಹೆಮ್ಮೆ ಬೇಡ
ಶ್ರುತಿಸ್ಮೃತಿಯ ನೋಡಿದೆನೆಂಬ ಚೇಷ್ಟೆಯು ಬೇಡ
ರತಿಪತಿ ಪಿತನಾಮವೊಂದೆ ಸಾಕು ಮನವೆ ೧

ತನುವ ದಂಡಿಸಿ ಶುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ
ಅನುದಿನವು ನೀರೊಳಗೆ ಮುಳುಗಿ ನಡುಗಲು ಬೇಡ
ವನಜನಾಭನ ನಾಮ ನೆನೆಕಂಡ್ಯ ಮನವೆ ೨

ತೀರ್ಥಯಾತ್ರೆಯ ಮಾಡಿ ಬಹುವಿಧದಿ ಬಳಲಿ, ಕೃ
ತಾರ್ಥನಾದೆನೆಂಬ ಹಮ್ಮು ಬೇಡ
ಪಾರ್ಥಸಾರಥಿ ಕಾಗಿನೆಲೆಯಾದಿಕೇಶವನ ಸಂ
ಕೀರ್ತನೆಯ ಮಾಡಿ ಸುಖಿಯಾಗೊ ಮನವೆ ೩

೬೫ ರಾಗ ಮಧ್ಯಮಾವತಿ—ತಾಳ

ತಾನ್ಯಾರೋ ತನ್ನ ದೇಹವ್ಯಾರೋ ಪ.
ದಿವ್ಯ-ಜ್ಞಾನದಿಂದ ತಿಳಿದವನೆ ಪರಮಯೋಗಿ ಅ

ಸೂತಿಕಾವಸ್ಥೆಯಲಿ ನವಮಾಸ ತುಂಬಿದ ಬಳಿಕ
ಭ್ರಾಂತಿಯಲಿ ಬಂದು ಬಂದೊಡಲವೆರೆಸಿ
ಪಾತಕವೆ ಒಂದು ಮೂರುತಿಯಾದ ತನುವೆಂದು
ತಾ ತಿಳಿದು ಸಿಕ್ಕದವನೆ ಪರಮಯೋಗಿ ೧

ಅಸ್ಥಿಪಂಜರ ಚರ್ಮದ ಹೊದಿಕೆಯೇ ತನುವು
ವಿಸ್ತರಿಸಿ ಬಿಗಿದ ಮಾಂಸದ ಬೊಂಬೆಯು
ರಕ್ತ ಮಲಮೂತ್ರ ಕೀವಿನ ಪ್ರಳಯದೊಡಲೆಂದು
ಸ್ವಸ್ಥದಿಂದ ತಿಳಿದವನೆ ಪರಮಯೋಗಿ ೨

ಘೋರ ನರಕದ ತನುವು ಎಂದು ಮನದಲಿ ತಿಳಿದು
ಗೇರು ಹಣ್ಣಿನ ಬೀಜದಂತೆ ಹೊರಗಿದ್ದು
ಮಾರಪಿತ ಕಾಗಿನೆಲೆಯಾದಿಕೇಶವನ ಪಾದ
ವಾರಿಜವ ನೆನೆದವನೆ ಪರಮಯೋಗಿ ೩

೬೬ ರಾಗ ಸುರಟಿ—ತಾಳ

ಮಂಗಳಂ ಮಂಗಳಂ ಪ
[1]ಅಂಧಕ [2]ನನುಜನ [3]ಕಂದನ [4]ತಂದೆಯ
[5]ಕೊಂದನ [6]ಶಿರದಲಿ ನಿಂದವನ
[7]ಚಂದದಿ ಪಡೆದವನ [8]ನಂದನೆಯಳ ನಲ
[9]ವಿಂದ ಧರಿಸಿದ ಮುಕುಂದನಿಗೆ ೧

[10]ರಥವನಡರಿ ಸುರಪಥದಲಿ ತಿರುಗುವ
[11]ಸುತನಿಗೆ [12]ಶಾಪವನಿತ್ತವನ
[13]ಖತಿಯನು ತಡೆದನ [14]ಸತಿಯ [15]ಜನನಿ [16]ಸುತ
[17]ಸತಿಯರನಾಳಿದ [18]ಚತುರನಿಗೆ ೨

[19]ಹರಿಯ [20]ಮಗನ [21]ಶಿರತರಿದನ [22]ತಂದೆಯ
[23]ಹಿರಿಯಮಗನ [24]ತಮ್ಮನ [25] ಪಿತನ
ಭರದಿ [26]ಭುಜಿಸಿದನ ಶಿರದಲಿ [27]ನಟಿಸಿದ
ವರ ಕಾಗಿನೆಲೆಯಾದಿಕೇಶವಗೆ ೩

---

1 ಧೃತರಾಷ್ಟ್ರ 2 ಪಾಂಡು 3 ಧರ್ಮರಾಯ 4 ಯಮ 5 ಈಶ್ವರ 6 ಚಂದ್ರ 7 ಸಮುದ್ರರಾಜ ೮ ಲಕ್ಷ್ಮಿ 9 ವಿಷ್ಣು 10 ಸೂರ್ಯ 11 ಕರ್ಣ 12 ಪರಶುರಾಮ 13 ರಾಮ 14 ಸೀತೆ 15 ಭೂಮಿದೇವಿ 16 ನರಕಾಸುರ 17 ಗೋಪಸ್ತ್ರೀಯರು (ಷೋಡಶ ಸಹಸ್ರ ಸ್ತ್ರೀಯರು) 18 ಕೃಷ್ಣ 19 ಸೂರ್ಯ 20 ಕರ್ಣ 21 ಅರ್ಜುನ 22 ಪಾಂಡು 23 ಯುಧಿಷ್ಠಿರ 24 ಭೀಮ 25 ವಾಯು 26 ಸರ್ಪ (ಕಾಳಿಂಗ) 27 ಶ್ರೀಕೃಷ್ಣ

೬೭ ರಾಗ ಸೌರಾಷ್ಟ್ರ—ಅಟತಾಳ

ನೆರೆದು ಗೋಪಿಯರೆಲ್ಲರು ಕೃಷ್ಣಯ್ಯನ
ನರಗ ಪಿಡಿದುಕೊಂಡು ಪ
ಭರದಿಂದ ಬಂದು ಯಶೋದೆಗೆ ಚಾಡಿಯ
ನರುಹಿದರತಿವೇಗದಿ ಅ

ಬಲು ಕಳ್ಳ ನಿನ್ನ ಮಗ ಗೋಪೆಮ್ಮ ಕೇಳೆ, ಹಾಲು ಕರೆಯುತಿರಲು
ತೊಲೆಗೆ ನಿಚ್ಚಣಿಕೆಯ ಹಾಕಿ ಸುರಿವನು ನೆಲುವಿನ ಪಾಲ್ಮೊಸರ ೧
ಅಮ್ಮಯ್ಯ ಇಲ್ಲ ಕಾಣೆ ಇವಳು ಎನ್ನ, ಸುಮ್ಮನೆ ದೂರುವಳೆ
ಹಮ್ಮಿಂದ ನಾನವಳಟ್ಟಕ್ಕೆ ನೆಗೆವರೆ ಬೊಮ್ಮ ಜಟ್ಟಿಗನೇನಮ್ಮ ೨
ಮತ್ತೊರ್ವಳಿಂತೆಂದಳು ನಿನ್ನೀ ಮಗ, ಹತ್ತಿ ಗವಾಕ್ಷಿಯಿಂದ
ಬಚ್ಚಿಟ್ಟ ಬೆಣ್ಣೆಯನೆಲ್ಲವ ಮೆದ್ದನು ಮಕ್ಕಳಿಗಿಲ್ಲದಂತೆ ೩
ಗಡಿಗೆ ಬೆಣ್ಣೆಯ ಮೆಲ್ಲುವರ ಎನ್ನ ಹೊಟ್ಟೀ, ಕೆರೆಭಾವಿಯೇನೆ ಅಮ್ಮ
ಹುಡುಗರಿಗೆಂದು ಬಚ್ಚಿಟ್ಟ ಬೆಣ್ಣೆಯನೆಲ್ಲ ಹೊಡೆದರವರ ಮಕ್ಕಳು ೪
ಮಲಗೊ ಮಂಚದಮೇಲೆ ನಾ ಮಲಗಿರೆ, ಮೊರೆವ ಹಾವನ ಪಿಡಿದು
ಅರಿಯದಂತೆ ಬಂದು ಮುಸುಕಿನೊಳಗೆ ಇಟ್ಟು, ಸರಸರ ಪೋದನಮ್ಮ ೫
ಹರನಡರುವ ಹಾವನು ನಾ ಪಿಡಿವರೆ, ತರಳನು ತಡೆಕಾರನೆ
ಹರಕೆಯ ಹೊತ್ತುದನೊಪ್ಪಿಸದಿದ್ದರೆ ಗುರುತು ತೋರಲಿ ಒಂತೇನೊ ೬
ಮಕ್ಕಳ ಪಡೆದವರು ಇಲ್ಲದ ಕಳವನಿಕ್ಕಬಹುದೆ ಕೃಷ್ಣಗೆ
ಸಿಕ್ಕಿದ ತಪ್ಪು ಸಹಿತ ಹಿಡಿತಂದರೆ ತಕ್ಕ ಬುದ್ಧಿಯ ಪೇಳುವೆ ೭
ಅಣುಘನ ರೂಪ ಕಾಣೇ ನಿನ್ನೀ ಮಗ, ಚಿನುಮಯ ರೂಪ ಕಾಣೇ
ಘನಮಹಿಮನು ಸಿರಿ ಕಾಗಿನೆಲೆಯಾದಿಕೇಶವರಾಯ ಕಾಣೆ ೮

೬೮ ರಾಗ ರೇಗುಪ್ತಿ—ಆದಿತಾಳ

ತೋರೆ ಬೇಗನೆ ಸಖಿ ತೋರ ಮುತ್ತಿನ ಹಾರ
ಭಾರವಾಗಿದೆ ಎನಗೆ ಪ
ಈರೇಳು ಲೋಕವ ಪೊರೆವ ದಯಾನಿಧಿ
ಬಾರನೇತಕ ಮನೆಗೆ ಓ ಸಖಿಯೆ ಅ

ತರಣತನಯನ ಸುತನ ಬಾಯೊಳನೃತವ ಭರದಿಂದ ನುಡಿಸಿದನ
ತರಣಸುತನ ಬಾಣವೇಗದಂಪದಿ ರಥವ ಧರೆಗೆ ಒತ್ತಿದ ದೇವನ
ತರಣಿಯ ಮರೆಮಾಡಿ ಶಿರವ ತರಿಯೆಂತೆ ನರಗೆ ಸೂಚಿಸಿದಾತನ
ತರಣಿಯೊಡನೆ ಪಂಥವಾಡಿ ತಿರುಗಿದನ ತನಯನಳಿವನ ತೋರಿಸೆ ಸಖಿಯೆ (?) ೧

ಗೋತ್ರ ಭೇದಿಸುತನ ಹೆಂಡಿರ ಮಗನ ಮಾತುಳನಾದವನ
ಕತ್ತಲೆಯಲಿ ಪೋಗಿ ಕುತ್ತಿಟ್ಟವನ ಮೈಯ ಸುತ್ತಿ ಬಾಧಿಸುತಿಪ್ಪನ (?)
ತತ್ವವನರಿತು ಸುತತ್ವವ ಬೋಧಿಸಿ ಉತ್ತರವಿತ್ತವನ
ಮುತ್ತಯ್ಯನ ತಾಯ ಸೆತ್ತ ದೇವನ ಎನ್ನತ್ತಿರ ಕರೆದು ತಾರೆ ಓ ಸಖಿಯೆ ೨

ವರಮುನಿಗಳು ಕೂಡಿ ಸರ್ವೋತ್ತಮನಾರೊ ಪರಿಶೋಧಿಸಬೇಕೆಂದು
ಭರದಿಂದ ಭೃಗುಮುನಿ ಬಂದು ತೋರಿಸೆ ಬೇಗ ಚರಣವನೊತ್ತಿದನ
ಪರಿಪರಿಯಲಿ ದೇವ ಪರಮ ಭಕ್ತರ ಕಾವ ಸುರರಿಗಭಯವಿತ್ತನ
ವರ ವೇಲಾಪುರದಾದಿಕೇಶವನ ಮರೆಯಲಾರೆನೆ ಮನದಿ, ಓ ಸಖಿಯೆ ೩

೬೯ ರಾಗ ಕಾಂಬೋದಿ—ಝಂಪೆತಾಳ

ಆರಿಗಾರಿಲ್ಲಮಾಪತ್ಕಾಲದೊಳಗೆ ಪ
ವಾರಿಜಾಕ್ಷನ ನಾಮ ನೆನೆಕಂಡ್ಯ ಮನವೆ ಅ

ಹಸಿದು ಬಳಲುವಾಗ ಹಗೆ ಕೈಯ ಸಿಕ್ಕಿದಾಗ
ದೆಸೆಗೆಟ್ಟು ಬಹು ವ್ಯಾಧಿಯಲಿ ಇರುವಾಗ
ಅಸಮಾನನಾದಾಗ ಅತಿ ಭೀತಿ ಬರುವಾಗ
ಬಿಸಜನಾಭನ ನಾಮ ನೆನೆಕಂಡ್ಯ ಮನವೆ ೧

ಸಾಲದವರೆಳವಾಗ ಚಾಡಿಮಾತಿಗೆ ಭೂಪ
ಘಾಳಿಘೂಳಸುತತಿಕೋಪದಲ್ಲಿ ಇರುವಾಗ
ಮೇಲು ತಾನರಿಯದೆ ನಿಂದ್ಯ ಹೊಂದಿರುವಾಗ
ನೀಲಮೇಘಶ್ಯಾಮನ ನೆನೆಕಂಡ್ಯ ಮನವೆ ೨

ಪಂಥದಲಿರುವಾಗ ಪದವಿ ತಪ್ಪಿರುವಾಗ
ದಂತಿ ಮದವೇರಿ ಬೆನ್ನತ್ತಿದಾಗ
ಕಂತುಪಿತ ಕಾಗಿನೆಲೆಯಾದಿಕೇಶವನ ನಿ
ಶ್ಚಿಂತೆಯಿಂದಲಿ ನೀನು ನೆನೆಕಂಡ್ಯ ಮದವೆ ೩

೬೦ ರಾಗ ರೇಗುಪ್ತಿ—ತಾಳ

ಆವ ಪರಿಯಲಿ ನಿಮ್ಮನೊಲಿಸಿ ಮೆಚ್ಚಿಪ ವಿಧವು ಅಣುಮಾತ್ರ ತೋರದಲ್ಲ ಪ
ದೇವದೇವೇಶ ನೀನೆಂದು ನಂಬಿರಲು ಕೃಪಾವಲೋಕನದಿ ಸಲಹೋ ದೇವ ಅ

ಫಣಿರಾಜನಾಸನದಿ ಕುಳಿತಿಹಗೆ ಅರಿವೆಯಾ ಸನವ ನಾನೆಂತ್ಹಾಸಲಿ
ಫೆನವಾದ ಗಂಗೆಯನು ಪಡೆದವಗೆ ಕಳಸ ನೀರನದೆಂತು ಮೈಗರೆಯಲಿ
ತನುವಿನ ಪರಿಮಳವು ಘಮಘಮಿಪನಿಗೆ ಚಂದನವದೆಂತು ನಾ ಪೂಸಲಿ
ಅನವರತ ನಾಭಿಯೊಳು ಶತಪತ್ರವಿಹಗೆ ಮಿಕ್ಕಿನ ಪೂವ ಮುಡಿಸಲೆಂತೈ ದೇವ ೧

ಸುರಚಿರೋಜ್ವಲಪೀತವಾಸನಿಗೆ ಉಡುಗೆರೆಯ ಅರಿವೇನ ಪೊದ್ದಿಸಲಿ
ವರಕೌಸ್ತುಭವು ಕೊರಳೊಳಗೆ ಇಪ್ಪವಗೆ ಆಭರಣವಾವುದ ತೊಡಿಸಲಿ
ತರಣಿ ಶತಕೋಟಿ ತೇಜನ ಮುಂದೆ ಹ್ಯಾಗೆ ನಾಪೇರತೊಂದು ದೀಪವಿಡಲಿ
ನೆರವಿಸ ಫಣಿಪತಿಯ ಸ್ತೋತ್ರ ದೂರನ ನಾನು ತುತಿವೆನೆಂತೈಯ ದೇವದೇವ ೨

ವನಜಜಾಂಡ ಕೋಟಿ ಉದರಂಗೆ ಆವುದನು ಉಣಿಸಿ ತೃಪ್ತಿಯಮಾಡಲಿ
ಅನಿಮಿಷರಿಗಮೃತವನ್ನೆರದವಗೆ ತೃಷೆಯ ನೀರಿನೊಳೆಂತು ಸಂತವಿಡಲಿ
ವಿನತೆಯಾತ್ಮಜ ಪಕ್ಷದನಿಲನಿರೆ ಬದಲು ಬೀಸಣಿಗೆ ಇನ್ನೇಂ ಬೀಸಲಿ
ಅಣುರೇಣು ಪರಿಪೂರ್ಣ ಮೂರುತಿಗೆ ನಾ ಪ್ರದಕ್ಷಿಣೆಯೆಂತು ಸುತ್ತಿ ಬರಲಿ ದೇವ ೩

ಮಿಗೆಫಣಿಯ ಫಣದಾತಪತ್ರವಿರುವಗೆ ನೆರಳಿಗೆ ಕೊಡೆಯನೇಂ ಪಿಡಿಯಲಿ
ಪಗಲಿರಳು ಸಾಮಗಾನಪ್ರಿಯನ ಮುಂದೆ ಗೀತೆಗಳ ನಾನೇಂ ಪಾಡಲಿ
ಜಗವರಿಯೆ ಲಕ್ಷ್ಮೀದೇವೀಪತಿಗೆಸ್ವು ಹೊನ್ನುಗಳ ದಕ್ಷಿಣೆಯ ಕೊಡಲಿ
ನಿಗಮತತಿ ಕಾಣದ ಮಹಿಮನಿಗೆ ನಮಿಸುವಬಗೆಯ ನಾನರಿವೆನೆಂತೈ ದೇವ ೪

ಒಲಿಸುವುದನರಿಯೆ ಮೆಚ್ಚಿಸುವ ಬಗೆಯರಿಯೆ ಹೊಗಳುವ ಹೊಲಬ ನಾನರಿಯೆನು
ತಿಳಿದುದಿಲ್ಲವು ಷೋಡಶೋಪಚಾರದ ಪೂಜೆಗಳಲೊಂದು ಪರಿಯಾದರು
ನೆಲೆಯಗಾಣೆನೊ ನಿಗಮಶಾಸ್ತ್ರ ನವವಿಧ ಭಕ್ತಿಯೊಳಗೊಂದು ಬಗೆಯಾದರು
ಅಗಲ ಸೇವೆಯನೊಪ್ಪಿಕೊಂಡು ಶರಣನ ಸಲಹೊ
ನೆಲೆಯಾದ ಕೇಶವನೆ ಸ್ವಾಮಿ-ಪ್ರೇಮಿ ೫

೬೧ ರಾಗ ಕಾಂಬೋದಿ—ಝಂಪತಾಳ

ಕಾವನೈಯನ ಕಳುಹು ರಮಣಿ ಪ
ಕೋವಿದರ ಪಡೆದ ಬಡದಾದಿ ಕೇಶವನ ಅ
ಚಂದ್ರವಂಶಜ ರಾಯನನುಜ ಸಖನಾಪವನ
ಚಂದ್ರವೈರಿಯಮೇಲೆ ಪವಳಿಸಿದವನ
ಚಂದ್ರಮನ ಸೋದರಿಯ ಕೈಪಿಡಿದಂಥವನ
ಚಂದ್ರಧಾಮನ ಮನೆಗೆ ಕಳುಹೆ ಕಮಲಾಕ್ಷಿ ೧
ಕಮಲನಾಭನ ಕಮಲಸಖ ಕೋಟಿತೇಜನ
ಕಮಲ ಕೋರಕದಿ ಜನಿಸಿದನಯ್ಯನ
ಕಮಲವನು ಕರದಲ್ಲಿ ಪಿಡಿದಿಹನ ಬೇಗದಲಿ
ಕಮಲವದನನ ಮನೆಗೆ ಕಳುಹೆ ಕಮಲಾಕ್ಷಿ ೨
ಬಾಲತನದಲಿ ಬಹಳ ಅಸುರರನು ಸೀಳಿದನ
ಲೀಲೆಯಿಂದಲಿ ಬಕ್ತರನು ಸಲಹುತಿಹನ
ನೀಲಮೇಘಶ್ಯಾಮ ಭಾಗ್ಯಪುರದಲಿ ನಿಂದ
ಶ್ರೀ ಲತಾಂಗಿಯ ರಮಣ ಆದಿಕೇಶವನ ೩

೬೨ ರಾಗ ಆರಭಿ—ತಾಳ

ಯಾದವರಾಯ ಬೃಂದಾವನದೊಳು ವೇಣುನಾದವ ಮಾಡುತಿರೆ ಪ
ರಾಧಾ ಮುಂತಾದ ಗೋಪಿಯರೆಲ್ಲ ಮಧುಸೂದನ ನಿಮ್ಮನು ಸೇವಿಸುತ್ತಿರೆ ಅ
ಸುರರು ಪಿಂಬರದಿ ಸಂದಣಿಸಿರೆ ಅ
ಪ್ಸರ ಸ್ತ್ರೀಯರು ಮೈಮರೆದಿರೆ
ಕರದಲ್ಲಿ ಕೊಳಲನೂದುತ್ತ ಪಾಡುತ್ತ
ಸರಿಗಮಪದನಿ ಸ್ವರಗಳ ನುಡಿಸುತ ೧
ಹರ ಬ್ರಹ್ಮರು ನಲಿದಾಡುತಿರೆ ತುಂ
ಬುರು ನಾರದರು ಪಾಡುತಿರೆ
ಪರಿಪರಿ ವಿಧದಲಿ ರಾಗವ ನುಡಿಸುತ
ತುರು ಪಿಂಡುಗಳ ಕೂಡುತ ಪಾಡುತ ೨

ತುರು ಹಿಂಡುಗಳ ತರತರದಲಿ ತನ್ನ
ಕರದಿಂ ಬೋಳೈಸಿ ಸಂತೈಸುತಲಿ
ಅರವಿಂದ ದಳನಯನ ಆದಿಕೇಶವರಾಯ
ಕರುಗಳ ಸಹಿತ ಗೋವ್ಗಳನೆಲ್ಲ ತಿರುಹುತ ೩

೬೩ ರಾಗ ಯದುಕುಲಕಾಂಬೋದಿ—ತ್ರಿಪುಟತಾಳ

ನಾನೇನು ಬಲ್ಲೆ ನಿನ್ನ ನಾಮದ ಮಹಿಮೆಯ
ಏನೆಂದು ಕೊಂಡಾಡಿ ಸ್ತುತಿಸಲೊ ದೇವ ಪ
ಹರಿ ಮುಕುಂದನು ನೀನು ನರಜನ್ಮ ಹುಳು ನಾನು
ಪರಮ ಪಾವನ ನೀನು ಪಾಪಿ ನಾನು
ಪರಂಜ್ಯೋತಿಯು ನೀನು ದುರುಳ ತರಳನು ನಾನು
ಪರತರನು ನೀನು ಪಾಮರನು ನಾನು ೧
ಅಣುರೇಣು ತೃಣಕಾಷ್ಟದಲ್ಲಿ ಪೂರ್ಣನು ನೀನು
ತನು ನಿತ್ಯವಲ್ಲದ ಬೊಂಬೆ ನಾನು
ವನಜಭವನನು ಪೆತ್ತ ವೈಕುಂಠಪತಿ ನೀನು
ಕ್ಷಣಕ್ಷಣಕೆ ಅವಗುಣದ ಪ್ರತಿಮೆ ನಾನು ೨
ತಿರುಪತಿವಾಸ ಶ್ರೀ ವೆಂಕಟೇಶನೆ ನಿನ್ನ
ಚರಣ ಸೇವಕರ ಸೇವಕನು ನಾನು
ಗರುಡಗಮನನು ನೀನು ನೆರೆನಂಬಿದವ ನಾನು
ಸಿರಿ ಕಾಗಿನೆಲೆಯಾದಿಕೇಶವನು ನೀನು ೩

೬೪ ರಾಗ ಕಾಂಬೋದಿ—ಝಂಪೆತಾಳ

ತನ್ನ ಪ್ರಾಪ್ತಿಯ ಫಲವ ತಾನರಿಯದೆ ಪ.
ಇನ್ನು ನುಡಿವುದು ಮೂರ್ಖತನವಲ್ಲವೆ ಅ.
ಸರಸಿಜೋದ್ಭವನು ಫಣೆಯೊಳು ಬರೆದು ನಿರ್ಮಿಸಿದ
ತೆರನೊಂದು ಬೇರುಂಟೆ ತಾನರಿಯದೆ
ಕರಕೊಂಡು ತನ್ನವರ ಕೂಡೆ ತಾನಾಡಿದರ
ನೆರೆ ದುಃಖವಿದು ಬಿಟ್ಟು ಕಡೆಗೆ ತೊಲಗುವುದೆ ೧

ಒಡತನವು ಬಂದಲ್ಲಿ ಬಾಯಿ ಬಿಡಲು ತಾ ಮುನ್ನ
ಪಡೆದಂಥ ವಿಧಿ ಬೆನ್ನ ಬಿಡಲರಿವುದೆ
ಅಡಿಗಡಿಗೆ ಶೋಕದಲಿ ಅವರಿವರಿಗುಸುರಿದರೆ
ಒಡತನವು ತಾ ಬಿಟ್ಟು ಕಡೆಗೆ ತೊಲಗುವುದೆ ೨

ದೆಸೆಗೆಟ್ಟು ನಾಡುದೈವಂಗಳಿಗೆ ಎರಗಿದರೆ
ನೊಸಲ ಬರೆಹವ ತೊಡೆದು ತಿದ್ದಲಳವೆ
ವಸುಧೀಶ ಕಾಗಿನೆಲೆಯಾದಿಕೇಶವನಂಘ್ರಿ
ಬಿಸಜವನು ನೀ ಕಂಡು ಸುಖಿಯಾಗು ಮನವೆ ೩

೭೫. ರಾಗ ಮುಖಾರಿ—ಅಟ್ಟತಾಳ

ಸಾಧುಸಜ್ಜನ ಸತ್ಯಗುಣಕೆದುರುಂಟ ಪ
ಮಾಧವ ನಿಮ್ಮ ನಾಮಕೆ ಬೆಲೆಯುಂಟೆ ಅ

ಸುತಲಾಭಕ್ಕಿಂತ ಅಧಿಕ ಲಾಭವು ಉಂಟೆ
ಸತಿಯಿಲ್ಲದವಗೆ ಸಂಪದವೆಂಬೊದುಂಟೆ
ಪತಿಸೇವೆಗಿಂತಲೂ ಸತಿಗೆ ಸೇವೆಯುಂಟೆ
ಮತಿಹೀನರೊಳಗೆ ಚಾತುರ್ಯವೆಂಬೊದುಂಟೆ ೧

ಪಿಸುಣತನಕ್ಕಿಂತ ಅಧಿಕ ಹೊಲೆತನವುಂಟೆ
ವಸುಧೆಯೊಳು ಅನ್ನದಾನಕ್ಕೆ ಸರಿಯುಂಟೆ
ವ್ಯಸನವಾಗಿಹ ನೃಪರಿಗೇ ಸರಿವುಂಟೆ
ಅಶನವ ತೊರೆದ ಯೋಗಿಗೆ ಭಯವುಂಟೆ ೨

ಹರಿಭಕುತಿಯಿಲ್ಲದವಗೆ ಪರಲೋಕವುಂಟೆ
ಪರನಿಂದೆಗಿಂತ ಪಾತಕವೆಂಬೊದುಂಟೆ
ಪರಮ ಸಾತ್ವಿಕರ ಸಮ್ಗುಣಕೆ ಎದುರುಂಟೆ–ಉರಗ
ಪುರದಾದಿ ಕೇಶವನಲ್ಲದೆ ದೈವವುಂಟೆ? ೩

೭೬ ರಾಗ ಶಂಕರಾಭರಣ—ಅಟತಾಳ

ಹ್ಯಾಂಗೆ ನೀ ದಾಸನಾದೀ ? ಪ್ರಾಣೀ- ಪ
ಹ್ಯಾಂಗೆ ನೀ ದಾಸನಾದಿ ಹೀಂಗೆ ಸಂಸಾರದೊಳು
ಮಂಗನಂದದಿ ಭವಾಭಂಗವ ಪಡುವವ ಅ

ಆಸೆಯಾ ಬಿಡಲಿಲ್ಲ ಏಸು ಧನ ಗಳಿಸಿದರು
ದೋಷಕ್ಕೆ ಗುರಿಯಾಗಿ ಹೇಸಿಕೆಯೊಳು ಬಿದ್ದು ೧
ತನುವು ತನ್ನದುಯೆಂದು ತನಯಯಮಾನಿನಿಯರೇ
ಇನಿತಿ ಎನಗೇ ಗತಿ ಎಂದು ನಂಬಿರುವ ನೀ ೨
ಕಾಲನದೂತರು ಕರುಣಾಸಂಪನ್ನರೇ ?
ಕಾಲ ವ್ಯರ್ಥದಿ ಕಳೆದು ಕೆಡುವಂಥ ಕಪಟಿ ನೀ ೩
ತಲೆಹುಳುಕ ನಾಯಂತೆ ಹಲವು ಬೀದಿಗಳ ತಿರುಗಿ
ಗೆಲುಕನಿಂದಲಿ ಮೂಲ ಮಲವ ನಳಿಯಾದ ನೀ (?) ೪
ಉದರಪೋಷಣಕಾರಿ ಮುದದಿಂದ ಚರಿಸಿದೀ
ಮದಗರ್ವ ಎಂಬೋದು ಬದಿಯಲ್ಲಿಟ್ಟುಕೊಂಡು ೫
ಒರಿಯುವಾ ನಿಂದಿಸಿ ಹರಿದಾಸನೆನಿಸಿಕೊಂಡು
ಹೊರೆಯೆ ಹೊಟ್ಟೆಗಾಗಿ ಕೇರಿಕೇರಿ ಚರಿಸಿ ನೀ ೬
ಕಾಲಗೆಜ್ಜೆಗಳ ಕಟ್ಟಿ ಮೇಲೆ ಕರತಾಳ ಕುಟ್ಟಿ
ಶ್ರೀಲೋಲನಾ ಗುಣಮಾಲೆ ಪೊಗಳಾದ ನೀ ೭
ಕುಣಿದು ಮನದಣಿಪಣಿದು ಮಣಿದು ಸಜ್ಜನಪದಕೆ
ಅಣಿಮಾದಿ ಅಷ್ಟ ಸಿದ್ಧಿಗಳ ಗಳಿಸದಲೇ ನೀ ೮
ವೇದಶಾಸ್ತ್ರಗಳನು ನೋದದಿಂದೋದದೆ
ಬಾದರಾಯಣ ಕೃತ ಭಾಗವತ ಕೇಳದಲೇ ೯
ಕಟ್ಟಿ ಕೈ ಪರರಲ್ಲಿ ಪೊಟ್ಟೆಗೋಸುಗವೆ ಕಂ
ಗೆಟ್ಟು ಕಿಟ್ಟಗಟ್ಟ(?)ವ ಘಟ್ಟಿ ಕಬ್ಬಿಣದಂತೆ ೧೦
ನೇಮದಿಂದುಪವಾಸದೇಕಾದಶೀ ವ್ರತವ
ಕಾಮಜನಕನಿಗೆ ನೀನರ್ಪಿಸದಲೇ ಬರಿದೆ ೧೧

ಏಸುದಿನ ಬದುಕಿದರು ಸೂಸುವ ಮರಣ ನದಿ
ಈಸಿ ದಾಟದೆ ಕಾಸುವೀಸಕ ಬಾಳದೆ ೧೨

ಅಂಗಳದೊಳಗಿಪ್ಪ ಮಂಗಳಮೂರ್ತಿ, ಪಾ
ದಂಗಳನು ಹಿಂಗದ ಕಂಗಳಿಂ ಕಾಣದಲೆ ೧೩

ಪಕ್ಕಿವಾಹನನ ಗುಣ ಲೆಕ್ಕಿಸಿ ಪೊಗಳದೆ
ಬಕ್ಕಸ ಬೆರಗಾಗಿ ಅಕ್ಕಿಗೆ ತಿರುಗುವವ ೧೪

ಭೋಗಿಶಯನನ ಪಾದ, ರಾಗದಿಂ ಭಜಿಸದೆ
ಕಾಗಿನೆಲೆಯಾದಿ ಕೇಶವನ ಪದಗಳಲ್ಲಿ-ಹ್ಯಾಂಗೆ ನೀ ೧೫

೭೭ ರಾಗ ಮುಖಾರಿ—ಅಟತಾಳ

ಆವ ಬಲವಿದ್ದರೇನು ದೈವ ಬಲವಿಲ್ಲದವಗೆ ಪ
ವಾಸುದೇವನ ಬಲವು ನಿಜವಾಗಿ ಇಲ್ಲದನಕ ಅ

ನೊಸಲಗಣ್ಣಿನ ಬಲ ನಾಲ್ಕುತರದಾ ಬಲ
ತ್ರಿಶೂಲ ಡಮರುಗ ಅಗ್ನಿ ಫಣಿಯ ಬಲವು
ಪಶುಪತಿಯ ರೂಪಿನ ಬಲವುಳ್ಳ ಶಿಶುಪಾಲನ
ಅಸುರಮರ್ದನ ಕೃಷ್ಣ ಶಿರವ ಛೇದಿಸುವಾಗ ೧

ಹರನ ಕರುಣದ ಬಲವು ಸುರರ ಗೆಲಿದಾ ಬಲ
ಪರಮ ಶಕ್ತಿಯು ತನ್ನ ಭುಜದ ಬಲವೂ
ಧರೆಯನೆತ್ತಿದ ಬಲವುಳ್ಳ ಹಿರಣ್ಯಾಕ್ಷನ
ವರಹನಾಗಿ ಅಚ್ಯುತನು ಶಿರವ ಸೀಳುವಾಗ ೨

ಮುನ್ನ ಗೆಲಿದಾ ಬಲವು ಮುಕ್ಕಣ್ಣ ಹರನ ಬಲ
ತನ್ನ ಲಂಕಿಣಿಯು ಕಾವಲಿನ ಬಲವೂ
ತನ್ನ ವಂಶದ ಬಲವುಳ್ಳ ರಾವಣಶಿರಕೆ
ಘನ್ನ ರಾಘವಸ್ವಾಮಿ ಶರವ ತೊಡುವಾಗ ೩

ಲಿಂಗಪೂಜೆಯ ಬಲ ನಿಶ್ಚಿಂತನಾಗಿಹ ಬಲ
ಹಿಂಗದೆ ಹರನು ಬಾಗಿಲ ಕಾಯ್ದ ಬಲವೂ
ಮುಂಗೈಯ ಶಕ್ತಿ ಸಾವಿರ ತೋಳು ಬಾಣನ
ತುಂಗ ವಿಕ್ರಮಕೃಷ್ಣ ತೋಳ ಖಂಡಿಸುವಾಗ ೪

ಈಸು ದೇವರ ಬಲಗಳಿದ್ದರೆ ಫಲವೇನು
ವಾಸುದೇವನ ಬಲವಿಲ್ಲದವಗೇ
ದೇಶಕಧಿಕ ನೆಲೆಯಾದಿ ಕೇಶವರಾಯನ
ಲೇಸಾದ ಚರಣಕಮಲದ ಬಲವಿಲ್ಲದನಕ ೫

೭೮ ರಾಗ ಸಾವೇರಿ—ಆದಿತಾಳ

ರಂಗ ಬಾರೋ ರಂಗಯ್ಯ ಬಾರೋ ನೀ ಪ
ಬಾರದಿದ್ದರೆ ಎನ್ನ ಪ್ರಾಣವುಳಿಯದು ಅ

ಅತ್ತಿಗೆ ಮೈದುನ ಬಾರೋ ಅತ್ತೆಯಾ ಮಗಳ ಗಂಡ
ಅತ್ತಿಗೆ ಮೇಲತ್ತಿಗೆಯ ನಾದಿನಿ ಸೊಸೆಯ ಗಂಡ ೧

ಮಾವನ ಅಳಿಯ ಬಾರೊ ಮಾವನ ಬೀಗನ ತನುಜ
ಮಾವನ ಮಡದಿಯ ಮಗಳ ತಂಗಿಯಾ ಗಂಡಾ ೨

ಅಂಬುಧಿಶಯನನೆ ಬಾರೊ ಆದಿವಸ್ತುವೇ ರಂಗಾ
ಕಂಭದೊಳು ನೆಲೆಸಿದ ಆದಿಕೇಶವರಾಯ ೩

೭೯ ರಾಗ ಕೇದಾರಗೌಳ—ರೂಪಕತಾಳ

ತೊರೆದು ಜೀವಿಸಬಹುದೆ ಹರಿ ನಿಮ್ಮ ಚರಣಗಳ ಪ
ಬರಿದು ಮಾತ್ಯಾಕಿನ್ನು ಕರುಣಿಸು ಪೇಳುವೆನು ಅ

ತಾಯಿ ತಂದೆಯನಗಲಿ ತಪವ ಮಾಡಬಹುದು
ದಾಯಾದಿ ಬಂಧುಗಳ ಬಿಡಲಿಬಹುದು
ರಾಯ ಮುನಿದರೆ ಮತ್ತೆ ರಾಜ್ಯವನು ಬಿಡಬಹುದು
ಕಾಯಜಾಪಿತ ನಿನ್ನಡಿಯನರಘಳಿಗೆ ಬಿಡಲಾಗದು ೧

ಒಡಲು ಹಸಿಯಲು ಅನ್ನವಿಲ್ಲದಲೆ ಇರಬಹುದು
ಪಡೆದ ಕ್ಷೇತ್ರವ ಬಿಟ್ಟು ಪೋಗಬಹುದು
ಮಡದಿ ಮಕ್ಕಳ ಕಡೆಗೆ ತೊಲಗಿಸಿಬಿಡಬಹುದು
ಕಡಲೊಡೆಯ ನಿನ್ನಡಿಯನರಘಗಳಿಗೆ ಬಿಡಲಾಗದು ೨

ಪ್ರಾಣವನು ಪರರು ಬೇಡಿದರೆತ್ತಿ ಕೊಡಬಹುದು
ಮಾನದಲಿ ಮನವ ತಗ್ಗಿಸಲಿಬಹುದು
ಪ್ರಾಣನಾಯಕನಾದ ಆದಿಕೇಶವರಾಯ
ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದು ೬

೬೮ ರಾಗ ಕಾಂಪೋದಿ—ರೂಪಕತಾಳ

ಮಾವನಾ ಮನೆಯೊಳಗೆ ಇರಬಹುದೆ ಕೋವಿದರು ಪ

ಹಾವು ಹಿಡಿಯಲಿಬಹುದು ಹರಣಕೊಡಲಿಬಹುದು
ಬೇವಕಿಚ್ಚನು ಹಿಡಿದು ನುಂಗಬಹುದು
ಭಾಮೆಯಳ ತಂದ ಮನೆಯಲ್ಲಿ ಜೀವಿತಕ್ಕಿಂತ
ನಾಯುವುದೆ ಲೇಸು ಅಭಿಮಾನಿಗಳಿಗೆ ೧

ಪರರ ಸೇರಲಿಬಹುದು ಪತಿತರಲ್ಲಿರಬಹುದು
ಕೊಲೆಪಾತ ಗರಗಸಕೆ ಶಿರವೊಡ್ಡಬಹುದು
ತರುಣಿಯರ ಎಳೆತಂದ ಮನೆಯಲ್ಲಿ ಜೀವಿತಕಿಂತ
ತರುಗಿರಿ ಬೆಟ್ಟದಲಿ ತಪಸಿಯಾಗಿರಬಹುದು ೨

ಮಾವ ಅತ್ತೆಯು ನೊಂದು ಅತ್ತಿಗೆಯು ತಾ ಜರಿದು
ಹ್ಯಾವನಾ ನಿಕ್ಕೆ(?) ಚೂರ್ಣವ ಮಾಡಲು
ಯಾವಾಗ ನೋಡಿದರು ಎನಗೆ ಹಿತರಿಲ್ಲೆಂದು
ಮಾವ ಹೊರಗಾಡುವನು ಚಿಕ್ಕನುಡಿಗಳನು ೩

ಬಂದೊಂದು ತಿಂಗಳೊಳು ಬಹುಮಾನ ನಡತೆಗಳು
ಬಂದೆರಡು ತಿಂಗಳೊಳಗೆ ಹಿತವಾದನೆ
ಒಂದೊಂದ ಭದ್ರನುಡಿ ಪೊಳಗೊಳಗೆ ಹುಟ್ಟಿದುವು
ಸಂದೇಹವ್ಯಾಕೆ ಸಂಸಾರಿಗಳಿಗೆ ೪

ಈ ಪರಿಯ ಉಂಬಂಧ ಅಳಿಯ ಭೋಜನಕಿಂತ
ಗೋಪಾಳ ಲೇಸು ಅಭಿಮಾನಿಗಳಿಗೆ
ಶ್ರೀಪತಿಯು ಸೇವಕ ಕಾಗಿನೆಲೆಯಾದಿಕೇಶವನ
ನಾವ ಪರಿಯಲಿ ಭಜಿಸಿ ಸುಖಿಯಾಗು ಮನವೇ ೫

೮೧ ರಾಗ ಕಾಂಭೋದಿ—ಝಂಪೆತಾಳ

ಸಹಜವಿದು ಈ ನುಡಿಯು ಸಟೆಯ ಮಾತಲ್ಲ ಪ

ಮಹಿಯೊಳಗೆ ಪೇಳುವೆನು ವಿಹಿತ ವಾಕ್ಯಗಳ ಅ

ಶ್ರುತಿ ಶಾಸ್ತ್ರ ಪುರಾಣಗಳ ಒದುವನೆ ಶೂದ್ರ
ಅತಿಥಿಯಾದರಿಸುವನೆ ಅತಿ ಲುಬ್ಧನು
ಪ್ರತಿನಿತ್ಯ ಸಂಧ್ಯಾನ ಜಪ ಮಾಡುವನೆ ಪಾಪಿ
ಪತಿಯಾಜ್ಞೆಯಿಂದಿಹಳೆ ಪರಮ ಪಾತಕಿಯು ೧

ದಾನಧರ್ಮಂಗಳನು ಬಿಡುವನೇ ಧರ್ಮಾತ್ಮ
ಮಾನಾಭಿಮಾನಗಳ ಹಿಡಿಯುವನೆ ಯೋಗಿ
ಪ್ರಾಣಿ ಹಿಂಸೆಗಳನ್ನು ಮಾಡುವನೆ ಸುಜ್ಞಾನಿ
ದೀನ ಸಜ್ಜನರನ್ನು ಕಡಿಸುವನೆ ಸತ್ಪುರುಷ ೨

ಕೆರೆಕಟ್ಟಿ ಪೂದೋಟಗಳ ರಚಿಸುವನೆ ದ್ರೋಹಿ
ಗುರುದೈವ ಹಿರಿಯರನು ಬೈಯುವನೆ ನಿಷ್ಠ
ಸಿರಿ ಕಾಗಿನೆಲೆಯಾದಿಕೇಶವನ ಚರಣವನು
ನಿರುತದಲಿ ಸ್ಮರಿಸುವನೆ ಅವಿಚಾರ ಪುರುಷ ೩

೮೨ ರಾಗ ಮುಖಾರಿ—ಝಂಪೆತಾಳ

ಪ್ರಾಚೀನ ಕರ್ಮವಿದು ಬಿಡಲರಿಯದು ಪ

ಯೋಚನೆಯ ಮಾಡಿ ಬಳಲುವುದೇಕೆ ಮನವೆ ಅ

ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ
ಖ್ಯಾತಿಯಿಂದಲಿ ರಾವಣನ ಕೊಲ್ಲಿಸಿ
ಸೀತೆಯನು ತಂದು ಶ್ರೀರಾಮನಿಗೆ ಕೊಡಲಾಗಿ
ಪ್ರೀತಿಯಲಿ ಕೌಪೀನ ಬಿಡಿಸಲಿಲ್ಲ ಹರಿಯು ೧

ಲೋಕಾದಿ ಲೋಕಗಳ ಚರಿಸುವ ರವಿರಥಕೆ
ಏಕ ಗಾಲಿಯು ಏಳು ಕುದುರೆಗಳ ಕಟ್ಟಿ
ಲೋಕಲೋಕಗಳೆಲ್ಲ ಚರಿಸುವ ಅರುಣನಿಗೆ
ಬೇಕೆಂದು ಚರಣಗಳ ಕೊಡಲಿಲ್ಲ ಹರಿಯು ೨

ಸಾಸಿರನಾಮದ ಒಡೆಯಾದಿ ಕೇಶವನ
ಬೆಸರದೆ ಹೆಗಲ ಮೇಲಿಟ್ಟುಕೊಂಡು
ಆಕಾಶ ಮಾರ್ಗದಲಿ ತಿರುಗುವ ಗರುಡನಿಗೆ
ನಾಸಿಕದ ಡೊಂಕು ತಾ ತಿದ್ದಲಿಲ್ಲ ಹರಿಯು ೩

೮೩ ರಾಗ ಪಂತುವರಾಳಿ—ಚಾಪುತಾಳ

ಎಲ್ಲಿ ನೋಡಿದರಲ್ಲಿ ರಾಮ, ಇದ ಪ
ಬಲ್ಲ ಜಾಣರ ದೇಹದಲ್ಲಿ ನೋಡಣ್ಣ ಅ

ಕಣ್ಣೇ ಕಾಮನ ಬೀಜ, ಈ
ಕಣ್ಣಿಂದಲೆ ನೋಡು ಮೋಕ್ಷ ಸಾಮ್ರಾಜ್ಯ
ಕಣ್ಣಿನ ಮೂರುತಿ ಬಿಗಿದು, ಒಳ
ಗಣ್ಣಿಂದಲೇ ದೇವರ ನೋಡಣ್ಣ ೧

ಮೂಗೇ ಶ್ವಾಸ ನಿಶ್ವಾಸ, ಈ
ಮೂಗಿಂದಲೆ ಕಾಣೊ ಯೋಗ ಸನ್ಯಾಸ
ಮೂಗನಾದರೆ ವಿಶೇಷ, ಒಳ
ಮೂಗಿಲಿ ನೋಡಣ್ಣ ಲೀಲಾವಿಲಾಸ ೨

ಕಿವಿಯೇ ಕರ್ಮಕೆ ದ್ವಾರ, ಈ
ಕಿವಿಯಿಂದಲೆ ಕೇಳೊ ಮೋಕ್ಷದ ಸಾರ
ಕಿವಿಯೇ ಕರ್ಮ ಕುಠಾರ, ಒಳ
ಗಿವಿಯಲ್ಲಿ ಕಾಣೋ ನಾದದ ಬೇರ ೩

ಬೊಮ್ಮ ಮಾಡಿದ ತನು ಬಿಟ್ಟು, ವಿಶ್ವ
ಕರ್ಮನು ಮಾಡಿದ ಬೊಮ್ಮೆ ೧ನಿಟ್ಟು,
ಸುಮ್ಮನೆ ಕೂಗುಗಳಿಟ್ಟು, ಆದ
ನಂಬುವನೆಂಬೋನೆ ಹೋಹ ಕಂಗೆಟ್ಟು ೪

ರೂಢಿಯೊಳಗೆ ಶುದ್ಧ ಮೂಢ
ಈ ಕಾಡುಕಲ್ಲುಗಳನ್ನು ನಂಬಲಿಬೇಡ
ನಾಡಾಡಿ ದೈವಗಳೆಲ್ಲ, ನಮ್ಮ
ಬಡದಾದಿ ಕೇಶವನೊಬ್ಬನೆ ಬಲ್ಲ ೫

೮೪ ರಾಗ ಕೇದಾರಗೌಳ—ಚಾಪುತಾಳ

ಸಿರಿಯ ಮದವೇ ಮುಕುಂದಾ || ನಿನ್ನ
ಚರಣ ಸೇವಕನ ಬಿನ್ನಹ ಪರಾಕೆಲೊ ದೇವ ಪ
ಅಷ್ಟ ದಿಕ್ಪಾಲಕರ ಮಧ್ಯದಲಿ ವೈಕುಂಠ
ಪಟ್ಟಣವು ಸಿರಿ ಒಲಗವು ನಿತ್ಯದಿ
ಕಟ್ಟಿ ಒಳ್ಳೆ ಸುತಿಹ ದಾಸರನಿಮಿಷರು ಮನ
ಮುಟ್ಟಿ ಪಾಡುವ ನಾರದರ ಗೀತ ಸಂಭ್ರಮದ ೧
ಸಕಲೈಶ್ವರ್ಯಾಧಿ ದೇವಿಯೋ ಸಿರಿಯರಸಿ
ಯುಕುತಿಯೊಳು ಲೋಕಗಳ ಸೃಜಿಸುವಂಥ
ಶಕುತ ನಿನ್ನಯ ಹಿರಿಯಮಗನು ಪ್ರಾಣಿಗಳ ಮೋ
ಹಕದಿ ಮರುಳುಮಾಳ್ಪಾತ ಕಿರಿಮಗನೆಂತೆಂಬ ೨
ಬಲ್ಲಿದರಿಗೆ ಬಲ್ಲಿದನೆಂಬ ಬಿರುದು ಅರಿ
ದಲ್ಲಣನು ಎಂತೆಂಬೊ ಬಲು ಸಾಹಸಾ
ಇಲ್ಲ ನಿನಗಿದಿರ್ಯಾರೆಂಬೊ ಗರ್ವದಿ ಎನ್ನ
ಸೊಲ್ಲು ನಿನ್ನಯ ಕಿವಿಗೆ ಕೇಳದಂತಾಯಿತೆಲೊ ದೇವ ೩
ಶೇಷನೆ ಹಾಸುಮಂಚವು ಗರುಡ ತುರಗವು ಪೀತ
ವಾಸುದುಡುಗೆಯು ಕೊರಳ ವೈಜಯಂತಿ
ವಾಸಲಳಿಯದ ಪೂಮಾಲೆಗಳ ಧರಿಸಿ ಜಗ
ದೀಶನೆಂಬೋ ಬಿರುದು ಹೊಗಳಿಸಿಕೊಳುತಿಪ್ಪ ೪
ಭಕ್ತವತ್ಸಲನೆಂಬೊ ಬಿರುದು ಬಿಡು ಅಲ್ಲದಡೆ
ರಕ್ತ ಎನ್ನನು ಕಾಯೊ ಸುಲಭದಿಂದ
ಮುಕ್ತಿಯನು ಪ್ರಕಟಿಸಲು ಲೋಕದೊಳು ಭಜಕರ್ಗೆ
ಕರ್ತ ಕಾಗಿನಲಯಾದಿಕೇಶವರಾಯ ೫

೮೫ ರಾಗ ಕಾಪಿ—ಝಂಪೆತಾಳ

ಸಾಲದೇ ನಿನ್ನದೊಂದು ದಿವ್ಯನಾಮ ಪ
ಅ-ಕಾಲ ಮೃತ್ಯುವಿನ ಗಂಟಲಗಾಣ ನರಹರಿಯೆ ಅ

ರಣದೊಳಗೆ ಅವಯವವು ಖಂಡತುಂಡಾಗಿ ಪ್ರತಿ
ರಣವನುತ್ತರಿಸಿ ಮರಣವ ತಾಳಿದೆ
ಪ್ರಣವಗೋಚರ ನೀನು ಗೋಚರಿಸಿ ಬಂದೆನ್ನ
ಹೆಣಕೆ ಪ್ರಾಣವ ಪ್ರಯೋಗಿಸಿದಂತರಾತ್ಮ ೧

ಕುಂತದಿಂದೆಸೆದು ಬೆನ್ನೊಳಗೆಸೆವ ಲೋಹಿತದ
ನಂತ ಶರಸಂತತಿಯ ಕಡಿಮು ಬಿಸುಟು
ತಿಂತ್ರಿಣಿಯ ಮರದಡಿಯೆ ಪಾವು ಕಡಿದೊರಗಿರಲು
ಮಂತ್ರಿಸಿ ಮನೆಗೆ ಕಳುಹಿದೆ ಗರುಡಗಮನ ೨

ಕ್ಷೀಣದೇಹವ ಬಿಡುವೆನೆಂದೊಡಂಬಟ್ಟು | ನಿ
ತ್ರಾಣದಿಂ ಗರಳ ತೈಲವ ಸೇವಿಸೆ
ನೇಣ ಕೊರಳಿಂಗಿಕ್ಕಿ ಕೊಯ್ವ ಸಮಯಕೆ, ಪಂಚ
ಪ್ರಾಣಪ್ರತಿಷ್ಠೆಯನು ಮಾಡಿದ ಮಹಾತ್ಮ ೩

ತಮ್ಮ ದೇಹವನರಿಯದೆ ಪಿಶಾಚಿಗಳಲ್ಲೆ
ಎಮ್ಮನೆ ನೋಡಿ ತಾವ್ ಬೇಡಿ ಕಾಡಿ
ಹೆಮ್ಮರಂಗಳ ಪಿಡಿದು ಬಾಧಿಸುವರಾ ಕಂಡು
ಬೊಮ್ಮ ಜಟ್ಟಿಗರ ಶಿರವರಿದಂತರಾತ್ಮ ೪

ಒಬ್ಬ ಹೇಳಿದರೊಂದು ಕಥೆಯಾಗುತಿದೆ | ಮಹಾಂ
ಬೋಧಿಶಯನನೆ ವೇದಶಾಸ್ತ್ರಂಗಳು
ಬಾಧಿಸುವ ದುರಿತಗಳಿಗಿಂಬು ಶ್ರೀ ಕಾಗಿನೆಲೆ
ಯಾದಿಕೇಶವನಾಮ ಸಂಕೀರ್ತನೇ ೫

೭೪ ರಾಗ ನಾದನಾಮಕ್ರಿಯೆ - ಏಕತಾಳ

## ಸುವ್ವಿಮಟ್ಟು

ಧರೆಯ ಭೋಗವನು ನಂಬಿ ಹರಿಯ ಮರೆದು ಕೆಡಲಿಬೇಡ
ದರೆಯ ಭೋಗ ಕನಸಿನಂತೆ ಕೇಳು ಮಾನವ ಪ

ತಿರಕನೋರ್ವನೂರಮುಂದೆ
ಮುರುಕು ಧರ್ಮಶಾಲೆಯಲ್ಲಿ
ಒರಗಿ ಇರಲು ಅಲ್ಲೆ ಒಂದು ಕನಸ ಕಂಡನು

ಪುರದ ಅರಸು ಸತ್ತನವಗೆ
ವರಕುಮಾರರಿಲ್ಲದಿರಲು
ಕರಿಯ ಕೈಗೆ ಕುಸುಮಮಾಲೆಯಿತ್ತು ಪುರದೊಳು ೧
ಬಿಡಲದಾರ ಕೊರಳಿನಲ್ಲಿ
ತೊಡರಿಸಲ್ಕೆಯವರ ಪಟ್ಟ
ದೊಡೆಯರನ್ನು ಮಾಳ್ಪೆವೆಂದು ಬಿಟ್ಟರಲ್ಲಿಗೆ
ಒಡನೆ ತನ್ನ ಕೊರಳಿನಲ್ಲಿ
ತೊಡರಿಸುವುದ ಕಂಡು ತಿರುಕ
ಪೊಡವಿಯಾಣ್ಮನೆಂದು ಮನದಿ ಹಿಗ್ಗುತಿದ್ದನು ೨
ಪಟ್ಟಗಟ್ಟಲಾಗ ನೃಪರು
ಕೊಟ್ಟರವರು ಕಪ್ಪಗಳನು (ಕನ್ಯೆಯರನು ಪಾ)
ನೆಟ್ಟನವನು ರಾಜ್ಯವಾಳ್ದ ಕನಸಿನಲ್ಲಿಯೆ
ಪಟ್ಟದರಸಿಯೊಳಗೆ ಸುಖವ
ಪಟ್ಟು ಮನದಿ ಹರುಷಪಡಲು
(ಪುಟ್ಟದವು- ಪುಟ್ಟಿದತ್ತು ಪಾ) ಹೆಣ್ಣು ಗಂಡುಮಕ್ಕಳಾಗಲೆ ೩
ಓಲಗದಲಿ ಇರುತ ತೊಡೆಯ
ಮೇಲೆ ಮಕ್ಕಳಾಡುತಿರಲು
ಲೀಲೆಯಿಂದ ಚಾತುರಂಗ ಬಲವ ನೋಡುತ
ಲೋಲನಾಗಿ ನೆನೆದು ಮನದಿ
ಪೇಳೆ ಮಂತ್ರಿಗಳಿಗೆ ಆಗ
ಬಾಲೆಯರನು ನೋಡಿ ಮದುವೆ ಮಾಳ್ಪೆನೆಂದನು ೪
ನೋಡಿ ವರರನೆನುತ ಕಳುಹೆ
ನೋಡಿ ಬಂದೆವೆನಲು ಜೀಯ
ಮಾಡೆ ಮದುವೆ ಮಂಟಪವನು ರಚಿಸಿರೆಂದನು
ಗಾಢಸಂಭ್ರಮದಿಂದ ಕೂಡಿ
ಮಾಡಿದನು ಮದುವೆಗಳನು
ರೂಢಿಪಾಲರೆಲ್ಲ ಕೇಳಿ ಮೆಚ್ಚುವಂದದಿ ೫

ಧನದ ಮದವು ರಾಜ್ಯ ಮದವು
ವನಿತೆ ಮದವು ಸುತರ ಮದವು
ಕನಸಿನಲಿ ಕಂಡು ತಿರುಕ ಹಿಗ್ಗುತಿದ್ದನು
ಅನಿತರೊಳಗೆ ನೃಪರ ದಂಡು
ಮನೆಯ ಮುತ್ತಿದಂತೆ ಇರಲು
ಕನಸಿನಲ್ಲಿ ಕಂಡು ಭಯದಿ ಕಣ್ಣು ತೆರೆದನು ೬

ಮೆರೆವುತಿದ್ದ ಭಾಗ್ಯವೆಲ್ಲ
ಹರಿದುಹೋಯಿತೆಂದು ತಿರುಕ
ತಿರಿಯುವುದಕೆ ನ್ಹಾಚುತಿದ್ದ ಮರುಳನಂದದಿ
ಸಿರಿಯು ಕನಸಿನಂತೆ ಕೇಳು
ಅರಿತು ಆದಿಕೇಶವನ್ನ
ಹರುಷದಿಂದ ಭಜನೆ ನಿತ್ಯ ಸುಖವನೀವನು ೭

೭೫ ರಾಗ ಪೂರ್ವಿ—ಏಕತಾಳ

ಅಂಬುಜದಳಾಕ್ಷಗೆ ಮಂಗಳ ಪ
ಸರ್ವ ಜೀವ ರಕ್ಷಗೆ ಮಂಗಳ ಅ

ಜಲಧಿಯೊಳಾಮ್ನಾಯ ತಂದಗೆ ಮಂಗಳ
ಕುಲಗಿರಿ ತಾಳ್ದಗೆ ಜಯಮಂಗಳ
ನೆಲನ ಕದ್ದಸುರನ ಗೆಲಿದಗೆ ಮಂಗಳ
ಸುಲಭ ನರಸಿಂಹಗೆ ಶುಭಮಂಗಳ ೧

ವಸುಧೆಯ ಈರಡಿ ಗೈದಗೆ ಮಂಗಳ
ವಸುಧಿಪರಳಿದಗೆ ಜಯಮಂಗಳ
ದಶಕಂಧರನನ್ನು ಗೆಲಿದಗೆ ಮಂಗಳ
ಪಶುಗಳ ಕಾಯ್ದಗೆ ಶುಭಮಂಗಳ ೨

ಪುರತ್ರಯ ವಧುಗಳ ಗೆಲಿದಗೆ ಮಂಗಳ
ತುರಗ ವಾಹನನಿಗೆ ಜಯಮಂಗಳ
ವರನೆಲೆಯಾದಿ ಕೇಶವನಿಗೆ ಮಂಗಳ
ಪರಮಪವಿತ್ರಗೆ ಶುಭಮಂಗಳ ೩

ಶ್ರೀ ಕೃಷ್ಣಾರ್ಪಣಮಸ್ತು

# ಶ್ರೀ ಕನಕದಾಸಕೃತ

# ಹರಿಭಕ್ತಿಸಾರವು

## ಭಾಮಿನೀ ಷಟ್ಪದಿ

---

ಶ್ರೀಯರಸ ಗಾಂಗೇಯನುತ ಕೌಂ
ತೇಯ ವಂದಿತ ಚರಣಕಮಲ ದ
ಳಾಯತಾಂಬಕ ರೂಪ ಚಿನ್ಮಯ ದೇವಕೀತನಯ
ರಾಯ ರಘುಕುಲವರ್ಯ ಭೂಸುರ
ಪ್ರಿಯ ಸುರಪುರನಿಲಯ ಚನ್ನಿಗ
ರಾಯ ಚತುರೋಪಾಯ ರಕ್ಷಿಸು ನಮ್ಮನನವರತ ೧

ದೇವದೇವ ಜಗದ್ಭರಿತ ವಸು
ದೇವಸುತ ಜಗದೇಕನಾಥ ರ
ಮಾವಿನೋದಿತ ಸಕಲ ಸಜ್ಜನವಿನುತ ಗುಣಭರಿತ
ಭಾವಜಾರಿಪ್ರಿಯ ನಿರಾಮಯ
ರಾವಣಾಂತಕ ರಘುಕುಲಾನ್ವಯ
ದೇವ ಅಸುರವಿರೋಧಿ ರಕ್ಷಿಸು ನಮ್ಮನನವರತ ೨

ಅನುಪಮಿತ ಚಾರಿತ್ರ ಕರುಣಾ
ಪನಧಿ ಭಕ್ತಕುಟುಂಬಿ ಯೋಗೀ
ಜನಹೃದಯಪರಿಪೂರ್ಣ ನಿತ್ಯಾನಂದ ನಿಗಮನುತ
ವನಜನಾಭ ಮುಕುಂದ ಮುರಮ
ರ್ದನ ಜನಾರ್ದನ ತ್ರೈಜಗತ್ಪಾ
ವನ ಸುರಾರ್ಚಿತ ದೇವ ರಕ್ಷಿಸು ನಮ್ಮನನವರತ ೩

ಕಮಲಸಂಭವವಿನುತ ವಾಸವ
ನಮಿತ ಮಂಗಳಚರಿತ ದುರಿತ
ಕ್ಷಮಿತ ರಾಘವ ವಿಶ್ವಪೂಜಿತ ವಿಶ್ವ ವಿಶ್ವಮಯ
ಅಮಿತವಿಕ್ರಮ ಭೀಮ ಸೀತಾ
ರಮಣ ವಾಸುಕಿಶಯನ ಖಗಪತಿ
ಗಮನ ಕಂಜಜನಯ್ಯ ರಕ್ಷಿಸು ನಮ್ಮನನವರತ ೪

ಕ್ಷೀರವಾರಿಧಿಶಯನ ಶಾಂತಾ
ಕಾರ ವಿವಿಧವಿಚಾರ ಗೋಪೀ
ಜಾರ ನವನೀತಚೋರ ಚಕ್ರಾಧಾರ ಭವದೂರ
ಮಾರಪಿತ ಗುಣಹಾರ ಸರಸಾ
ಕಾರ ರಿಪುಸಂಹಾರ ತುಂಬುರ
ನಾರದಪ್ರಿಯ ವರದ ರಕ್ಷಿಸು ನಮ್ಮನನವರತ ೫

ತಾಮರಸದಳನಯನ ಭಾರ್ಗವ
ರಾಮ ಹಲಧರರಾಮ ದಶರಥ
ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮ
ಸಾಮಗಾನಪ್ರೇಮ ಕಾಂಚನ
ಧಾಮ ಧರಸುತ್ರಾಮ ವಿರಚಿತ
ಕಾಮ ರವಿಕುಲಸೋಮ ರಕ್ಷಿಸು ನಮ್ಮನನವರತ ೬

ವೇದಗೋಚರ ವೇಣುನಾದ ವಿ
ನೋದ ಮಂದರಶೈಲಧರ ಮಧು
ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮ
ಯಾದವೇಂದ್ರ ಯಶೋದನಂದನ
ನಾದಬಿಂದುಕಳಾತಿಶಯ ಪ್ರ
ಹ್ಲಾದರಕ್ಷಕ ವರದ ರಕ್ಷಿಸು ನಮ್ಮನನವರತ ೭

ಅಕ್ಷಯಾಶ್ರಿತ ಸುಜನಜನ ಸಂ
ರಕ್ಷಣ ಶ್ರೀವತ್ಸ ಕೌಸ್ತುಭ
ಮೋಕ್ಷದಾಯಕ ಕುಟಿಲದಾನವಶಿಕ್ಷ ಕುಮುದಾಕ್ಷ
ಪಕ್ಷಿವಾಹನ ದೇವಸಂಕುಲ
ಪಕ್ಷ ಜಗದಧ್ಯಕ್ಷ ವರನಿಟಿ
ಲಾಕ್ಷ ಸಖ ಸರ್ವೇಶ ರಕ್ಷಿಸು ನಮ್ಮನನವರತ ೮

ಚಿತ್ರಕೂಟ ನಿವಾಸ ವಿಶ್ವಾ
ಮಿತ್ರ ಕ್ರತುಸಂರಕ್ಷ ಶಶಿರವಿ
ನೇತ್ರ ಭವ್ಯಚರಿತ್ರ ಸದ್ಗುಣಗಾತ್ರ ಸತ್ಪಾತ್ರ
ಧಾತ್ರಿಜಾಂತಕ ಕಪಟನಾಟಕ
ಸೂತ್ರ ಪರಮಪವಿತ್ರ ಫಲ್ಗುಣ
ಮಿತ್ರ ವಾಕ್ಯವಿಚಿತ್ರ ರಕ್ಷಿಸು ನಮ್ಮನನವರತ ೯

ಮಂಗಳಾತ್ಮಕ ದುರಿತತಿಮಿರ ಪ
ತಂಗ ಗರುಡತುರಂಗ ರಿಪುಮದ
ಭಂಗ ಕೀರ್ತಿತರಂಗ ಪುರಹರಸಂಗ ನೀಲಾಂಗ
ಅಂಗದಪ್ರಿಯ ನಂಗಪಿತ ಕಾ
ಳಿಂಗಮರ್ದನ ಅಮಿತ ಕರುಣಾ
ಪಾಂಗ ಶ್ರೀನರಸಿಂಗ ರಕ್ಷಿಸು ನಮ್ಮನನವರತ ೧೦

ದಾಶರಥಿ ವೈಕುಂಠ ನಗರ ನಿ
ವಾಸ ತ್ರೈಜಗದೀಶ ಪಾಪವಿ
ನಾಶ ಪರಮವಿಲಾಸ ಹರಿಸರ್ವೇಶ ದೇವೇಶ
ವಾಸುದೇವ ದಿನೇಶ ಶತಸಂ
ಕಾಶ ಯದುಕುಲವಂಶತಿಲಕ ಪ
ರಾಶರಾನತದೇವ ರಕ್ಷಿಸು ನಮ್ಮನನವರತ ೧೧

ಕುಂದಕುಟ್ಮಲರದನ ಪರಮಾ
ನಂದ ಹರಿಗೋವಿಂದ ಸನಕಸ
ನಂದವಂದಿತ ಸಿಂಧುಬಂಧನ ಮಂದರಾದ್ರಿಧರ
ಇಂದಿರಾಪತಿ ವಿಜಯಸಖ ಅರ
ವಿಂದನಾಭ ಪುರಂದರಾರ್ಚಿತ
ನಂದಕಂದ ಮುಕುಂದ ರಕ್ಷಿಸು ನಮ್ಮನನವರತ ೧೨

ಬಾಣಬಾಹುಚ್ಛೇದ ರಾವಣ
ಪ್ರಾಣನಾಶನ ಪುಣ್ಯನಾಮ ಪು
ರಾಣಪುರುಷೋತ್ತಮ ನಿಪುಣ ಅಣುರೇಣುಪರಿಪೂರ್ಣ
ಕ್ಷೋಣಿಪತಿ ಸುಲಲಿತ ಸುದರ್ಶನ
ಪಾಣಿ ಪಾಂಡವರಾಜಕಾರ್ಯಧು
ರೀಣ ಜಗನಿರ್ಮಾಣ ರಕ್ಷಿಸು ನಮ್ಮನನವರತ ೧೩

ನೀಲವರ್ಣ ವಿಶಾಲಶುಭಗುಣ
ಶೀಲ ಮುನಿಕುಲಪಾಲ ಲಕ್ಷ್ಮೀ
ಲೋಲ ರಿಪುಶಿಶುಪಾಲಮಸ್ತಕಶೂಲ ವನಮಾಲಾ
ಮೂಲಕಾರಣ ವಿಮಲಯಾದವ
ಜಾಲಹಿತ ಗೋಪಾಲ ಅಗಣಿತ
ಲೀಲ ಕೋಮಲಕಾಯ ರಕ್ಷಿಸು ನಮ್ಮನನವರತ ೧೪

ನಾಗನಗರಿ ಧರಿತ್ರಿಕೋಶವಿ
ಭಾಗ ತಂತ್ರನಿಯೋಗ ಗಮನಸ
ರಾಗ ಪಾಂಡವ ರಾಜಜಿತ ಸಂಗ್ರಾಮ ನಿಸ್ಸೀಮ
ಯೋಗಗಮ್ಯ ಭವಾಬ್ಧಿ ವಿಷಧರ
ನಾಗ ಗಾರುಡಮಂತ್ರವಿಧ ಭವ
ರೋಗವೈದ್ಯ ವಿಚಿತ್ರ ರಕ್ಷಿಸು ನಮ್ಮನನವರತ ೧೫

ಶ್ರೀಮದುತ್ಸಹ ದೇವನುತ ಶ್ರೀ
ರಾಮ ನಿನ್ನಯ ಚರಣಸೇವಕ
ಪ್ರೇಮದಿಂ ಸಾಷ್ಟಾಂಗವೆರಗುತೆ ಪೂಳ್ಪೆ ಬಿನ್ನಹವ
ಈ ಮಹಿಯೊಳೀವರೆಗೆ ನಾವ್ ಸು
ಕ್ಷೇಮಿಗಳು ನಿನ್ನಯ ಪಾದಾಬ್ಜ
ಕ್ಷೇಮವಾರ್ತೆಯನರುಹಿ ರಕ್ಷಿಸು ನಮ್ಮನನವರತ ೧೬

ಈಗಲೀ ಮರ್ಯಾದೆಯಲಿ ಶರ
ಣಾಗತರ ಸೇವೆಯೊಳು ಹೊಂಪುಳಿ
ಯಾಗಿ ಬಾಳುವರೇನು ಧನ್ಯರೊ ಹರಮಹಾದೇವ
ಭೋಗ ಭಾಗ್ಯವ ಬಯಸಿ ಮುಕ್ತಿಯ
ನೀಗಿ ನಿಮ್ಮನು ಭಜಿಸಲರಿಯದ
ಯೋಗಗಳ ಮಾತೇನು ರಕ್ಷಿಸು ನಮ್ಮನನವರತ ೧೭

ಭಕ್ತಿ ಸಾಗರ ಚರಿತೆಯನು ಹರಿ
ಭಕ್ತರಾಲಿಸುವಂತೆ [illegible]
ಯುಕ್ತಿಯಲಿ ವಿರಚಿಸಿದವರಿಷ್ಟಾರ್ಥ ಸಿದ್ಧಿಪುದು
ಮುಕ್ತಿಗಿದು ನೆಲೆದೋರುವುದು ಹರಿ
ಭಕ್ತರನು ಲಾಲಿಪುದು ನಿಜಮತಿ
ಭಕ್ತಿಗೊಲಿವಂಪದಲಿ ರಕ್ಷಿಸು ನಮ್ಮನನವರತ ೧೮

ನಳಿನಲೋಚನ ನಿಮ್ಮ ಮೂರ್ತಿಯು
ಕಳೆ ಬೆಳಗುತಿದೆ ಲಹರಿಯಲಿ
ಭೂತಳದೊಳಚ್ಚರಿಯಾದ ನಾಮಾಮೃತ ಸಮುದ್ರದಲಿ
ಬಳಸುವರು ಸತ್ಕವಿಗಳವರ
ಗ್ಗಳಿಗೆ ಎನಗಿನಿತಿಲ್ಲ ಸನ್ಮತಿ
ಗಳಿಗೆ ಮಂಗಳವಿತ್ತು ರಕ್ಷಿಸು ನಮ್ಮನನವರತ ೧೯

ಗಿಳಿಯಮರಿಯನು ತಂದು ಪಂಜರ
ದೊಳಗೆ ಪೋಷಿಸಿ ಕಲಿಸಿ ಮೃದುನುಡಿ
ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ
ತಿಳುಹಿ ಮತಿಯನು ಎನ್ನ ಜಹ್ವೆಗೆ
ಮೊಳಗುವಂದದಿ ನಿನ್ನ ನಾಮಾ
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ ೨೦

ಪೊಗಳಲಳವೇ ನಿನ್ನ ನಾಮವ
ಸುಗುಣ ಸಚ್ಚಾರಿತ್ರ ಕಥನವ
ನಗಣಿತೋಪಮ ಅಮಿತವಿಕ್ರಮಗಮ್ಯ ನೀನೆಂದು
ನಿಗಮತತಿ ಕೈವಾರಿಸುತ ಪದ
ಯುಗವ ಕಾಣದೆ ಬಳಲುತಿದೆ ವಾ
ಸುಕಿಶಯನ ಸರ್ವೇಶ ರಕ್ಷಿಸು ನಮ್ಮನನವರತ ೨೧

ವೇದಶಾಸ್ತ್ರ ಪುರಾಣ ಪುಣ್ಯದ
ಹಾದಿಯನು ನಾನರಿಯೆ ತರ್ಕದ
ವಾದದಲಿ ಗುರುಹಿರಿಯರರಿಯದ ಮೂಢಮತಿಯೆನಗೆ
ಆದಿಮೂರುತಿ ನೀನು ನೆರೆಕರು
ಣೋದಯನು ಹೃದಯಾಂಗಣದಿ ಜ್ಞಾ
ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ೨೨

ಹಸಿವರಿತು ತಾಯ್ತನ್ನ ಶಿಶುವಿಗೆ
ಒಸೆದು ಮೊಲೆಕೊಡುವಂತೆ ನೀ ಪೋ
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು
ಬಸುರೊಳಗೆ ಬ್ರಹ್ಮಾಂಡಕೋಟಿಯ
ಪಸರಿಸಿದ ಪರಮಾತ್ಮ ನೀನೆಂ
ದುಸುರುತಿವೆ ವೇದಗಳು ರಕ್ಷಿಸು ನಮ್ಮನನವರತ ೨೩

ಇಬ್ಬರಿಣಾಗರು ನಿನಗೆ ಅವರೊಳ
ಗೊಬ್ಬ ಮಗ ನೀರೇಳುಲೋಕದ
ಹೆಬ್ಬೆಳಸು ಬೆಳೆವಂತೆ ಕಾರಣಕರ್ತನಾದವನು
ಒಬ್ಬ ನುಗನದ ಬರೆವ ಕರಣಿಕ
ರಿಬ್ಬರೀ ಲೋಕಪ್ರಸಿದ್ಧರು
ಹಬ್ಬಿಸಿದೆ ಪ್ರಾಣಿಗಳ ರಕ್ಷಿಸು ನಮ್ಮನನವರತ ೨೪

ಸಿರಿಯು ಕುಲಸತಿ, ಸುತನು ಕಮಲಜ,
ಹಿರಿಯಸೊಸೆ ಶಾರದ, ಸಹೋದರಿ
ಗಿರಿಜೆ, ಮೈದುನ ಶಂಕರನು, ಸುರರೆಲ್ಲ ಕಿಂಕರರು
ನಿರುತ ಮಾಯೆಯದಾಸಿ, ನಿಜಮಂ
ದಿರವಜಾಂಡವು, ಜಂಗಮಸ್ಥಾ
ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ ೨೫

ಸಾಗರನ ಮಗಳರಿಯನಂತೆ ಸ
ರಾಗದಲಿ ಸಂಚರಿಸುತಿಹೆ ಉ
ದ್ಯೋಗವೇನು ನಿಮಿತ್ತಕಾರಣವೆಲ್ಲ ಲೋಕದಲಿ
ಭಾಗವತರಾದವರ ಸಲಹುವ
ನಾಗಿ ಸಂಚರಿಸುವುದು ಈ ಭವ
ಸಾಗರದಿ ಮುಳುಗಿಸದೆ ರಕ್ಷಿಸು ನಮ್ಮನನವರತ ೨೬

ಹಸ್ತಿವಾಹನನಾದಿಯಾದ ಸ
ಮಸ್ತ ದೇವನಿಕಾಯದೊಳಗೆ ಪ್ರ
ಶಸ್ತನಾವನು ನಿನ್ನ ಪೋಲು ಶರಣಾಗತರ ಪೊರೆವ
ಹಸ್ತಕಲಿತ ಸುದರ್ಶನದೊಳರಿ
ಮಸ್ತಕವನಿಳುಹುವ ಪರಾತ್ಪರ
ವಸ್ತುವಲ್ಲವೆ ನೀನು ರಕ್ಷಿಸು ನಮ್ಮನನವರತ ೨೭

ಹಗೆಯರಿಗೆ ವರವೀವರಿಬ್ಬರು
ತೆಗೆಯಲರಿಯರು ಕೊಟ್ಟ ವರಗಳ
ತೆಗೆದುಕೊಡುವ ಸಮರ್ಥರಾರೀ ಜಗಕೆ ನಿನ್ನಂತೆ
ಸುಗುಣರಿನ್ನಾರುಂಟು ಕದನವ
ಬಗೆದು ನಿನ್ನೊಳು ಜೈಸುವವರೀ
ಜಗದೊಳುಂಟೇ ದೇವ ರಕ್ಷಿಸು ನಮ್ಮನನವರತ ೨೮

ಸುಮನಸರ ವೈರದಲಿ ಕೆಲವರು
ಕುಮತಿಗಳು ತಪದಿಂದ ಭರ್ಗನ
ಕಮಲಜನ ಪದಯುಗವ ಮೆಚ್ಚಿಸಿ ವರವ ಪಡೆದಿಹರು
ಸಮರ ಮುಖದೊಳಗುಪಮೆಯಲಿ ವಿ
ಕ್ರಮದಿ ವೈರವ ಮಾಡಿದವರಿಗೆ
ಅಮರ ಪದವಿಯನಿತ್ತೆ ರಕ್ಷಿಸು ನಮ್ಮನನವರತ ೨೯

ಬರಿಯ ಬಂದಿಳಿ ಸೂರೆಯಿಡುವ ಪತಿ
ಗೋಪಿಪ ಅಕ್ರೂರ ಸತ್ತು ಕರುಣದಿ
ಮೊಲೆಯುನುಣಿಸಿದ ಬಾಲಿಕೆಯ ಪಿಡಿದಸುವನಪಹರಿಸಿ
ಶಿಲೆಯ ಸತಿಯಳಮಾಡಿ ತ್ರಿಪುರದ
ಲಲನೆಯರ ವ್ರತಗೆಡಿಸಿ ಕೂಡಿದ
ಕೆಲಸವುತ್ತಮವಾಯ್ತು ರಕ್ಷಿಸು ನಮ್ಮನನವರತ ೩೦

ಕರಿಯ ಕಾಯ್ದಾ ಜಲಧಿಮಕರಿಯ
ತರಿದು ಹಿರಣ್ಯಕನನ್ನು ಸೀಳ್ದಾ
ತರಳನನು ತಲೆಗಾಯ್ದು ಶಕಟಾಸುರನ ಹತಮಾಡಿ
ದುರುಳ ಕಂಸನ ಕೊಂದು ಮಗಧನ
ಮುರಿದು ವತ್ಸನ ಹಮ್ಮಳಿಸಿ ಖರ
ಹರಣವನು ಹಿಂಗಿಸಿದೆ ರಕ್ಷಿಸು ನಮ್ಮನನವರತ ೩೧

ಶಿಶುತನದ ಸಾಮರ್ಥ್ಯದಲಿ ಕೆಲ
ರಸುರರನು ಸಂಹರಿಸಿ ಚಕ್ರವ
ಬಿಸುಟು ಯೌವನ ಕಾಲದಲಿ ಯಾ ಪಾಂಡುಸುತರಿಂದ
ವಸುಮತಿಯ ಭಾರವನಿಳುಹಿ ನಾ
ಹಸದಿ ಮೆರೆದವನಾಗಿ ನೀ ಮೆ
ಚ್ಚಿಸಿದೆ ತ್ರಿಜಗವನೆಲ್ಲ ರಕ್ಷಿಸು ನಮ್ಮನನವರತ ೩೨

ಎಲ್ಲರಲ ನೀನಾಗಿ ಸುಮನಸ
ರಲ್ಲಿ ಅತಿಹಿತನಾಗಿ ಯಾದವ
ರಲ್ಲಿ ಬಾಂಧವನಾಗಿ ದಾನವರಲ್ಲಿ ಹಗೆಯಾಗಿ
ಕೊಲ್ಲಿಸಿದೆ ಭೀಮಾರ್ಜುನರ ಕೈ
ಯಲ್ಲಿ ಕೌರವ ಕುಲವನೆಲ್ಲವ
ಬಲ್ಲಿದನು ನೀನಹುದು ರಕ್ಷಿಸು ನಮ್ಮನನವರತ ೩೩

ನರಗೆ ಸಾರಥಿಯಾಗಿ ರಣದೊಳು
ತುರಗ ನೀನಡೆಸುತೆ ವೈರಿಪ
ಸರಸಿಯನು ನಿರ್ಮಿಸಿ ಕಿರೀಟಿಯ ಕೈಯ ಸೈಂಧವನ
ಶಿರವ ಕೆಡಹಿಸಿ ಅವನ ತಂದೆಯ
ಕರತಲಕೆ ನೀಡಿಸಿದೆ ಹರಹರ
ಪರಮ ಸಾಹಸಿ ನೀನು ರಕ್ಷಿಸು ನಮ್ಮನನವರತ ೩೪

ಬವರದಲಿ ಖತಿಗೊಂಡು ಗದೆಯೊಳು
ಕವಿದು ನಿನ್ನ ಶತಾಯುಧನು ಹೊ
ಕ್ಕವಘಡಿಸಿ ಹೊಯ್ದಾಡಿ ತನ್ನಾಯುಧದಿ ತಾ ಮಡಿದ
ವಿವರವೇನೂ ತಿಳಿಯೆ ನೀ ಮಾ
ಯವನು ನೀನೇ ಬಲ್ಲೆ ನಿನ್ನಾ
ಯವನು ಬಲ್ಲವರುಂಟೆ ರಕ್ಷಿಸು ನಮ್ಮನನವರತ ೩೫

ಇಳೆಗೆ ಪತಿಯಾದವನು ಯಾದವ
ರೊಳಗೆ ಬಾಂಧವ ನಿನಗೆ ಸೋದರ
ದಳಿಯನಾದಭಿಮನ್ಯುವನು ಕೊಲ್ಲಿಸಿದೆ ಕೊಳುಗುಳದಿ
ಅಳಲಿನಬ್ಧಿಯೊಳದ್ದಿ ತಂಗಿಯ
ಬಳಲಿಸಿದೆ ಕುಲಗೋತ್ರ ಬಾಂಧವ
ರೊಳಗೆ ಕೀರ್ತಿಯ ಪಡೆದೆ ರಕ್ಷಿಸು ನಮ್ಮನನವರತ ೩೬

ತಾಯನಗಲಿದ ತನಯನೀ ರಾ
ಧೇಯನೊಳಗೆ ರಹಸ್ಯದಲಿ ಕುಲ
ದಾಯವನು ನೆರೆತಿಳುಹಿ ಅರ್ಜುನನಿಂದ ಕೊಲ್ಲಿಸಿದೆ
ಮಾಯಮಂತ್ರದ ಕುಟಿಲಗುಣವ
ನ್ಯಾಯವೋ ಸುನ್ಯಾಯವೋ ನಿ
ನ್ನಾಯವನು ನೀ ಬಲ್ಲೆ ರಕ್ಷಿಸು ನಮ್ಮನನವರತ ೩೭

ಕೊಲ್ಲ ಬಗೆದವನಾಗಿ ನೀ ಹಗೆ
ಯಲ್ಲಿ ಸಖ್ಯವ ಬೆಳಸಲದು ಹಿತ
ವಲ್ಲ ನಿನ್ನಯ ಗುಣವ ಬಲ್ಲವರಿಲ್ಲ ಯದುಕುಲದಿ
ಗೊಲ್ಲನಾರಿಯರೊಳು ಪ್ರವರ್ತಕ
ನಲ್ಲವೇ ಭಾವಿಸಲು ಲೋಕದೊ
ಳೆಲ್ಲರೂ ಸರಿ ನಿನಗೆ ರಕ್ಷಿಸು ನಮ್ಮನನವರತ ೩೮

ಮಗನ ಕೊಂದವನಾಳುವಂತಹ
ಸುಗುಣೆಯರು ಹದಿನಾರು ಸಾವಿರ
ಸೊಗಸುಗಾತಿಯರವರ ಮೋಹದ ಬಲೆಗೆ ವಿಟನಾಗಿ
ಬಗೆಬಗೆಯ ರತಿಕಲೆಗಳಲಿ ಕೂ
ರುಗುರನಾಟಿಸಿ ಮೆರೆದು ನೀನೀ
ಜಗಕೆ ಪಾವನನಾದೆ ರಕ್ಷಿಸು ನಮ್ಮನನವರತ ೩೯

ಏನು ಮಾಡಿದರೇನು ಕರ್ಮವ
ನೀನೊಲಿಯದಿನ್ನಿಲ್ಲವಿದಕನು
ಮಾನವುಂಟೇ ಭ್ರಮರಕೀಟನ್ಯಾಯದಂದದಲಿ
ನೀನೊಲಿಯೆ ತೃಣ ಪರ್ವತವು ಪುಸಿ
ಯೇನು ನೀ ಪತಿಕರಿಸಿ ಬಳಿಕಿ
ನ್ನೇನು ಚಿಂತಿಸಲೇಕೆ ರಕ್ಷಿಸು ನಮ್ಮನನವರತ ೪೦

ಎಷ್ಟು ಮಾಡಲು ಮುನ್ನ ತಾ ಪಡ
ದಷ್ಟೆಯೆಂಬುದ ಲೋಕದೊಳು ಮತಿ
ಗೆಟ್ಟ ಮಾನವರಾಡುತಿಹರಾ ಮಾತದಂತಿರಲಿ
ಪಟ್ಟವಾರಿಂದಾಯ್ತು ಧ್ರುವನಿಗೆ
ಕೊಟ್ಟ ವರ ತಪ್ಪಿತೆ ಕುಚೇಲಗೆ
ಇಷ್ಟಬಾಂಧವ ನೀನು ರಕ್ಷಿಸು ನಮ್ಮನನವರತ ೪೧

ತನ್ನ ದೇಹಾತುರದ ಲಡವಿಯೊ
ಳನ್ನರನು ಸಂಹರಿಸುತಿರುತಿರೆ
ನಿನ್ನ ನಾಮದೊಳಧಿಕ ವೆರಡಕ್ಷರವ ಬಣ್ಣಿಸುತ
ಧನ್ಯನಾದನು ಮುನಿಕುಲದಿ ಸಂ
ಪನ್ನನಾದನು ನೀ ನೊಲಿದ ಬಳಿ
ಕಿನ್ನು ಪಾತಕವುಂಟೆ ರಕ್ಷಿಸು ನಮ್ಮನನವರತ ೪೨

ನಿನ್ನ ಸತಿಗಳುಪಿದ ದುರಾತ್ಮನ
ಬೆನ್ನಿನಲಿ ಬಂದವನ ಕರುಣದಿ
ಮನ್ನಿಸಿದ ಕಾರಣ ದಯಾಪರಮೂರ್ತಿಯೆಂದೆನುತ
ನಿನ್ನ ಭಜಿಸಿದ ಸಾರ್ವಭೌಮರಿ
ಗಿನ್ನು ಇಹಪರವುಂಟು ಸದ್ಗುಣ
ರನ್ನ ಸಿರಿಸಂಪನ್ನ ರಕ್ಷಿಸು ನಮ್ಮನನವರತ ೪೩

ವೀರರಾವಣನೊಡನೆ ಹೋರಿದ
ವೀರರಗ್ಗದ ಕಪಿಗಳವರೊಳು
ಮಾರುತನ ಮಗನೇನು ಧನ್ಯನೊ ಬ್ರಹ್ಮಪಟ್ಟದಲಿ
ಸೇರ್ಪಿಸಿದೆ ನಿನ್ನಂತೆ ಕೊಡುವ ಉ
ದಾರಿಯಾವನು ತ್ರಿಜಗದೊಳಗಾ
ಕಾರಣದಿ ನಂಬಿದೆನು ರಕ್ಷಿಸು ನಮ್ಮನನವರತ ೪೧

ಶಿವಶಿವಾ ನೀ ಮಾಡಿದುಪಕಾ
ರವನು ಮರದವರುಂಟೆ ಪಾಪದಿ
ನವೆದಜಾಮಿಳಗೊಲಿದು ಪ್ರಾಣವಿಯೋಗ ಕಾಲದಲಿ
ಜವನವರ ಕೈಗೊಪ್ಪಿಸದೆ ಕಾ
ಯ್ದವನು ನೀ ಮಾಧವನು ಮಿಕ್ಕಾ
ದವರಿಗುಂಟೇ ಕರುಣ ರಕ್ಷಿಸು ನಮ್ಮನನವರತ ೪೨

ಹೆತ್ತ ಮಗಳನು ಮದುವೆಯಾದನ
ಸುತ್ತ ಪಾಪ ಗುರುಪಕ್ಷಿಗಳಿಸಿದ
ಚಿತ್ತಜನ ಪಾಪವನು ಕೃತಘ್ನನು ನಿನಗೆ ಪೈಮನಸು
ಹೊತ್ತು ತಪ್ಪಿಸಿ ಕಾಮದಲಿ ಮುನಿಪೋತ್ತ
ಮನ ಮಡದಿಯನು ನೆರೆದವ
ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ ೪೩

ಇಲ್ಲಿಹನು ಅಲ್ಲಿಲ್ಲವೆಂಬೀ
ಸೊಲ್ಲು ಸಲ್ಲದು ಹೊರಗೊಳಗೆ ನೀ
ನಿಲ್ಲದಿಲ್ಲನ್ಯತ್ರವೆಂಬುದನೆಲ್ಲ ಕೆಲಕೆಲರು
ಬಲ್ಲರಿಳೆಯೊಳು ಭಾಗವತರಾ
ದೆಲ್ಲರಿಗೆ ವಂದಿಸದ ಕುಜನರಿ
ಗಿಲ್ಲ ಸದ್ಗತಿ ನೋಡಿ ರಕ್ಷಿಸು ನಮ್ಮನನವರತ ೪೪

ಸಿರಿಯ ಸಂಪತ್ತಿನಲಿ ನೀ ಮೈ
ಮರೆದು ಮದಗರ್ವದಲಿ ದೀನರ
ಕರುಣದಿಂದೀಕ್ಷಿಸದೆ ಕಡೆಗಣ್ಣಿಂದ ನೋಡುವರೆ
ಹರಿಹರ ಅನಾಥರನು ಪಾಲಿಸಿ
ವರವ ಕೊಡುವ ಉದಾರಿಯೆಂಬೀ
ಬಿರುದ ಬಿಡುವರೆ ತಂದೆ ರಕ್ಷಿಸು ನಮ್ಮನನವರತ ೪೮

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ ೪೯

ತರಳತನದಲಿ ಕೆಲವು ದಿನ ದುರು
ಭರದ ಗರ್ವದಿ ಕೆಲವು ದಿನ ಮೈ
ಮರೆದು ನಿಮ್ಮಡಿಗೆರಗದಾದೆನು ವಿಷಯ ಕೇಳಿಯಲಿ
ನರಕ ಭಾಜನನಾಗಿ ಕಾಮಾ
ತುರದಿ ಪರಧನ ಪರಸತಿಗೆ ಮನ
ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ ೫೦

ಮರೆದೆನಭ್ಯುದಯದಲಿ ನಿಮ್ಮನು
ಮರೆಯೆನಾಪತ್ತಿನಲಿ ಮೊರೆಯೆಂ
ದೊರಲುವೆನು ಮನವೇಕ ಭಾವದೊಳಿಲ್ಲ ನಮ್ಮಡಿಯ
ಮರೆದು ಬಾಹಿರನಾದವನ ನೀ
ಮರೆವರೇ ಹಸು ತನ್ನ ಕಂದನ
ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ ೫೧

ಧಾರುಣಿಗೆ ವರ ಚಕ್ರವರ್ತಿಗ
ಳಾರು ಮಂದಿ ನೃಪಾಲಕರು ಹದಿ
ನಾರು ಮಂದಿಯು ಧರಣಿಯನು ತಾವಾಳ್ದ ನೃಪರೆನಿತೋ
ವೀರರನು ಮೆಚ್ಚಿದಳೆ ಧರಣೀ
ನಾರಿ ಬಹು ಮೋಹದೊಳು ನಿನ್ನನು
ಸೇರಿ ಒಲೈಸುವಳು ರಕ್ಷಿಸು ನಮ್ಮನನವರತ ೫೨

ಭಾರಕರ್ತನು ನೀನು ಬಹು ಸಂ
ಸಾರಿಯೆಂಬುದ ನಿಗಮತತಿ
ಕೈವಾರಿಸುತ್ತಿದೆ ದಿವಿಜ ಮನುಜ ಭುಜಂಗರೊಳಗಿನ್ನು
ಆರಿಗುಂಟು ಸ್ವತಂತ್ರ ನಿನ್ನಂ
ತಾರು ಮುಕ್ತಿಯನೀವ ಸದ್ಗುರು
ವಾರು ಜಗದಧ್ಯಕ್ಷ ರಕ್ಷಿಸು ನಮ್ಮನನವರತ ೫೩

ಗತಿವಿಹೀನರಿಗಾರು ನೀನೇ
ಗತಿಕಣಾ ಪತಿಕರಿಸಿ ಕೊಡು ಸ
ದ್ಗತಿಯ ನೀನೆಲೆದೇವ ನಿನಗಪರಾಧಿ ನಾನಲ್ಲ
ಶ್ರುತಿವಚನವಾಡುವುದು ಶರಣಾ
ಗತರ ರಕ್ಷಕನೆಂದು ನಿನ್ನನು
ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ ೫೪

ಈಗಲೋ ಈ ದೇಹವಿನ್ನಾ
ವಾಗಲೋ ನಿಜವಲ್ಲವೆಂಬುದ
ನೀಗ ತಿಳಿಯದೆ ಮಡದಿ ಮನೆ ಮನೆವಾರ್ತೆಯೆಂದನುತ
ರಾಗಲೋಭದಿ ಮುಳುಗಿ ಮುಂದಣ
ತಾಗುಬಾಗುಗಳರಿಯೆ ನಿನ್ನ ಸ
ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ ೫೫

ಮಾಂಸ ರಕ್ತದ ಮಡುವಿನಲಿ ನವ
ಮಾಸ ಜನನಿಯ ಜಠರದೊಳಗಿರು
ವಾ ಸಮಯದಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು
ನೀ ಸಲಹಿದವನಲ್ಲವೇ ಕರು
ಣಾಸಮುದ್ರನು ನೀನಿರಲು ಕಮ
ಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ೫೬

ಒಲು ಮೃಗವು ಮರಪಕ್ಷಿ ಕೀಟಕ
ಜಲಚರೌಘದಿ ಜನಿಸಿದೆನು ಕೋ
ಟಲೆಗೊಳಿಸಬೇಡಕಟ ಮಾನವನಾದ ಬಳಿಕಿನ್ನು
ಕೊಲಿಸದಿರು ಯಮನಿಂದ ಮುರಹರ
ಒಲಿದು ನಿನ್ನನ್ನು ಭಜಿಸುವವರಿಗೆ
ಕೊಲೆಗೆ ಕಾರಣವೇನು ರಕ್ಷಿಸು ನಮ್ಮನನವರತ ೫೭

ಪಂಚಭೂತದ ಕಾಯದೊಳು ನೀ
ವಂಚಿಸದೆ ಇರುತಿರಲು ಪೂರ್ವದ
ಸಂಚಿತದ ಫಲವೆನ್ನಲೇಕಿದ ಮರುಳತನದಿಂದ
ಮಿಂಚಿದವರಿನ್ನುಂಟೆ ತಿಳಿಯೆ ಪ್ರ
ಪಂಚವೆಲ್ಲಕೆ ತಪ್ಪಿದವನೀ
ಕೊಂಚನವನೇ ಕೃಷ್ಣ ರಕ್ಷಿಸು ನಮ್ಮನನವರತ ೫೮

ಹಲವು ಕರ್ಮಗಳಿಂದ ಮೂತ್ರದ
ಬಿಲಗಳಲಿ ಸಂಚರಿಸಿ ಬದವಿಸು
ಫಲವ ಕಾಣದೆ ಹೊಲಬು ತಪ್ಪದೆ ನೆನ್ನದೇಹದಲಿ
ಒಲಿದು ನೀನಿರೆ ನಿನ್ನ ಸಲುಗೆಯು
ಬಲುಮೆಯಲಿ ಬರೆಸೆಳೆವೆ ಮುಕ್ತಿಯ
ಲಲನೆಯನು ತಳುವಿಲ್ಲ ರಕ್ಷಿಸು ನಮ್ಮನನವರತ ೫೯

ಎತ್ತಿದೆನು ನಾನಾ ಶರೀರವ
ಹೊತ್ತು ಹೊತ್ತಲಸಿದೆನು ಸಲೆ ಬೇ
ಸತ್ತು ನಿನ್ನಯ ಪದಪ ಕಾಣದೆ ತೊಳಲಿ ಬಳಲಿದೆನು
ಸತ್ತು ಹುಟ್ಟುವ ಹುಟ್ಟಿ ಹಿಂಗುವ
ಸುತ್ತು ತೊಡಕನು ಮಾಣಿಸೆಲೆ ಪುರು
ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ ೬೦

ಇಂದು ಈ ಜನ್ಮದಲಿ ನೀನೇ
ಬಂಧು ಹಿಂದಣ ಜನ್ಮದಲ ಬಳಿ
ಸಂದು ಮುಂದಣ ಜನ್ಮಕಧಿಪತಿಯಾಗಿ ಇರುತಿರಲು
ಎಂದಿಗೂ ಎನಗಿಲ್ಲ ತನು ಸಂ
ಬಂಧ ನಿನ್ನದು ಎನಗೆ ನೀ ಗತಿ
ಯೆಂದು ಬಿನ್ನೈಸಿದೆನು ರಕ್ಷಿಸು ನಮ್ಮನನವರತ ೬೧

ಗಣನೆಯಿಲ್ಲದೆ ಜನನಿಯರು ಮೊಲೆ
ಯುಣಿಸಲಾ ಪಯಬಿಂದುಗಳನದ
ನೆಣಿಸಲಳವೇ ಸಪ್ತಸಾಗರಕಧಿಕವೆನಿಸುವುದು
ಬಣಗು ಕಮಲಜನದಕೆ ತಾನೇ
ಮಣಿಯುಗಾರನು ಈತ ಮಾಡಿದ
ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮನನವರತ ೬೨

ಲೇಸಕಾಣೆನು ಜನನ ಮರಣದಿ
ಘಾಸಿಯಾದೆನು ನೊಂದೆನಕಟಾ
ಲೇಸೆನಿಸಿ ನೋಡಲು ಪರಾತ್ಪರವಸ್ತು ನೀನಾಗಿ
ನೀ ಸಲಹುವವನಲ್ಲವೇ ಕರು
ಣಾಸಮುದ್ರನು ನೀನಿರಲು
ಕಮಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ೬೩

ಕಾಪುರುಷರೈದಾರು ಮುಂದಿ ಸ
ಮೀಪದಲಿ ಕಾಡುವರು ಎನ್ನನು
ನೀ ಪರಾಮರಿಸದೆ ಪರಾಕಾಗಿಹುದು ಲೇಸಲ್ಲ
ಶ್ರೀ ಪದಾಬ್ಜದ ಸೇವೆಯಲಿ ನೆರೆ
ಪಾಪವನು ಪರಿಹರಿಸಿ ನೀ ನಿಜ
ರೂಪಿನಲಿ ಬಂದೊಲಿದು ರಕ್ಷಿಸು ನಮ್ಮನನವರತ ೭೪

ಐದು ತತ್ವಗಳಾದ ವೊಂದ
ಕ್ಕೈದು ಕಡೆಯಲಿ ತತ್ವವಿಪ್ಪ
ತ್ತೈದು ಕೂಡಿದ ತನುವಿನಲಿ ವಂಚಿಸದೆ ನೀನಿರಲು
ಭೇದಿಸದೆ ಜೀವಾತ್ಮ ತಾ ಸಂ
ಪಾದಿಸಿದ ಸಂಚಿತ ಸುಕರ್ಮವ
ನಾದರಿಸಿ ಕೈಕೊಂಡು ರಕ್ಷಿಸು ನಮ್ಮನನವರತ ೭೫

ಎಂಟುಗೇಣಿನ ದೇಹ ರೋಮಗ
ಳೆಂಟು ಕೋಟಿಯು ಕೀಲ್ಗಳರವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯು ಮನವೊಲಿದು
ನೆಂಟ ನೀನಿರ್ದಗಲಿದೊಡೆ ಒಣ
ಹೆಂಟೆಯಲಿ ಮುಚ್ಚುವರು ದೇಹದ
ಲುಂಟೆ ಫಲಪುರುಷಾರ್ಥ ರಕ್ಷಿಸು ನಮ್ಮನನವರತ ೭೬

ಸ್ನಾನ ಸಂಧ್ಯಾ ಧ್ಯಾನ ಜಪ ತಪ
ದಾನ ಧರ್ಮ ಪರೋಪಕಾರ ವಿ
ಹೀನಜನ್ಮವದಳಿವುದಲ್ಲದೆ ಬೇರೆ ಗತಿಯುಂಟೆ
ಏನು ಮಾಡಿದೊಡೇನು ಮುಕ್ತಿ
ಜ್ಞಾನವಿಲ್ಲದೊಡಿಲ್ಲ ಭಕ್ತಿಗೆ
ನೀನೆ ಕಾರಣನಾಗಿ ರಕ್ಷಿಸು ನಮ್ಮನನವರತ ೭೭

ಕೋಪವೆಂಬುದು ತನುವಿನಲಿ ನೆರೆ
ಪಾಪ ಪಾತಕದಿಂದ ನರಕದ
ಕೂಪದಲಿ ಮುಳುಗುವುದು ತಪ್ಪದು ಶಾಸ್ತ್ರಸಿದ್ಧವಲೇ
ರಾಪುಮಾಡದೆ ಬಿಡನು ಯಮನು ನಿ
ರಾಪರಾಧಿಯ ನೋಡಿ ಕೀರ್ತಿ ಕ
ಲಾಪವನು ನೀ ಕಾಯ್ದು ರಕ್ಷಿಸು ನಮ್ಮನನವರತ ೬೮

ನಿನ್ನ ಸೂತ್ರದೊಳಾಡುವುವು ಜೈ
ತನ್ಯ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ ಮೊಗ್ಗುವುವು ಊಹೆಗಳು
ಇನ್ನು ನಮಗೆ ಸ್ವತಂತ್ರವೆಲ್ಲಿಯ
ದನ್ಯಕರ್ಮ ಸುಕರ್ಮವೆಲ್ಲವು
ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ ೬೯

ಒಡೆಯ ನೀನೆಂದರಿತು ನಾನಿ
ಮ್ಮಡಿಯ ಭಜಿಸದೆ ದು (ಮ) ರುಳುನಾದೆನು
ಮಡದಿ ಮಕ್ಕಳ ಮೋಹದಲಿ ಮನ ಸಿಲುಕುತಡಿಗಡಿಗೆ
ಮಡದಿಯಾರೀ ಮಕ್ಕಳಾರೀ
ಒಡಲಿಗೊಡೆಯನು ನೀನು ನೀ ಕೈ
ಪಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮನನವರತ ೭೦

ಪಂಟಿಸಿದ ಮದಮುಖರು ಕೆಲಕೆಲ
ರುಂಟು ರಿಪುಗಳು ದಂಟಿಸುತ ಬಲು
ಕಂಟಕದಿ ಕಾಡುವರು ಕಾಯ್ಕೆ ಕಲುಷಸಂಹಾರ
ಭಂಟನಲ್ಲವೆ ನಾನು ದೀನರ
ನೆಂಟನಲ್ಲವೆ ನೀನು ನಿನ್ನೊಳ
ಗುಂಟೆ ನಿರ್ದಯ ನೋಡಿ ರಕ್ಷಿಸು ನಮ್ಮನನವರತ ೭೧

ದಂಡಧರನುದ್ದಂಡ ಪಟಲತೆ
ಕೊಂಡು ನೊರೆಹೊಗುವವರ ಕಾಣೆನು
ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ
ಖಂಡಪರಶುವು ರುದ್ರಭೂಮಿಯೊ
ಳಂಡಲೆದು ತಿರುಗುವನು ನೀನು
ದ್ದಂಡ ದೇವರದೇವ ರಕ್ಷಿಸು ನಮ್ಮನನವರತ ೭೨

ಶಕ್ತಿಯೆಂಬುದು ಮಾಯೆ ಮಾಯಾ
ಶಕ್ತಿಯದು ತನುವಿನಲಿ ನೀ ನಿಜ
ಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು
ಯುಕ್ತಿಯೊಳಗಿದನರಿತು ಮನದ ವಿ
ರಕ್ತಿಯಲಿ ಭಜಿಸುವಗೆ ಮುಕ್ತಿಗೆ
ಭಕ್ತಿಯೇ ಕಾರಣವು ರಕ್ಷಿಸು ನಮ್ಮನನವರತ ೭೩

ಮೂರು ಗುಣ ಮೊಳೆದೋರಿತದರೊಳು
ಮೂರು ಮೂರ್ತಿಗಳಾಗಿ ರಂಜಿಸಿ
ತೋರಿ ಸೃಷ್ಟಿ ಸ್ಥಿತಿ ಲಯಂಗಳ ರಚಿಸಿ ವಿಲಯದಲಿ
ಮೂರು ರೂಪೊಂದಾಗಿ ಪ್ರಳಯದ
ವಾರಿಯಲಿ ವಟಪತ್ರಶಯನದಿ
ಸೇರಿದವ ನೀನೀಗ ರಕ್ಷಿಸು ನಮ್ಮನನವರತ ೭೪

ನೀರಮೇಲಣ ಗುಳ್ಳೆಯಂದದಿ
ತೋರಿಯಡಗುವ ದೇಹವೀ ಸಂ
ಸಾರ ಬಹಳಾರ್ಣವದರೊಳಗೆ ಮುಳುಗಿದೆನು ಪತಿಕರಿಸಿ
ತೋರಿಸಚಲಾನಂದ ಪದವಿಯ
ಸೇರಿಸಕಟಾ ನಿನ್ನವೊಲು ನಮ
ಗಾರು ಬಾಂಧವರುಂಟು ರಕ್ಷಿಸು ನಮ್ಮನನವರತ ೭೫

ಹೊದ್ದಿ ನಿಲುವುದೆ ದರ್ಪಣದ ಮೇ
ಲುದ್ದುರುಳಿ ಬೀಳ್ವಂತೆ ನಿಮಿಷದಿ
ಬಿದ್ದುಹೋಗುವ ಕಾಯವೀ ತನುವೆಂಬ ಪಾಶದಲಿ
ಬದ್ಧನಾದೆನು ಮಮತೆಯಲಿ ನೀ
ನಿದ್ದುದಕೆ ಫಲವೇನು ಭಕ್ತಿ ವಿ
ರುದ್ಧವಾಗದವೊಲು ರಕ್ಷಿಸು ನಮ್ಮ ನನವರತ ೭೬

ಕೇಳುವುದು ಕಡುಕಷ್ಟ ಕಷ್ಟದ
ಬಾಳುವೆಯ ಬದುಕೇನು ಸುಡು ಸುಡು
ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು
ಬಾಳಬೇಕೆಂಬುವಗೆ ನೆರೆ ನಿ
ಮ್ಮೊಳಿಗವ ಮಿಗೆಮಾಡಿ ಭಕ್ತಿಯೊ
ಳಾಳಿ ಬದುಕುವುದುಚಿತ ರಕ್ಷಿಸು ನಮ್ಮ ನನವರತ ೭೭

ದೇಹಧಾರಕನಾಗಿ ಬಹುವಿಧ
ಮೋಹದೇಳಿಗೆಯಾಗಿ ಮುಕುತಿಗೆ
ಬಾಹಿರನು ತಾನಾಗಿ ವಿಷಯಾದಿಗಳಿಗೊಳಗಾಗಿ
ಹೇಯವೀ ಸಂಸಾರವೆನ್ನದೆ
ಮೋಹಿಸುವ ಮತಿಗೇಡಿ ಮಾನವ
ಸಾಹಸಿಯೆ ಸಟೆಮಾತು ರಕ್ಷಿಸು ನಮ್ಮ ನನವರತ ೭೮

ಅಳಿವ ಒಡಲನು ನೆಚ್ಚಿ ವಿಷಯಂ
ಗಳಿಗೆ ಕಾತರನಾಗಿ ಮಿಗೆ ಕಳ
ವಳಿಸಿ ಕಾಲನ ಬಳಿಗೆ ಹಂಗಿಗನಾಗಿ ಬಾಳುವರೆ
ತಿಳಿದು ಮನದೊಳು ನಿನ್ನ ನಾಮಾ
ವಳಿಯ ಜಿಹ್ವೆಗೆ ತಂದು ಪಾಪವ
ಕಳೆದು ಬಿಡುವುದು ಲೇಸು ರಕ್ಷಿಸು ನಮ್ಮ ನನವರತ ೭೯

ವರುಷ ನೂರಾಯುಷ್ಯವದರೊಳ
ಗಿರುಳು ಕಳೆದೈವತ್ತನೈವ
ತ್ತರಲಿ ವಾರ್ಧಿಕ ಬಾಲ್ಯ ಕೌಮಾರದಲಿ ಮೂವತ್ತು
ಇರದೆ ಸಂದುದು ಬಳಿಕ ಇಪ್ಪ
ತ್ತೊರುಷ ವದರೊಳಗಾದುದಂತಃ
ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ ೮೦

ಊಗು ತನಗೊಂದಿಲ್ಲ ಹೊತ್ತ ಶ
ರೀರಗಳು ಮಿತಿಯಿಲ್ಲ ತಾ ಸಂ
ಚಾರಿಸದ ನೆಲವಿಲ್ಲ ನುಡಿಯದ ಭಾಷೆ ನುತ್ತಿಲ್ಲ
ಬೇರೆ ಹೊಸತೊಂದಿಲ್ಲ ಉಣ್ಣದ
ಸಾರ ವಸ್ತುಗಳಿಲ್ಲ ತನು ಸಂ
ಚಾರವೀ ಬಗೆಯಾಯ್ತು ರಕ್ಷಿಸು ನಮ್ಮನನವರತ ೮೧

ಗೋಪುರದ ಭಾರವನು ಗಾರೆಯ
ರೂಪುದೋರಿದ ಪ್ರತಿಮೆಯಂದದಿ
ಈ ಪರಿಯ ಸಂಸಾರ ಭಾರವನಾರು ತಾಳುವರು
ತಾ ಪರಾಕ್ರಮಿಯೆಂದು ಮನುಜನು
ಕಾಪಥವ ನೈದುವನು ವಿಶ್ವ
ವ್ಯಾಪಕನು ನೀನಹುದು ರಕ್ಷಿಸು ನಮ್ಮನನವರತ ೮೨

ಬೀಜ ವೃಕ್ಷದೊಳಾಯ್ತು ವೃಕ್ಷಕೆ
ಬೀಜವಾರಿಂದಾಯ್ತು ಲೋಕದಿ
ಬೀಜ ವೃಕ್ಷ ನ್ಯಾಯವಿದ ಭೇದಿಸುವರಾರಿನ್ನು
ಸೋಜಿಗವ ನೀ ಬಲ್ಲೆ ನಿನ್ನೊಳು
ರಾಜಿಸುತ ಮೊಳೆದೋರುವುದು ಸುರ
ರಾಜನಂದನ ನಮಿತ ರಕ್ಷಿಸು ನಮ್ಮನನವರತ ೮೩

ತೊಗಲು ಬೊಂಬೆಗಳಂತೆ ನಾಲಕು
ಬಗೆಯ ನಿರ್ಮಾಣದಲಿ ಇದರೊಳು
ನೆಗಳಿದೀ ಚೌಷಷ್ಟಿ ಲಕ್ಷಣಜಾತಿ ಧರ್ಮದಲಿ
ಬಗೆಬಗೆಯ ನಾಮಾಂಕಿತದ ಜೀ
ವಿಗಳವೆಲ್ಲವು ನಿನ್ನ ನಾಮದಿ
ಜಗಕೆ ತೋರುತ್ತಿಹುವು ರಕ್ಷಿಸು ನಮ್ಮನನವರತ ೮೪

ಹೊಡಿದೆಲು ಮರಮುಟ್ಟು ಮಾಂಸದ
ಗೋಡೆ ಚರ್ಮದ ಹೊದಿಕೆ ನರಗಳ
ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು
ಬೀಡು ತೊಲಗಿದ ಬಳಿಕಲಾ ಸುಡು
ಗಾಡಿನಲಿ ಬೆಂದುರಿವ ಕೊಂಪೆಯ
ನೋಡಿ ನಂಬಿರಬಹುದೆ ರಕ್ಷಿಸು ನಮ್ಮನನವರತ ೮೫

ಬೀಗ ಮುದ್ರೆಗಳಿಲ್ಲದೂರಿಗೆ
ಬಾಗಿಲುಗಳೊಂಬತ್ತು ಹಗಲಿರು
ಳಾಗಿ ಮುಚ್ಚದೆ ತೆರೆದಿಹುದು ಜೀವಾತ್ಮ ತಾನಿರುತ
ನೀಗೆಯೆಲ್ಲವ ಬಿಸುಟು ಬೇಗದಿ
ಹೋಗುತಿಹ ಸಮಯದಲಿ ಇವರವ
ರಾಗ ಬಲ್ಲರೆ ನೀನೆ ರಕ್ಷಿಸು ನಮ್ಮನನವರತ ೮೬

ಕೀಲು ಬಲಿದಿಹುದೈದು ತಿರುಗುವ
ಗಾಲಿ ಎರಡರ ರಥದಿ ತ್ರೈಗುಣ
ಶೀಲನೋರ್ವನು ಸಂಚರಿಸುತಿಹನಾ ರಥಾಗ್ರದಲಿ
ಕೀಲು ಕಡೆಗೊಂದೂಲಿ ಬೀಳಲು
ಕಾಲಗತಿ ತಪ್ಪುವುದು ಅದರನು
ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ೮೭

ಬಿಗಿವ ರಕುತದ ರೋಮ ಕೂಪದ
ತೊಗಲ ಕೋಟೆಯ ನಂಬಿ ರೋಗಾ
ದಿಗಳ ಮುತ್ತಿಗೆ ಬಲಿದು ಜೀವನ ಪಿಡಿಯಲನುವಾಯ್ತು
ವಿಗಡ ಯಮನಾಳುಗಳು ಬರುತಿರೆ
ತೆಗೆಸು ಕಾಲನ ಬಲದ ಬಲು ಮು
ತ್ತಿಗೆಯನಿದ ಪರಿಹರಿಸಿ ರಕ್ಷಿಸು ನಮ್ಮನನವರತ ೮೮

ವಾರಣಗಳೆಂಟೆಸವ ನಗರಕೆ
ದ್ವಾರ ಒಂಬತ್ತದಕೆ ಬಲು ಮೊನ
ಗಾರರಾದಾಳುಗಳ ಕಾವಲುಗಾರರನು ಮಾಡಿ
ಆರರಿಯದಂತದರೊಳಗೆ ಹೃದ
ಯಾರವಿಂದದಿ ನೀನಿರಲು ಬರಿ
ದೂರು ಜೀವನಿಗುಂಟೆ ರಕ್ಷಿಸು ನಮ್ಮನನವರತ ೮೯

ಪೇಳಲಿನ್ನಳವಲ್ಲವೀ ಯಮ
ನಾಳುಗಳು ನೆರೆಯಂಗದೇಶವ
ಧಾಳಿಮಾಡುವ ರಕಟಕಟ ಸೆರೆ ನೂರೆಗಳ ಪಿಡಿದು
ಕಾಳು ಮಾಡುವರಿನ್ನು ತನುವಿದು
ಬಾಳಲರಿಯದು ಕೋಟೆಯವರಿಗೆ
ಕೋಳು ಹೋಗದ ಮುನ್ನ ರಕ್ಷಿಸು ನಮ್ಮನನವರತ ೯೦

ನಾಲಿಗೆಯು ನಾಸಿಕವು ನಯನ ಕ
ಪಾಲ ಪದ ಪಾಣಿಗಳು ತನುವಿನ
ಮೂಲ ಕರ್ತೃವಿನಲ್ಲಿ ಪರಿಚಾರಕರು ತಾವಾಗಿ
ಲೀಲೆಯಿಂದಿರುತಿರ್ದು ಕಡೆಯಲಿ
ಕಾಲ ತೀರಿದ ಬಳಿಕಲಪರನು
ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ೯೧

ಸತ್ತವರಿಗಳಲೇಕೆ ? ತನ್ನನು
ಹೊತ್ತವರು ಹೆತ್ತವರುಗಳ್ ತಾವ್
ಸತ್ತು ಹೋಗುವರಲ್ಲದುಳಿವರೆ ? ಮರುಗಲೇಕಿನ್ನು
ಮೃತ್ಯು ಬೆನ್ನಿನೊಳಿಹುದು ತಾವಿ
ನ್ನತ್ತು ಮಾಡುವುದೇನು ಪೂರ್ವದ
ತೆತ್ತಿಗನು ನೀನೀಗ ರಕ್ಷಿಸು ನಮ್ಮನನವರತ ೯೨

ಮಣ್ಣು ಮಣ್ಣಿನೊಳುದಿಸಲದರಲಿ
ಮಣ್ಣು ಬೊಂಬೆಗಳಾಗಿ ರಂಜಿಸಿ
ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ
ಮಣ್ಣಿನಲಿ ಬಂಧಿಸಿದ ದೇಹವ
ಮಣ್ಣು ಕೂಡಿಸಬೇಡ ಜ್ಞಾನದ
ಕಣ್ಣು ದೃಷ್ಟಿಯನಿತ್ತು ರಕ್ಷಿಸು ನಮ್ಮನನವರತ ೯೩

ಬೀಯವಾಗುವ ತನುವಿನಲಿ ನಿ
ರ್ದಾಯಕನು ನೀನಿರ್ದು ಅತಿ ಹಿರಿ
ದಾಯಸಂ ಬಡಿಸುವರೆ ನೀನನುಕೂಲವಾಗಿರ್ದು
ತಾಯನಗಲಿದ ಶಿಶುವಿನಂದದಿ
ಬಾಯ ಬಿಡುವಂತಾಯ್ತಲೇ ಚಿಂ
ತಾಯಕನೆ ಬಿಡಬೇಡ ರಕ್ಷಿಸು ನಮ್ಮನನವರತ ೯೪

ಮೊದಲು ಜನನವನರಿಯೆ ಮರಣದ
ಹದನ ಕಡೆಯಲಿ ತಿಳಿಯೆನಾ ಮ
ಧ್ಯದಲಿ ನೆರೆ ನಾ ನಿಪುಣನೆಂಬುದು ಬಳಿಕ ನಗೆಗೇಡು
ಮೊದಲು ಕಡೆ ಮಧ್ಯಗಳ ಬಲ್ಲವ
ಮದನ ಜನಕನು ನೀನು ನಿನ್ನಯ
ಪದಯುಗವ ಬಯಸುವೆನು ರಕ್ಷಿಸು ನಮ್ಮನನವರತ ೯೫

ಸಾರವಿಲ್ಲದ ದೇಹವಿದು ನಿ
ಸ್ಸಾರವಾಗಿಹ ತನುವಿನಲಿ ಸಂ
ಚಾರಿಯಹ ನೀನಿರ್ದು ಕಡೆಯಲಿ ತೊಲಗಿ ಹೋಗುತಲಿ
ದೂರ ತಪ್ಪಿಸಿಕೊಂಡು ಬರಿಯಹ
ದೂರ ಹೊರಿಸಿದೆ ಜೀವನಲಿ ಇದ
ನಾರು ಮೆಚ್ಚುವರಕಟ ರಕ್ಷಿಸು ನಮ್ಮನನವರತ ೯೬

ಅಂಡವೆರಡುದ್ಭವಿಸಿದುವು ಬ್ರ
ಹ್ಮಾಂಡ ವದರೋಪಾದಿಯಲಿ ಪಿಂ
ಡಾಂಡವೆನೆದುದು ಸ್ಥೂಲಕಾರಣ ಸೂಕ್ಷ್ಮತನುವಿನಲಿ
ಅಂಡ ನಿನ್ನಯ ರೋಮಕೂಪದೊ
ಳಂಡಲೆಬು ವಖಿಲಾಂಡವಿದು ಬ್ರ
ಹ್ಮಾಂಡನಾಯಕ ನೀನು ರಕ್ಷಿಸು ನಮ್ಮನನವರತ ೯೭

ಒಂದು ದಿನ ತನುವಿನಲಿ ನಡೆವುವು
ಇಂದು ಭಾಸ್ಕರ ಸ್ವರಗಳಿಪ್ಪ
ತ್ತೊಂದು ಸಾವಿರದಾರನೂರನು ಏಳುಭಾಗದಲಿ
ಬಂದುದನು ಉಡುಚಕ್ರದಲ್ಲಿಗೆ
ತಂದು ಧಾರೆಯನೆರೆವ ಮುನಿಕುಲ
ಬೃಂದ ಹೃದಯನು ನೀನು ರಕ್ಷಿಸು ನಮ್ಮನನವರತ ೯೮

ತೊಲಗುವರು ಕಡೆಕಡೆಗೆ ತಾ ಹೊಲೆ
ಹೊಲೆಯೆನುತ ಕಳವಳಿಸಿ ಮೂತ್ರದ
ಬಿಲದೊಳಗೆ ಬಂದಿಹುದ ಕಾಣದೆ ಬರಿದೆ ಮನನೊಂದು
ಜಲದೊಳಗೆ ಮುಳುಗಿದರೆ ತೊಲಗದು
ಹೊಲೆಗೆಲಸವೀ ದೇಹದೊಳು ನೀ
ನೆಲೆಸಿರಲು ಹೊಲೆಯುಂಟೆ ರಕ್ಷಿಸು ನಮ್ಮನನವರತ ೯೯

ಬರಿದಹಂಕಾರದಲಿ ತತ್ವದ
ಕುರುಹ ಕಾಣದೆ ನಿನ್ನ ದಾಸರ
ಜರೆದು ವೇದ ಪುರಾಣ ಶಾಸ್ತ್ರಗಳೋದಿ ಫಲವೇನು
ನರರು ದುಷ್ಕರ್ಮದಲಿ ಮಾಡಿದ
ದುರಿತವಡಗಲು ನಿನ್ನ ನಾಮ
ಸ್ಮರಣೆಯೊಂದೇ ಸಾಕು ರಕ್ಷಿಸು ನಮ್ಮನನವರತ ೧೦೦

ಎಂಜಲೆಂಜಲು ಎಂಬರಾ ನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನ್ನಿಸದೆ
ಎಂಜಲಿಲ್ಲಿಯದೆಲ್ಲಿಯುಂ ಪರ
ರೆಂಜಲಲ್ಲವೆ ಬೇರೆ ಭಾವಿಸ
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ ೧೦೧

ಕೇಳುವುದು ಹರಿಕಥೆಯ ಕೇಳಲು
ಹೇಳುವುದು ಹರಿಭಕ್ತಿ ಮನದಲಿ
ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ
ಊಳಿಗವ ಮಾಡುವುದು ವಿಷಯವ
ಹೂಳುವುದು ನಿಜಮುಕ್ತಿಕಾಂತೆಯ
ನಾಳುವುದು ಕೃಪೆಮಾಡಿ ರಕ್ಷಿಸು ನಮ್ಮನನವರತ ೧೦೨

ಈ ತೆರದೊಳಚ್ಯುತನ ನಾಮವ
ನೂತನದಿ ವಸುಧಾತಲದಿ ವಿ
ಖ್ಯಾತಿಯಲಿ ಬಣ್ಣಿಸಿದೆ ಕನ್ನಡ ಕುಸುಮ ಷಟ್ಪದಿಯ
ನೀತಿ ಕೋವಿದ ರಾಲಿಸುವುದತಿ
ಪ್ರೀತಿಯಲಿ ಕೇಳ್ದರಿಗೆ ಅಸುರಾ
ರಾತಿ ಚೆನ್ನಿಗರಾಯ ಸುಖಗಳನೀವನನವರತ ೧೦೩

ಬಾದರಾಯಣ ಪೇಳ್ದ ಭಾರತ
ಕಾದಿಕರ್ತನುದಾರ ಶ್ರೀಪುರ
ದಾದಿಕೇಶವ ಮೂರ್ತಿಗಂಕಿತವಾದ ಚರಿತೆಯನು
ಮೇದಿನಿಯೊಳಿದನಾರು ಹೃದಯದೊ
ಳಾದರಿಸಿ ಕೇಳ್ದಪರೊ ಮುದದಲಿ
ಆದಿಮೂರುತಿ ಸುರವರಾಧಿಪನೊಲಿವ ನನಪರತ ೧೦೪

ಕುಲಗಿರಿಗಳನ್ವಯವು ಧಾರುಣಿ
ಜಲಧಿ ಪಾವಕ ಮರುತ ಜಲ ನಭ
ಜಲಜಸಖ ಶೀತಾಂಶು ತಾರೆಗಳುಳ್ಳ ಪರಿಯಂತ
ಚಲನೆಯಿಲ್ಲದೆ ನಿನ್ನ ಚರಿತೆಯು
ಬಲಿದು ಧರೆಯೊಳಗವ್ವುವಂದದಿ
ಚೆಲುವ ಚೆನ್ನಿಗರಾಯ ರಕ್ಷಿಸು ನಮ್ಮನನವರತ ೧೦೫

ನೂರು ಕನ್ಯಾದಾನವನು ಭಾ
ಗೀರಥೀ ಸ್ನಾನವನು ಮಿಗೆ ಕೈ
ಯಾರ ಗೋವ್ಗಳ ಪ್ರೇಮದಿಂದಲಿ ಭೂಸುರರಿಗೊಲಿದು
ಊರುಗಳ ನೂರಗ್ರಹಾರವ
ಧಾರೆಯೆರೆದಿತ್ತಂತೆ ಫಲ ಕೈ
ಸೇರುವುದು ಹರಿಭಕ್ತಸಾರದ ಕಥೆಯ ಕೇಳ್ದರಿಗೆ ೧೦೬

ಮೇರುಮಂದರ ನಿಭಸುವರ್ಣವ
ವಾರಿಮಧ್ಯದೊಳಿರುವ ಅವನಿಯ
ನಾರಿಯರ ಗಾಯತ್ರಿ ಪಶುಗಳನಿತ್ತ ಫಲವಹುದು
ಧಾರುಣಿಯೊಳೀ ಭಕ್ತಿಸಾರವ
ನಾರು ಓದುವರವರಿಗನುದಿನ
ಚಾರು ವರಗಳನಿತ್ತು ರಕ್ಷಿಪನಾದಿಕೇಶವನು ೧೦೭

ಲೋಕದೊಳಗತ್ಯಧಿಕ ವೆನಿಸುವ
ಕಾಗಿನೆಲೆ ಸಿರಿಯಾದಿಕೇಶವ
ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿ ಸಾರವನು
ಜೋಕೆಯಲಿ ಬರೆದೋದಿ ಕೇಳ್ದರ
ನಾಕುಲದಿ ಮಾಧವನು ಕರುಣಿಪ
ಶ್ರೀ ಕಮಲವಲ್ಲಭನು ಮಿಗೆ ಬಡದಾದಿಕೇಶವನು ೧೦೭

ಮಂಗಳಂ ಸರ್ವಾಧಿಭೂತಗೆ
ಮಂಗಳಂ ಸರ್ವವನು ಪೊರೆವಗೆ
ಮಂಗಳಂ ತನ್ನೊಳಗೆ ಲೋಕವ ಲಯಿಸಿಕೊಂಬುವಗೆ
ಮಂಗಳಂ ಸರ್ವಸ್ವತಂತ್ರಗೆ
ಮಂಗಳಂ ಸತ್ಯಸ್ವರೂಪಗೆ
ಮಂಗಳಂ ಸಿರಿಯೊಡೆಯ ಚೆನ್ನಿಗರಾಯ ಕೇಶವಗೆ ೧೦೯

ಮಂಗಳಂ ಜಗದಾದಿಮೂರ್ತಿಗೆ
ಮಂಗಳಂ ಜಯಪುಣ್ಯಕೀರ್ತಿಗೆ
ಮಂಗಳಂ ಕರಕಲಿತ ಚಕ್ರವಿದಳಿತನಕ್ರನಿಗೆ
ಮಂಗಳಂ ದ್ರೌಪದಿಯ ಪೊರೆದಗೆ
ಮಂಗಳಂ ಧ್ರುವರಾಜಗೊಲಿದಗೆ
ಮಂಗಳಂ ಬೇಲೂರು ಚೆನ್ನಿಗರಾಯಕೇಶವಗೆ ೧೧೦

ಶ್ರೀ ಕನಕದಾಸಕೃತ ಹರಿಭಕ್ತಿಸಾರವು
ಸಂಪೂರ್ಣವಾದುದು



ಶ್ರೀರಾಮ ಸಹಾಯಂ

# ನ ಳ ಚ ರಿ ತ್ರೆ

ಶ್ರೀರಮಣ ಸರಸಿಜದಳಾಕ್ಷ ಮು
ರಾರಿ ಸಚರಾಚರ ಭರಿತ ದುರಿ
ತಾರಿ ನಿತ್ಯಾನಂದ ನಿರ್ಜರ ನಿಕರ ದಾತಾರ
ವಾರಿಜಾಂಬಕ ವರಗುಣಾಶ್ರಯ
ಮಾರಪಿತ ವೇದಾಂತನುತ ವರ
ಪೌರ ಚೆನ್ನಿಗರಾಯ ಪಾಲಿಸು ನಮಗೆ ಸತ್ಕೃಪೆಯ ೧

ಕರಿವದನ ಹೇರಂಬ ಲಂಬೋ
ದರ ಚತುರ್ಭುಜ ಮೋದಕಪ್ರಿಯ
ಪರಶು ಪಾಶಾಂಕುಶ ಕರಾಂಕಿತದಿಂದ ರಾಜಿಸುವ
ಸುರ ನರೋರಗ ನಮಿತ ಗೌರೀ
ವರಕುಮಾರಕ ವಿದ್ಯವಾರಿಧಿ
ವರದ ಗಣಪತಿ ಪಾಲಿಸೆನ್ನೆಯ ಮತಿಗೆ ಮಂಗಳವ ೨

ನಾರಿ ನಳಿನದಳಾಕ್ಷಿ ವರಜಂ
ಭಾರಿನುತೆ ಚತುರಾನನ ಪ್ರಿಯೆ
ಭೂರಿ ಗುಣಗಣಭರಿತೆ ಭಕ್ತಾಶ್ರಿತ ಜನಾಧಾರೆ
ನೀರೆ ನಿಗಮವಿಚಾರೆ ಘನ ಶೃಂ
ಗಾರೆ ಭಜಕರಿಗೆ ವರವೀವವು
ದಾರೆ ಶಾರದೆ ನಲಿದೊಲಿದು ನೆಲೆಸೆನ್ನ ಜಹ್ವೆಯಲಿ ೩

ರಾಯರೊಳಗಗ್ಗಳೆಯನಹ ಕೌಂ
ತೇಯನಿಗೆ ರೋಮಶ ಮಹಾಮುನಿ
ರಾಯ ವಿಸ್ತರಿಸಿದನು ನಳಭೂವರನ ಚರಿತೆಯನು
ಪ್ರೀಯದಿಂದಾಲಿಪುದು ಸುಜನರು
ಶ್ರೀಯರಸ ವರವುರದ ಚೆನ್ನಿಗ
ರಾಯನಂಕಿತವಾಗಿ ಪೇಳುವೆನೀ ಮಹಾಕಥೆಯ ೪

ಪರಮ ಪುಣ್ಯಚರಿತ್ರವಿದನಾ
ದರಿಸಿ ಕೇಳುವ ನರರ ಜನ್ಮಾಂ
ತರದ ಘನ ದುಷ್ಕರ್ಮ ದುಃಖವಿನಾಶ ದುರಿತಹರ
ಕರಿ ತುರಗ ರಥನಿಚಯ ರಾಜ್ಯದ
ಸಿರಿಯ ಸಂಪದವಾಯವನು ಮುರ
ಹರನು ಮನ್ನಿಸಿ ಕೊಡುವ ಸುಜನರಿಗಿಷ್ಟಸಂಪದವ ೫

ವಸುಧೆಪತಿ ಕೇಳೀ ಚರಿತ್ರೆಯ
ನಿಷಧವೆಂತೆಂಬಾ ಮಹಾಪುರ
ವೆಸೆದುದಗಣಿತ ಗೋಪುರ ಪ್ರಾಕಾರ ಶಿಖರದಲಿ
ಮಿಸುನಿ ರತ್ನಪ್ರಭೆಗಳಲಿ ರಂ
ಜಿಸುವ ದೇವಾಲಯಗಳಿರ್ದುದು
ವಸುಧೆಗಚ್ಚರಿಯೆನಿಸಿತಾ ಪುರವರಸ ಕೇಳೆಂದ ೬

ಮುಗಿಲ ತುಡುಕುವ ತೆನೆಗಳಾಳ್ಪೇ
ರಿಗಳು ಪಾತಾಳಗಳ ಖಾತಗ
ಳಗಳು ಬಳಸಿದ ಕೋಟೆ ಸುತ್ತಾವರಿಸಿದುನ್ನತದ
ಗಗನವೀಧಿಯ ತಾರಕೆಯವೋಲ್
ಸೊಗಯಿಸುವ ಕನ್ನಡಿಯ ಸಾಲ್ಗೋಂ
ಬೆಗಳ ರತ್ನಪ್ರಭೆಗಳಲಿ ರಂಜಿಸಿದುದಾ ನಗರ ೭

ರವಿ ಶಶಿಯ ವೀಧಿಗಳ ಹೇಮದ
ವಿವಿಧ ಮಣಿ ಭಿತ್ತಿಗಳ ಕಾಂತಿಯು
ದಿವವನಣೆದುದು ರತ್ನನಿಚಯದ ಭದ್ರಭವನಿಕೆಯ
ಯುವತಿಯರ ಸಂಗೀತ ವೀಣಾ
ರವದ ರಹಿಯಲಿ ಮನಕೆ ಸವಿದೋ
ರುವ ಮಹಾರಚನೆಯಲಿ ಮೆರೆದುದು ನಿಷಧವರನಗರ ೮

ಭೂರಮಣ ಕೇಳಾ ಪುರಾಧಿಪ
ವೀರಸೇನ ನೃಪಾಲ ರಿಪುಸಂ
ಹಾರನಾತನ ತನಯ ನಳನೃಪನೆಂಬುದಭಿದಾನ
ಭೂರಿ ವಿಕ್ರಮ ಪರಮಧರ್ಮ ವಿ
ಚಾರ ಶಶಿಕುಲವಾರ್ಧಿ ಘನಗಂ
ಭೀರ ಪಾಲಿಸುತಿರ್ದ ಸಪ್ತದ್ವೀಪದವನಿಪರ ೯

ಶರಧಿ ಮೇರು ದಿಗಂತದವನೀ
ಶ್ವರರು ಕಪ್ಪವ ತೆರುವರಗಣಿತ
ಧುರವಿಜಯ ದೋರ್ವಳರು ಮಣಿಮಯ ಮುಕುಟವರ್ಧನರು
ಚರಣಕಾನತರಾಗಿ ನಳಭೂ
ವರನ ಭಜಿಸುತಲಿರ್ದರಮರೇ
ಶ್ವರನ ವೋಲಗದಂತೆ ಮೆರದುದು ನೃಪತಿಯಾಸ್ಥಾನ ೧೦

ಭೂಮಿಪತಿ ಕೇಳಿತ್ತಲುತ್ತರ
ಭೂಮಿಯಲಿ ಪ್ರಜ್ವಲಿಸುತಿಹ ಸು
ತ್ರಾಮಪುರದಂತೆಸೆದುದಲ್ಲಿ ವಿದರ್ಭನಗರವದು
ರಾಮಣೀಯಕ ರಚನೆಯಲಿ ನವ
ಹೇಮ ರಚಿತ ಸುರತ್ನ ಸೌಧ
ಸ್ತೋಮಗಳ ಸಾಲಿನಲಿ ರಂಜಿಸುತಿರ್ದುದಾ ನಗರ ೧೧

ಅಲ್ಲಿಗಧಿಪತಿ ಭೀಮನೃಪ ಗುಣ
ದಲ್ಲಿ ನಯದಲಿ ವೀರ್ಯವಿತರಣ
ದಲ್ಲಿ ಚಾತುರ್ಯದಲಿ ಸೌಭಾಗ್ಯದಲಿ ಧೈರ್ಯಗಲಿ
ಬಲ್ಲಿದನು ತಾನಾಗಿ ನಿಜಸುತ
ರಿಲ್ಲವೆಂದುಮ್ಮಳಿಸುತಿರೆ ಮನ
ದಲ್ಲಿ ಯಾಕ್ಷಣ ಬಂದನಾ ದಮನಾಖ್ಯ ಮುನಿವರನು ೧೨

ಬಂದ ಮುನಿಗವನೀಶ ವಂದಿಸಿ
ನಿಂದು ಕರಗಳ ಮುಗಿದು ವಿನಯದೊ
ಳೆಂದು ಸುತ ಸಂತಾನವಿಲ್ಲದ ಸಿರಿಯದೇಕೆಂದು
ನೊಂದು ನುಡಿಯಲು ಸುತರ ಪಡೆಯುವ
ತಂದೆಗಿದು ಸಂತಾಪವಲ್ಲವೆ
ಯೆಂದು ಮುನಿ ಕರುಣದಲಿ ಸಂತೈಸಿದನು ಭೂಪತಿಯ ೧೩

ಯೋಗದೃಷ್ಟಿಯೊಳರಿದು ಮುನಿವರ
ನಾಗ ನೃಪನೊಡನೆಂದ ವರಸುತ
ಯಾಗವನು ಮಾಡರಸ ತಪ್ಪದು ಪುತ್ರಲಾಭವೆನೆ
ಆ ಗರುವ ಮುನಿ ಮಂತ್ರದಿಂದ ಸ
ರಾಗದಲಿ ಶುಭದಿನ ಸುಲಗ್ನದಿ
ಯಾಗವನು ಪೂರೈಸಿದನು ಸುರ ನರರು ತಣಿವಂತೆ ೧೪

ಅರಸ ಕೇಳಾ ಯಾಗ ಸಮನಂ
ತರದೊಳಾ ಮುನಿಮುಖ್ಯರನು ಸ
ತ್ಕರಿಸಿ ಕಳುಹಿದನವರವರನುಚಿತೋಪಚಾರದಲಿ
ತರುಣಿಗಾದುದು ಗರ್ಭ ಮಂಗಳ
ಕರ ಸುಲಗ್ನ ಸುತಾರೆಯಲಿ ನೃಪ
ನರಸಿ ಪಡೆದಳು ತನುಜೆಯೊರ್ವಳ ಲೋಕಸುಂದರಿಯುರು ೧೫

ಅಮರ ದುಂದುಭಿ ಮೊಳಗಲಿಳೆ ಸಂ
ಭ್ರಮಿಸೆ ಪುರಜನ ನಲಿಯೆ ನೃಪನಾ
ಸಮಯದಲಿ ದಮನಾಖ್ಯಮುನಿಗಭಿನಮಿಸಿ ನಿಜಸುತೆಗೆ
ವಿಮಲನಾಮವ ಪಾಲಿಸೆನಲಾ
ಕಮಲಮುಖಿ ದಮಯಂತಿಯೆಂಬು
ತ್ತಮದ ಪೆಸರೆಂದೊರೆದು ಮುನಿ ಹೋದವಂಟನಾಶ್ರಮಕೆ ೧೬

ನಿರಿಗುರುಳ ಸಿರಿಮುಡಿಯ ಪವಳಾ
ಧರದ ತೋಳ್ಗಳ ಕಂಬುಕಂಠದ
ತರಳ ನಯನದ ಸಂಪಿಗೆಯ ನಾಸಿಕದ ಪೆರೆನೊಸಲ
ಹರಿಯ ಮಧ್ಯದ ಹಂಸಗಮನದ
ಗುರುಕುಚದ ಕರಪಲ್ಲವದ ಸರ
ಸಿರುಹಮುಖಿ ನಲಿದಾಡುತಿರ್ದಳು ರಾಜಭವನದಲಿ ೧೭

ಗುಣದೊಳಗೆ ಶೀಲದಲಿ ಮಾತಿನ
ಭಣಿತೆಯಲಿ ಗಾಂಭೀರ್ಯದಲಿ ವಿತ
ರಣದಿ ವೀಣಾರಚನೆಯಲಿ ಗುರುದೇವ ಭಕ್ತಿಯಲಿ
ಪ್ರಣುತಿಸಲು ಶರ್ವಾಣಿ ರತಿಯರಿ
ಗೆಣೆಯೆನಿಪ ಚೆಲುವಿಕೆಯ ಮಿಕ್ಕಿನ
ಬಣಗು ಸತಿಯರು ಸರಿಯೆ ಲೋಕದೊಳೆಂದನಾ ಮುನಿಪ ೧೮

ಕೇಳು ಪಾಂಡವತನಯ ಭೀಮನೃ
ಪಾಲನೋಲಗದಲ್ಲಿ ಧರಣೀ
ಪಾಲಕರ ಚರಿತ ಪ್ರಸಂಗದೊಳಿರಲು ನಳನೃಪನ
ಶೀಲವನು ಸೌಂದರ್ಯ ವಿಭವ ವಿ
ಶಾಲಮತಿ ಲಾವಣ್ಯ ನಿಪುಣ ಗು
ಣಾಳಿಗಳ ವಿಸ್ತರಿಸಿ ಕೊಂಡಾಡಿದರು ಕವಿಜನರು ೧೯

ವನಜಮುಖಿಯು ವಾರ್ತೆಯೆಲ್ಲವ
ಮನವೊಲಿದು ಕೇಳಿದಳು ಹಿಗ್ಗುತ
ನಡೆವುದಂತಃಕರಣ ಹೆಚ್ಚಿದ ಚಿತ್ತವೃತ್ತಿಯಲಿ
ನೆನೆದು ಬರೆದಳು ನಳನ ರೂಪವ
ನನುನಯದಿ ಚಿತ್ರದಲಿ ಮಿಗೆ ಸಂ
ಜನಿಸಿತವನಲಿ ಮೋಹವೆಲೆ ಧರಣೀಶ ಕೇಳೆಂದ ೨೦

ಉಣ್ಣಳನ್ನವನಖಿಳ ವಸ್ತುವ
ಕಣ್ಣಿನಿಂದೀಕ್ಷಿಸಳು ಸಖಿಯರ
ಮನ್ನಣೆಗೆ ಮೈಗೊಡಳು ಬಲು ಬೇಸರದಿ ಬಳಲುವಳು
ಬಣ್ಣಿಸಲು ಮಾತಾಡಲೊಲ್ಲಳು
ಬಣ್ಣಗುಂದಿದ ದೇಹದಲಿ ಯೆಳ
ವೆಣ್ಣುಗಳ ಸೌಖ್ಯವನು ಮರೆದಳು ಮದನನೆಸುಗೆಯಲಿ ೨೧

ಕೆಳದಿಯರು ಕಂಡಂತರಂಗದಿ
ಬಲಿದ ವಿರಹವ ರಾಜವದನೆಯ
ಹೊಳಲೊಳುದ್ಯಾನದಲಿ ಸುರುಚಿರ ಪುಷ್ಪತರುಗಳಲಿ
ಎಳದಳಿರ ನೆಳಲಿನಲಿ ಪರಿಮಳ
ದಲರ ಪನ್ನೀರಿನಲಿ ಸಖಿಯರು
ನಲವು ಹಿಂಗಿದ ಸತಿಯನುಪಚರಿದರು ಪಲತೆರದಿ ೨೨

ಕೇಳು ಕುಂತೀತನಯ ಭೀಮನೃ
ಪಾಲತನುಜೆಗೆ ವಿರಹ ಬಲಿದು ವಿ
ಶಾಲವಾಗಿರಲತ್ತ ಕೇಳೈ ನಿಷಧನಗರಿಯನು
ಪಾಲಿಸುವ ನಳಚಕ್ರವರ್ತಿಯು
ಪೋಲಗದ ರಚನೆಯಲಿ ರತ್ನದ
ಸಾಲು ಹೊಳಹಿನ ಸಿಂಹಪೀಠದೊಳೆಸೆದು ಕುಳ್ಳಿರ್ದ ೨೩

ಆ ಸಮಯದಲಿ ಬಳಿಗೆ ಬಂದಾ
ದೇಶಯಾತ್ರಿಕ ಭೂಸುರನನವ
ನೀಶ ಕೇಳಿದನಿಳೆಯೊಳೇನು ವಿಶೇಷವಂದೆನುತ
ಭೂಸುರೋತ್ತಮನೆಂದನೆಲೆ ಧರ
ಣೀಶ ಕೇಳು ವಿದರ್ಭನಗರಿಯೊ
ಳೀಸು ಪುಣ್ಯೋದಯದಿ ಪಡೆದನೊ ಭೀಮನೃಪ ಸುತೆಯ ೨೪

ಅವಳ ರೂಪಗುಣಾತಿಶಯಗಳ
ನೆವಗೆ ಬಣ್ಣಿಸಲಾಗ ಕೇಳಾ
ಯುವತಿ ಲೋಕದ ಸತಿಯ ಬಗೆಯಂತಲ್ಲ ಭಾವಿಸಲು
ಪ್ರವಿಮಲಾಕಾರದಲಿ ನೋಡಲು
ಸವಿನುಡಿಯ ಸೊಬಗಿನಲಿ ನಯದಲಿ
ಭುವನದಲಿ ಕಂಡಿಲ್ಲ ದಮಯಂತಿಗೆ ಸಮಾನರನು ೨೫

ಹೇಳುತಿರೆ ನುಡಿನುಡಿಗೆ ಮೆಚ್ಚುತ
ಕೇಳಿ ತಲೆದೂಗಿದನು ನೈಷಧ
ನಾಲಿಗಳಿಗೆ ಸರೋಜಮುಖಿ ಗೋಚರಿಸಿದಂತಾಗೆ
ಬಾಲಿಕೆಯ ಮೋಹಿಸಿದ ಪುಷ್ಪಶ
ರಾಳಿಯಲಿ ಮನನೊಂದು ಶಿವಶಿವ
ಲೋಲಲೋಚನೆಯೆಂತು ತನಗಹಳೆಂದು ಚಿಂತಿಸಿದ ೨೬

ವನಿತೆಗುಣಗಳನೊಂದನೊಂದನು
ಮನದೊಳಗೆ ಸವಿಮಾಡಿ ತರುಣಿಯ
ನೆನೆದು ಹೊಂಪುಳಿವೋಗಿ ವಿರಹದಿ ಮದನಗೀಡಾಗಿ
ಕವಿದ ಬೆಸನದಿ ಕಾಯಕುಂದಿದ
ಜನಪ ನಳನಿರೆ ಬೇಂಟೆಕಾರರ
ಜನನಿವಹದಿಂ ಬಂದರಾ ಸಮಯದಲಿ ವನಚರರು ೨೭

ಬಂದು ಫಲವಸ್ತುಗಳ ಕಾಣಿಕೆ
ಯಿಂದ ಕೈಮುಗಿದರಸ ಮೃನಘಗ
ವಿಂದು ಬೇಂಟೆಗೆ ಗಮಿಸಬೇಕೆನೆ ನೃಪತಿ ನಸುನಗುತ
ಇಂದು ವಿರಹವ ಕಳೆವ ಪರಿ ಲೇ
ಸೆಂದು ಶಬರರ ಕಳುಹಿಯೋಲಗ
ದಿಂದಲರಮನೆಗೆಯ್ದಲಸ್ತಾಂಬುಧಿಯೊಳಿನನಿಳಿದ ೨೮

ನಳಿನಸಖನುದಯದಲಿ ನಳನೃಪ
ತಿಲಕ ಕರಸಿದ ಸಕಲ ದಳವನು
ಹೊಳೆವ ಕಡುಗ ಕಠಾರಿ ಮೊದಲಾದಖಿಳ ಕೈದುಗಳ
ಬಲುಭಟರು ಬೇಂಟೆಯಲಿ ನಾನಾ
ಬಲೆಗಳಂಟೆನ ಕೋಲುಕಣ್ಣೆಯ
ಚಲಯುತರು ಸಂದಣಿಸಿ ಮೆರೆದುದು ಪುರದ ಬಾಹೆಯಲಿ ೨೯

ಅರಸ ಕೇಳ್ ಶಶಿಕುಲ ಶಿರೋಮಣಿ
ಧರಿಸಿದನು ನವರತುನಮಯದಾ
ಭರಣಗಳ ದಿವ್ಯಾಂಬರಾದಿ ಸುಗಂಧ ಲೇಪದಲಿ
ತರಿಸಿ ಏರಿದ ವಾಯುವೇಗದ
ತುರಗವನು ಸಂದಣಿಸಿ ಮೋಹರ
ತೆರಳಿತಗಣಿತ ವಾದ್ಯದಲಿ ನೆಲಬಿರಿಯಲೈತಂದ ೩೦

ಏನ ಹೇಳುವೆನರಸ ಹೊಕ್ಕರು
ಕಾನನವ ಬಳಸಿದರು ಮೃಗತತಿ
ಯಾನಲಾವುದೆ ತೆಗೆದು ಹಾಯ್ದುದು ಭಟರ ಫಲ್ಲಣಗೆ
ಆನೆಗಳ ಕೆಡಹಿದರು ಬಲು ಸಂ
ಧಾನದಲಿ ಹುಲಿ ಕರಡಿ ಮುಸು ಮೊಲ
ವಾನರಾದಿ ಸಮಸ್ತ ಮೃಗಗಳ ತರುಬಿ ಕೆಡಹಿದರು ೩೧

ನಿಲಿಸಿ ಬೇಂಟೆಯನಲ್ಲಿ ಬಳಲಿದ
ಬಲಸಹಿತ ತಾ ಬಂದು ತತ್ಪುರ
ವಳಯದುದ್ಯಾನವನು ಹೊಕ್ಕನು ಬಲಿದ ವಿರಹದಲಿ
ನಲವು ಹಿಂಗಿದ ಮನದ ದುಗುಡದ
ಲಿಳಿದು ಕೊಳನಲಿ ಜಾನು ಜಂಘೆಯ
ತೊಳೆದು ಪರಿಹೃತಶ್ರಮನಾಗಿ ಚರಿಸಿದನು ವನದೊಳಗೆ ೩೨

ಆ ಕೊಳನ ತೀರದಲಿ ತರುಗಳ
ನೇಕವದರೊಳಗೊಂದು ತಾಣದೂ
ಳೇಕವೃಕ್ಷದ ನೆರಳಿನಲಿ ನವಕುಸುಮದಿಕ್ಕೆಯೊಲ
ಆ ಕಮಲಜನ ತುರಗ ನಿದ್ರಾ
ವ್ಯಾಕುಲದಿ ಮಲಗಿರಲು ಕಂಡ ದಿ
ವಾಕರೋನ್ನತ ಶುಭ್ರತೇಜದ ರಾಜಹಂಸಯನು ೩೩

ಅರುಣಮಯದಾನನದ ಪದಯುಗ
ಗರಿಗಳುನ್ನತ ಧವಳದೇಹದ
ಪರಮ ತೇಜದೊಳಸೆವ ಹಂಸೆಯ ಕಂಡು ಬೆರಗಾಗಿ
ಹರಹರ ಇದರಾಯತವ ಮರ
ಹರನು ತಾನೇ ಬಲ್ಲನೆನುತ
ಕ್ಕರದಿ ಮೆಲ್ಲನ ಕರವ ನೀಡುತ ಪಿಡಿವ ಹಂಸೆಯನು ೩೪

ಒದರಿ ಕುಣಿಯಲು ಹಸ್ತದೊಳಗದ
ಕದಲದಂದದಿ ಪಿಡಿಯಲರಸನ
ವದನಕಮಲವ ನೋಡಿ ಹೆದರಿತು ಪ್ರಾಣಭೀತಿಯಲಿ
ಹೃದಯ ಕರಗುವ ಮಾತನೆಂದುದು
ಮದಕರಿಗೆ ನೊರಜಂತರವೆ ಕೈ
ಸದರದವರನು ಕೊಲುವುದೇನರಿದೆಂದುದಾ ಪಕ್ಷಿ ೩೫

ಕರಿಗಳನು ಮ..ರಿದಿಡುವ ಸಿಂಹಕೆ
ನರಿಗಳಿದಿರೇ ತಾನು ನಿಪಗಂ
ತರವೆ ಸಾಕಂತಿರಲಿ ಕಂಡವರಲ್ಲ ನಗದಿಹರೆ
ಅರಿ ಭಯಂಕರ ಶತ್ರುಗಳ ಸಂ
ಹರಿಸುವುದು ನೃಪನೀತಿ ನಿನಗಿದು
ತರವೆ ಬಿಡು ಪರಹಿಂಸೆ ದೋಷವಿಪೆಂದುದಾ ಪಕ್ಷಿ ೩೬

ಬಡಬಗಾ..ತಣವಿಕ್ಕುವೆಡೆಯೊ
ಕ್ಕುಡಿತೆ ಹಾಲೇ ಮಂಜು ಸುರಿಯಲಿ
ಕೊಡನೆ ಕೆರೆ ತುಂಬುವುದೆ ನೃಪ ನೀನೆನ್ನ ಭುಂಜಿಸಲು
ಒಡಲಿಗಾಪ್ಯಾಯನವಹುದೆ ಕೇಳ್
ಪೊಡವಿಪತಿ ಬಿಡು ನನ್ನ ಮನೆಯಲಿ
ಮಡದಿ ಮಕ್ಕಳ ಗೋಳ ನೋಡೆಂದೊರಲಿತಾ ಹಂಸೆ ೩೭

ಮರನ ಹುತ್ತವನೇರಿದರ ಸಂ
ಗರದಿ ದೈನಂಬಡುವರಾಯುಧ
ಮುರಿದ ಬರಿಗೈಯವರ ನೀರೊಳು ಹೊಕ್ಕು ನಿಂದವರ
ತರುಣಿಯ..ರ ಮರೆಗೊಂಡವರ ನಿ
ಬ್ಬರನಿ ಮುರಿದೋಡುವರ ನಿದ್ರಾ
ಭರದೊಳಿರ್ದವರ ಕೊಲುವುದನುಚಿತವೆಂದುದಾ ಹಂಸೆ ೩೮

..ಡಿಗೆ ನಾಚಿದನರಸ ಹಂಸೆಯ
..ಳಿಗೆ ಮೆಚ್ಚಿದನು ನಿನ್ನನು
ಕೊಲುವವನಲ್ಲ ನಿನ್ನಾಲಯಕೆ ಪೋಗೆನುತ
..ಕ್ಕೆಯ ಕೊಡಹಿ ಹಾರಿತು
..ತು ಧರೆಗೆ ರಾಯನ
..ದದಿ ನುಡಿದುದು ನೃಪಗೆ ವಿನಯದಲಿ ೩೯

ಭೂರಮಣ ಕೇಳಸುವ ಕಾಯ್ದುಪ
ಕಾರ ಮಾಡಿದೆ ನೀನು ನಿನಗುಪ
ಕಾರ ಮಾಡುವನೆನಲದೇನೆಂದರಸ ಬೆಸಗೊಂಡ
ಸಾರಹೃದಯನೆ ಚಿತ್ತವಿಸು ವಿ
ಸ್ತಾರದಿಂದರಹುವೆನು ಭುವನದೊ
ಳಾರಿಗುಂಟೇ ಪರಮಸುಕೃತಗಳೆಂದುದಾ ಪಕ್ಷಿ ೪೦

ಅರಸ ಕೇಳತಿದೂರದಲಿ ಸುರ
ಪುರವ ಪೋಲ್ವ ವಿದರ್ಭಪಟ್ಟಣ
ದರಸು ಭೀಮನೃಪಾಲನಾತನ ತನುಜೆ ದಮಯಂತಿ
ಪರಮ ಪುಣ್ಯಾಂಗನೆ ಮಹಾ ಸೌಂ
ದರಿ ನಿಪುಣೆ ಗಜಗಮನೆ ನಯಗುಣ
ಭರಿತೆ ಸೊಬಗಿನ ಸೋನೆ ತಾನಿಹಳಲ್ಲಿ ವನಜಾಕ್ಷಿ ೪೧

ಕ್ಷಿತಿಯೊಳಿಹ ಸತಿಯರಲಿ ಅಮರಾ
ವತಿಯೊಳಿಹ ಸ್ತ್ರೀಯರಲಿ ಮೇಣಾ
ವಿತಳದಲ್ಲಿಹ ನಾರಿಯರಲೀಕ್ಷಿಸಿದೆನವಳಂಗೆ
ಪ್ರತಿಯ ಕಾಣೆನು ರೂಪಿನಲಿ ನೀ
ನತಿ ಚೆಲುವ ನಿನಗವಳು ಪಾಸಟಿ
ಸತಿಗೆ ನೀನೇ ರಮಣನಲ್ಲದೆ ಕಾಣೆನಿತರರನು ೪೨

ಅವಳು ನಿನಗೊಲಿವಂತೆ ಮಾಡುವೆ
ಶಿವನ ಕೃಪೆ ನಿನಗುಂಟು ನಮ್ಮಲಿ
ಸವಡಿನುಡಿಯಿಲ್ಲರಸ ನಂಬುವುದೆನ್ನ ನೀನೆನಲು
ಅವನಿಪತಿ ನಸುನಗುತ ಹಂಸೆಯ
ಸವಿನುಡಿಗೆ ಮನಸೋತು ವಿರಹದ
ತವಕದಲಿ ಹೇವರಿಸಿ ನುಡಿದನು ನೃಪತಿ ಖಗಪತಿಗೆ ೪೩

ಮನಸಿಜನ ಶರಹತಿಗೆ ನೊಂದೆನು
ತನುವ ಸೈರಿಸಲಾರೆನೆನಗಾ
ಯುವತಿಯನು ತಂದಿತ್ತು ಸಲಹೆನ್ನ ನುಪ ಕರುಣದಲಿ
ಎನಗೆ ನೀನೇ ಪರಮಬಾಂಧವ
ಮನಕೆ ಹರುಷವ ಮಾಡು ನೀನೀ
ಬನಕೆ ಬಹ ಪರಿಯಂತ ತಾನಿಲ್ಲಿಹೆನು ಹೋಗೆಂದ ೪೪

ಕೇಳು ಧರ್ಮಜ ನಳನೃಪಾಲನ
ಬೀಳುಕೊಂಡು ಸರಾಗದಿಂದ ವ
ನಾಲಯವ ಹೊರವಂಟು ತೆರಳಿತು ವಾಯುವೇಗದಲಿ
ಆ ಲತಾಂಗಿಯ ಪತಿಯ ಕೀರ್ತಿವಿ
ಶಾಲವಾದಂದದಲಿ ರಾಜಪು
ರಾಳ ಗಗನಕೆ ಹಾಯ್ದು ಕಂಡಿಳಿತಂದುದಾ ಪುರಕ ೪೫

ಕನಕ ಮಣಿ ನಿರ್ಮಿತದ ಸೌಧದಿ
ಜನನಿಕರ ಸಂದೋಹದಲಿ ಉಪ
ವನದ ವೀಥಿಗಳೆಸೆದು ಮೆರೆವ ವಿದರ್ಭಪಟ್ಟಣಕೆ
ಮನವೊಲಿದು ನಿಜಬಳಗದೊಡನಂ
ಗನೆಯರೋಲಗದಲ್ಲಿ ಮದನನ
ಮೊನೆಯಲಗಿನಲಿ ಬಳಲುವ ಸತಿಯಳ ಕಂಡುದಾ ಹಂಸೆ ೪೬

ತಳಿತ ಮೇಘದಿ ಹೊಳೆವ ಮಿಂಚಿನ
ಬಳಗವೆನೆ ಹಂಸೆಗಳು ನಭದಿಂ
ದಿಳೆಗಿಳಿದು ಸತಿಯರ ಸಭಾಮಂಡಲದಿ ಕುಳ್ಳಿರಲು
ನಳಿನಲೋಚನೆ ಕಂಡು ಪಕ್ಷಿಯ
ಲಲನೆಯರ ಮೊಗ ನೋಡಿ ಹಂಸೆಯು
ಚೆಲುವ ಬಣ್ಣಿಸಿ ಪಿಡಿಯಬೇಕೆಂದೆನುತ ಗಮಿಸಿದಳು ೪೭

ಮೆಲ್ಲಮೆಲ್ಲನೆ ಅಡಿಯಿಡುತ ಕರ
ಪಲ್ಲವವ ಚಾಚಿದಳು ನೂಪುರ
ಘಲ್ಲುಘಲಿರೆನೆ ಹಿಂದುಹಿಂದಕೆ ಸರಿದುದಾ ಹಂಸೆ
ನಿಲ್ಲದಂಗೈಸುತ್ತ ಬರಲ
ಲ್ಲಲ್ಲಿಗಡರಿತು ಕುಸುಮಮಯ ನವ
ಮಲ್ಲಿಗೆಯ ಬನದೊಳಗೆ ಹೊಕ್ಕುದು ಹೊವರ ಹೊಸಮೆಳೆಯ ೪೮

ಕೆಳದಿಯರ ಕೆಲಕೊತ್ತಿ ತಾನೇ
ಮೆಳೆಯ ಹೊಕ್ಕಳು ಬಾಗಿ ಸೆಳೆನಡು
ಬಳುಕೆ ಕುಚಭಾರದಲಿ ಮೇಲುದು ಜಾರೆ ಮುಡಿ ಚೆದುರೆ
ಜಲಜಮುಖಿ ಬಮರಿಡಲು ಕೊರಳಿನ
ಲಲಿತ ಮುಕ್ತಾಹಾರವಳ್ಳಾ
ಡಲು ಸೆರಗನಳವಡಿಸಿ ನಿಂದಳು ಬಳಲಿ ಬಿಸುಸುಯ್ದು ೪೯

ಎಲೆ ಸರೋರುಹಗಂಧಿ ನೀನೆ
ನ್ನೊಲಿದು ಮನದಲಿ ಹಿಡಿವೆನೆಂಬೀ
ಚಲವಿದೇಕೆ ಮಾಣು ನಾವಂಬರದ ಪಕ್ಷಿಗಳು
ಸಿಲುಕುವವರಾವಲ್ಲ ಬರಿದೇ
ಬಳಲದಿರು ತಾ ಬಂದ ಪರಿಯನು
ತಿಳುಹುವೆನು ನಿನಗೆಲ್ಲವನು ಕೇಳೆಂದುದಾ ಪಕ್ಷಿ ೫೦

ನಳಿನಮುಖಿ ನಳಚಕ್ರವರ್ತಿಯ
ಬಳಿಯ ವಾಹನವಾಗಿ ತಾನಿಹೆ
ನೊಲಿದು ಸಲಹುವನೆನ್ನ ಪರಮಪ್ರೀತಿವಚನದಲಿ
ಇಳೆಗೆ ನಳಕೂಬರ ಜಯಂತರ
ಚೆಲುವ ಮದನನ ರೂಪರೇಖೆಯ
ಹಳಿವುದಾ ನಳನೃಪನ ನಿಜಸೌಂದರ್ಯ ಲೋಕದಲಿ ೫೧

ನಿನ್ನ ರೂಪಿನ ಚೆಲುವ ನಳನೃಪ
ನುನ್ನತದ ಚೆಲುವಿಂಗೆ ಜಗದೊಳ
ಗಿನ್ನು ನಾ ಸರಿಕಾಣೆ ನಿಮಗಿರ್ವರಿಗೆ ಸಮನಹುದು
ಎನ್ನಲಾ ನುಡಿಗೇಳಿ ಹಂಸೆಗೆ
ತನ್ನ ಶಿರವನು ಬಾಗಿ ಗುಣಸಂ
ಪನ್ನೆ ನುಡಿದಳು ನಾಚಿ ನಸುನಗೆಯಿಂದ ವಿನಯದಲಿ ೫೨

ಪರಮಗುಣನಿಧಿ ಪಕ್ಷಿ ಕೇಳ್ ಬಾ
ಹಿರನು ಪಾತಕ ಮದನನತಿ ನಿ
ಷ್ಠುರದೊಳೆಸೆಯಲು ಪುಷ್ಪಬಾಣದಿ ನೊಂದುದೆನ್ನೊಡಲು
ಕರುಣರಸಧಾರೆಯಲಿ ತಾಪವ
ಪರಿಹರಿಸಿ ಸಂತೋಷದಲಿ ನೀ
ಧರಣಿಪತಿ ನಳನೃಪಗೆ ಬಿನ್ನೈಸೆಂದಳಿಂದುಮುಖಿ ೫೩

ಪರರ ದುಃಖವ ಪರಿಹರಿಸಿ ಮಿಗೆ
ಪರರಿಗುಪಕಾರಾರ್ಥವೆಸಗಲು
ಪರಮಪುಣ್ಯವಿದೆಂದು ಪೇಳ್ವರು ಹಿರಿಯರಾದವರು
ಪರಮಬಾಂಧವ ನೀನೆನಗೆ ಸ
ತ್ಕರಿಸು ವಿರಹದಿ ನೊಂದವಳ ಕರ
ಕರೆಗೆ ಗುರಿಮಾಡದಿರು ಸಲಹೆಂದಳಾ ಸರೋಜಮುಖಿ ೫೪

ಬಲಿದ ವಿರಹಾಗ್ನಿಯಲಿ ನೊಂದೆನು
ಬಳಲಿದೆನು ತನುಬಾಡಿ ತಾಪದಿ
ನಲವು ಹಿಂಗಿತು ಭ್ರಮೆ ಹೆಚ್ಚಿತು ತ್ರಾಣವೆಳದಾಯ್ತು
ಹಲವು ಮಾತೇನಿನ್ನು ನಳನೃಪ
ತಿಲಕ ತಾ ಪತಿಯಲ್ಲದೆಲೆ ಭೂ
ತಳದ ಪುರುಷರು ಪಿತನ ಸಮ ಕೇಳೆಂದಳಿಂದುಮುಖಿ ೫೫

ಅರಸ ಕೇಳಾ ಹಂಸೆ ತರುಣಿಯ
ಕರುಣದೆಳತೆಯ ಕಂಡು ತಾ ಬಂ
ದಿರುವ ಕಾರ್ಯದ ಹದನು ಲೇಸಾಯ್ತೆಂದು ಮನದೊಳಗೆ
ಹರುಷ ಮಿಗೆ ಕೊಂಡಾಡಿ ಸತಿಯನು
ಕರೆದು ನುಡಿದುದು ನಿನಗೆ ನಳಭೂ
ವರನ ಪತಿಯನು ಮಾಳ್ಪೆನಂಜದಿರೆಂದುದಾ ಹಂಸೆ ೫೬

ಅಂತರಂಗದ ಬುದ್ಧಿಯನು ದಮ
ಯಂತಿಗೆಲ್ಲವನರುಹಿ ತರುಣಿಯ
ಸಂತವಿಟ್ಟಲ್ಲಿಂದ ಕಳುಹಿಸಿಕೊಂಡು ಬೇಗದಲಿ
ಮುಂ ತಳರ್ದು ಮಿಗೆ ತನ್ನ ಬಾಂಧವ
ಸಂತತಿಯನೊಡಗೊಂಡು ನಿಷಧನ
ಚಿಂತೆಯನು ಪರಿಹರಿಸಬೇಕೆಂದೈದಿತಾ ಹಂಸೆ ೫೭

ಬಂದ ಹಂಸೆಯ ಕಂಡು ಮುಖಕಳೆ
ಯಿಂದಲರಿದನು ನೃಪತಿ ಮನದಲಿ
ಯಿಂದುಮುಖಿ ತನಗೊಲಿದ ಹದನಹುದೆಂದು ಹರುಷದಲಿ
ಮಂದಗಮನೆಯ ಕಂಡಿರೇ ಏ
ನೆಂದು ನುಡಿದಳು ಸತಿಯು ಬಗೆಯೇ
ನೆಂದು ಬೆಸಗೊಳೆ ನಸುನಗುತ ನೃಪಗೆಂದುದಾ ಪಕ್ಷಿ ೫೮

ಮಾನವಾಧಿಪ ಕೇಳು ಮನದನು
ಮಾನವನು ಬಿಡು ಗುಡಿಯ ಕಟ್ಟಿಸು
ನೀನೆನಿಸಿದಿಷ್ಟಾರ್ಥ ಫಲ ಸಿದ್ಧಿಸಿತು ಇನ್ನೇನು
ಮಾನನಿಧಿ ನೀ ಮುನ್ನ ಮಾಡಿದು
ಹೇನು ಸುಕೃತವೊ ತರುಣಿ ನಿನ್ನನೆ
ಚಾನಿಸುವಳನವರತ ಮನ ಬೇರಿಲ್ಲವಾ ಸತಿಗೆ ೫೯

ಎಲೆ ನೃಪತಿ ದಮಯಂತಿಯನು ನಿನ
ಗೊಲಿಸಿ ಬಂದೆನು ಭಾಷೆ ಸಂದುದು
ಲಲನೆಯನು ನೀ ಮದುವೆಯಾಗಿನ್ನೆನ್ನ ಕಳುಹೆನಲು
ಬಳಲಿದಿರಿ ನಮಗೋಸುಗವೆ ಬಲು
ಹಳುವದಲಿ ತೊಳಲಿದಿರಿ ಕಷ್ಟವ
ಬಳಸಿದಿರಿ ಸಾಕಿನ್ನು ಗಮನಿಸಿರೆಂದು ಬೀಳ್ಕೊಟ್ಟ ೬೦

ಕೇಳು ಪಾಂಡವತನಯ ರಾಜನು
ರಾಳ ತೆರಳಿದುದತ್ತ ನಳಭೂ
ಪಾಲನಿತ್ತಲು ಬಂದು ಹೊಕ್ಕನು ತನ್ನ ನಗರಿಯನು
ಆಳು ಮಂದಿಯ ಕಳುಹಿ ಮನದ ವಿ
ಶಾಲ ವಿರಹದ ತಾಪದಲಿ ಮಿಗೆ
ಕೇಳಿ ಮೇಳ ವಿನೋದ ವಿಭವವನುಳಿದನಾ ನೃಪತಿ ೬೧

ಅತ್ತಲಾ ದಮಯಂತಿ ನಳನಲಿ
ಚಿತ್ತವಿಟ್ಟಳು ನೃಪಗೆ ವಿರಹವು
ಹೊತ್ತಿತಾಕೆಯ ಮೇಲೆ ಇರ್ವರಿಗಾಯ್ತು ಸಂತಾಪ
ಚಿತ್ತಜನು ಪಾತಕನು ವಿರಹವ
ಹೊತ್ತಿಸಿದನಿಬ್ಬರಿಗೆ ಮದನನ
ಹೆತ್ತವನು ವರಪುರದ ಚೆನ್ನಿಗರಾಯ ಕರುಣಿಸಿದ ೬೨

ಕೇಳು ಧರ್ಮಜ ನಳನ ರೂಪನು
ಕೇಳಲೀ ಹದನಾಯ್ತು ಸತಿಗೆ ಸೃ
ಪಾಲನಂಗವು ಗೋಚರಿಸಲೆಂತಹುದೊ ವಿರಹಾಗ್ನಿ
ನಾಲಗೆಗೆ ದ್ರವವಿಲ್ಲ ಮಂಚದ
ಮೇಲೆ ಮಲಗಳು ಬಲಿದವಸ್ಥೆಯ
ಹೇಳಲಿನ್ನೇನರಸ ದಮಯಂತಿಯ ಮನೋವ್ಯಥೆಯ ೬೩

ಲಲನೆ ನಿದ್ರಾಂಗನೆಯನುಳಿದಳು
ಹೊಲಬು ತಪ್ಪಿದ ಮನದಿ ಸತಿಯುರು
ಸುಳಿಯೆ ನಳನೃಪ ಬಂದನಿದೆಯಿದೆಯೆಂದು ಕಳವಳಿಸಿ
ನಿಲುಕಿ ನೋಡುವಳೊಮ್ಮೆ ಕಾಣದೆ
ಹಲುಬುವಳು ಮತ್ತೊಮ್ಮೆ ಕಂಡದ
ಕೆಳದಿಯರು ತಮ್ಮೊಳಗೆ ತಾವಾಲೋಚಿಸಿದರಲ್ಲಿ ೬೪

ವಿರಹ ಬಲಿದುದು ಸತಿಗೆ ನಾವಿದ
ನರಸಗರುಹುವೆವೆಂದು ಕೆಳದಿಯ
ರಿರದೆ ಬಂದರು ಭೀಮನೃಪಾಲನೋಲಗಕೆ ತವಕದಲಿ
ಅರಸಿಯರ ಮೇಳದಲಿ ಧರಣೀ
ಶ್ವರನು ಮೆರೆದಿರೆ ಬಂದು ವಿನಯದಿ
ತರುಣಿ ವಿರಹಕೆ ತನುವ ತೆತ್ತಿಹಳೆಂದರಬಲೆಯುರು ೬೫

ಕೇಳಿದನು ನಸುನಗುತ ಭೀಮನೃ
ಪಾಲ ತನ್ನಾತ್ಮಜಗೆ ಯೌವನ
ದೇಳಿಗೆಯಲಾ ವರನದಾರೆಂದೆನುತ ಚಿಂತೆಯಲಿ
ಓಲಗಕೆ ನಡೆತಂದು ಬರೆಸಿದ
ನೋಲೆಗಳ ಕಳುಹಿದನು ಧರಣೀ
ಪಾಲಕರ ಬರಹೇಳೆನುತ ಹೊಯಿಸಿದನು ಡಂಗುರವ ೬೬

ಹರಿದರರಸಾಳುಗಳು ದಿಕ್ಕಾಗ
ಳರಸುಗಳ ನಗರಿಗಳಿಗಿತ್ತತ್ತಲು
ಪುರವ ಸಿಂಗರಿಸಿದರು ಭೀಮನೃಪಾಲನಾಜ್ಞೆಯಲಿ
ತರಿಸಿದರು ಭಂಡಾರದಲಿ ಪರಿ
ಪರಿಯ ನೂತನ ವಸ್ತುಗಳ ವಿ
ಸ್ತರಿಸಿ ಕಟ್ಟಿದರಗಲದಲಿ ವೈವಾಹ ಮಂಟಪವ ೬೭

ಹೊಳೆವ ದಂತದ ಕಂಬಗಳ ಪು
ತ್ಥಳಿಯ ಸಾಲಿನ ಮೇಲುಕಟ್ಟಿನ
ತಳಿರ ತೋರಣದೋರಣದ ಲೋವೆಗಳ ಅರಳೆಲೆಯ
ಬಿಳಿಯ ಮುತ್ತಿನ ಸರದ ಪವಳದ
ಬಿಳಿಯ ಚವುರಿಯ ಮೇಲುಕಟ್ಟಿನ
ಹೊಳವು ಮಿಗೆ ರಚಿಸಿದರು ಸತಿಯ ವಿವಾಹ ಮಂಟಪವ ೬೮

ಮಾಳವಾಂಧ್ರ ಕಳಿಂಗ ಕೋಸಲ
ಚೋಳ ಮತ್ಸ್ಯ ವರಾಳ ಕೊಂಕಣ
ಗೌಳ ಕುಂತಳ ಮಗಧ ಬರ್ಬರ ಪಾಂಡ್ಯ ಕರ್ನಾಟ
ಲಾಳ ವಂಗ ಸುರಾಷ್ಟ್ರ ಕುರು ನೇ
ಪಾಳ ಘೂರ್ಜರ ಸಿಂಧು ಮರು ಪಾಂ
ಚಾಳ ಮೊದಲಾದಖಿಳ ಧರಣೀಪಾಲರೈದಿದರು ೬೯

ಆ ಸಮಯದಲಿ ನಾರದನು ಹರಿ
ವಾಸುದೇವಾ ಎಂದು ವೀಣೆಯು
ನಾಸುರದ ರಹಿಯಿಂದ ನುಡಿಸುತ ಮುನಿಗಳೊಗ್ಗಿನಲಿ
ವಾಸವನ ಸಭೆಗೈತರಲು ಸಂ
ತೋಷದಿಂದಿದಿರೆದ್ದು ಘನ ಸಿಂ
ಹಾಸನದಿ ಕುಳ್ಳಿರಿಸಿ ಕೈಮುಗಿದೆಂದನಮರೇಂದ್ರ ೭೦

ಎತ್ತಣಿಂದೈತಂದಿರುರ್ವಿಯೊ
ಳುತ್ತಮರು ಧರಣೀಶರಲಿ ನೆರೆ
ಸತ್ಯ ಧರ್ಮ ಸುಶೀಲರಾರುಂಟಲ್ಲಿ ಗುಣವೇನು
ಚಿತ್ತವಿಸಿ ಮುನಿನಾಥ ಎನಗದ
ಬಿತ್ತರಿಸಿ ಹೇಳೆನಲು ಸುರಮುನಿ
ಚಿತ್ತದಲಿ ನಸುನಗುತ ನುಡಿದನು ಪಾಕಶಾಸನಗೆ ೭೧

ಅಮರಪತಿ ಕೇಳಸನಿಯಲಿ ಭೂ
ರಮಣರುಂಟು ಅನೇಕರವರೊಳು
ನಿಮಗೆ ಪೇಳ್ವೆ ವಿದರ್ಭಪುರಪತಿ ಭೀಮನೃಪ ತನುಜೆ
ಕಮಲಮುಖಿ ದಮಯಂತಿಗೆವ್ವನ
ಸಮತಳಿಸಲುಚಿತದಿ ಸ್ವಯಂವರ
ಕಮಿತಬಲ ನೃಪರೈದುತಿರ್ಪರು ಧರಣಿಯಗಲದಲಿ ೭೨

ಅಲ್ಲಿ ನೆರೆದ ಸಮಸ್ತ ಧರಣೀ
ವಲ್ಲಭರನೇನೆಂಬೆ ಪಟ್ಟಣ
ವೆಲ್ಲ ನೆರೆದುದು ದೇಶದೇಶಾಂತರದ ಯಾಚಕರು
ನಿಲ್ಲದೈತರುತಿದೆ ವಿವಾಹವ
ನಲ್ಲಿ ನೋಡುವೆವೆನುತ ಮುನಿಕರ
ಪಲ್ಲವದ ವೀಣೆಯಲಿ ಹಂಸಯನೇರಿ ಹೊರವಂಟ ೭೩

ಅರಸ ಕೇಳಮರೇಂದ್ರನಾ ಮುನಿ
ವರನ ವಚನವ ಕೇಳಿ ಹೆಚ್ಚಿದ
ವಿರಹದಲಿ ಕರೆಸಿದನು ಸತಿಯರನೆಂಟಸೀ ಹದನ
ಪರಮಸತಿ ದಮಯಂತಿಯನು ಉಪ
ಚರಿಸಿ ತನಗೊಲಿವಂತೆ ಮಾಡೆಂ
ದುರುತರದ ವಸ್ತುಗಳನಿತ್ತು ಬಲೆಯರ ಕಳುಹಿದನು ೭೪

ತರಿಸಿಯೇರಿದ ದಿವ್ಯ ರಥವನು
ಕರೆಸಿದನು ಯಮ ವರುಣ ವಾಯು
ವ್ಯರು ಸಹಿತ ಹೊರವಂಟನಮರಾವತಿಯನಮರೇಂದ್ರ
ಧರೆಗಿಳಿದು ಬರ ಮುಂದೆ ಮಾರ್ಗದಿ
ಸ್ಮರನ ರೂಪಿನ ನೈಷಧನ ಕಂ
ಡರು ಮನೋರಾಗದಲಿ ಕಾಣಿಸಿಕೊಂಡರುಚಿತದಲಿ ೭೫

ನಳಿನಮಿತ್ರನ ತೇಜವೊಲಿಳೆ
ಗಿಳಿವ ಮಹಿಮರ ಕಂಡು ರಥದಿಂ
ದಿಳೆಗಿಳಿದು ಭಕ್ತಿಯಲಿ ನಳ ಕೈಮುಗಿದು ನಿಂದಿರಲು
ತಳಿತ ಹರುಷಾನಂದದಲಿ ಬರ
ಸೆಳೆದು ಬಿಗಿದಪ್ಪಿದರು ರಾಯನ
ಚೆಲುವನೀಕ್ಷಿಸಿ ನಲಿದು ಕೊಂಡಾಡಿದರು ಮನವೊಲಿದು ೭೬

ಕುಶಲವೇ ನಳನೃಪತಿ ಬಾರೈ
ಶಶಿಕುಲೋದ್ಭವ ನಿನ್ನ ಪಿತನೀ
ವಸುಧೆಗಧಿಪತಿ ವೀರಸೇನನು ಪರಮಸಖನೆಮಗೆ
ಒಸೆದು ಬೇಡುವ ಕಾರ್ಯವಿದು ಭರ
ವಸದಿ ಬಂದೆವು ನಮಗೆ ಫಲ ಸಿ
ದ್ಧಿಸಿತು ಉಪಕಾರಾರ್ಥ ನಿನ್ನಿಂದಾಗಬೇಕೆಂದ ೭೭

ಕರಿಗಮನ ಚಿತ್ತವಿಸು ನಾವೇ
ನರರು ನಿಮಗಂತರವೆ ಸಾಕಂ
ತಿರಲಿ ನಿಮ್ಮ ಪದಾಬ್ಜ ದರುಶವಾದುದಿಂದಿನಲಿ
ಹರುಷ ಮಿಗೆ ನಮಗೇನು ಬುದ್ಧಿಯ
ಕರುಣಿಸುವಿರದ ಮಾಳ್ಪೆವೆನೆ ಶಚಿ
ಯರಸನಾ ನುಡಿಗೇಳಿ ನಗುತಿಂತೆಂದನಾ ನೃಪಗೆ ೭೮

ಭೂತಳದೊಳಿಹ ಸತಿಯರಲಿ ರೂ
ಪಾತಿಶಯೆ ದಮಯಂತಿಯೆನಲಾ
ಮಾತಿನಲಿ ಮನವೊಲಿದುದವಳಲಿ ಎಮಗೆ ನೀ ಹೋಗಿ
ಆ ತಳೋದರಿಗುಚಿತ ವಚನವ
ಪ್ರೀತಿ ಪೂರ್ವಕದಿಂದ ಸತಿಯಳ
ನೀ ತಿಳುಹಿಯನುಕೂಲವನು ಮಾಡೆಂದನಮರೇಂದ್ರ ೭೯

ಈತ ಪಿತೃಪತಿಯಮರಪತಿ ತಾ
ನೀತ ವರುಣನು ವಾಯುವೀತನು
ಮಾತ ಮನ್ನಿಸು ಮಾಡು ತನಗುಪಕಾರವನು ನೀನು
ಈ ತತುಕ್ಷಣದೃಶ್ಯ ವರವನು
ಪ್ರೀತಿಯಿಂದೊಲಿದಿತ್ತೆ ವಿಂದಿನೊ
ಆ ತಳೋದರಿಯೊರಿವ ಹದನನು ಮಾಡು ಹೋಗೆಂದ ೮೦

ಕೇಳಿದಾ ಮಾತಿನಲಿ ಚಿಂತೆಯ
ತಾಳಿದನು ಚಿತ್ತದಲಿ ನಳನೃಪ
ಲೋಲಲೋಚನೆ ತನ್ನನೇ ಪತಿಯೆಂದು ಬಯಸಿಹಳು
ಆ ಲತಾಂಗಿಯ ಮೇಲೆ ವಿರಹ ವಿ
ಶಾಲ ಮನವಿಹುದಿನ್ನು ಶಿವಶಿವ
ಬಾಲಿಕೆಯ ಬೆಸಗೊಳಲು ನಾಲಗೆಯೆಂತು ತನಗೆಂದ ೮೧

ಎಂದು ಮನದೊಳು ಮರುಗಿ ವಿನಯದೊ
ಳೆಂದನೆಲೆ ಅಮರೇಂದ್ರ ನಿಮಗಾ
ಮಂದಗಮನೆಯನೊಳಗು ಮಾಡೆಂದೆನಗೆ ಪೇಳ್ದಿರಲಾ
ಹಿಂದುಗಳೆದರೆ ಮನಕೆ ಖತಿ ನಿಮ
ಗಿಂದು ಬಾರದೆ ಬಿಡದು ಲೋಕದಿ
ಇಂದುಮುಖಿಯರ ಗುಣವ ತಿಳಿಯಲಸಾಧ್ಯ ಕೇಳೆಂದ ೮೨

ಸಾವಿಗೆಣಿಸರು ಮನದಿ ಸತ್ಯವ
ಭಾವಿಸರು ಹುಸಿಯೊಲುಮೆದೋರುವ
ರಾವ ಪರಿಯಲಿ ಹೃದಯಗೊಡದನೃತಗಳನಾಡುವರು
ಪಾಪಿ ವರ್ತನವಿಲ್ಲ ಸತ್ಯಕೆ
ಪಾವಕನ ಮುಟ್ಟುವರು ಸತಿಯರ
ನಾವ ಪರಿಯಲಿ ನಂಬಬಹುದೈ ಎನುತ ಹೊರವಂಟ ೮೩

ನಲವು ಹಿಂಗಿದ ಮನದಿ ನೃಪ ಮಾ
ರ್ಬಲವನಲ್ಲಿಯೆ ನಿಲಿಸಿ ಬರುತಿರೆ
ತಳಿತ ರತ್ನಪ್ರಭೆಯ ಸಾಲಿನ ಸೌಧಪಂಕ್ತಿಗಳ
ಹೊಳೆವ ಕಲಶದ ಗೋಪುರದ ಕೊ
ತ್ತಳದ ಸಾಲಿನ ಕೋಂಟೆಯನು ಕಂ
ಡಲಘುಭುಜಬಲ ನೃಪತಿ ಹೊಕ್ಕ ವಿದರ್ಭಪಟ್ಟಣವ ೮೪

ಅರಮನೆಯ ಬಾಗಿಲಿಗೆ ಬರಲಿ
ತ್ತರದ ವೇದಿಕೆಗಳಲಿ ಪಟುಭಟ
ರುರುತರದ ಕೈದುಗಳ ಕಾಹಿನ ದಾರವಟ್ಟದಲಿ
ಇರಲು ಕಂಡನು ತರುಣಿಯರು ಸಂ
ಚರಿಸುತಿಹ ಸಡಗರವ ನಳಭೂ
ವರನದೃಶ್ಯದರೂಪಿನಿಂದೊಳಹೊಕ್ಕನರಮನೆಯ ೮೫

ಆಗಲಾ ದಮಯಂತಿ ಚಿತ್ರದ
ಬಾಗಿಲುಪ್ಪರಿಗೆಯಲಿ ರತ್ನದ
ತೂಗುಮಂಚದ ಹಾಸಿನಲಿ ಕುಳ್ಳಿರಲು ಕೆಳದಿಯರು
ಆ ಗರುವೆಯೋಲಗದೊಳಿರೆ ಸತಿ
ಪೂಗಣೆಯನೆಸುಗೆಯಲಿ ನಳಚರಿ
ತಾಗಮದ ಕಥೆಗೇಳುತಾಲೈಸುವಳು ಚಿತ್ತದಲಿ ೮೬

ಬಂದರಲ್ಲಿಗೆ ಸುರಪ ಕಳುಹಿದ
ಮಂದಗಮನೆಯರಖಿಳ ವಸ್ತುವ
ತಂದು ಕಾಣಿಕೆಗೊಟ್ಟು ಕೈಮುಗಿದೆರಗಿ ನಿಂದಿರಲು
ಬಂದ ಸತಿಯರ ನೋಡಿ ನೀವೆ
ಲ್ಲಿಂದ ಬಂದಿರಿ ನಿಮ್ಮ ಹದನೇ
ನೆಂದು ಬೆಸಗೊಳೆ ನಗುತ ಬಿನ್ನೈಸಿದರು ಮಾನಿನಿಗೆ ೮೭

ತಾಯೆ ಕೇಳಮರೇಂದ್ರ ನಿಮ್ಮ ನಿ
ಜಾಯತದ ಚೆಲುವಿಕೆಯ ಕೇಳಿದು
ಕಾಯಜನ ಶರಹತಿಗೆ ನೊಂದನು ಕಳುಹಿದನು ನಿಮಗೆ
ಆಯತದ ಭೂಷಣಗಳನು ಸುರ
ರಾಯನಿಗೆ ಸತಿಯಾಗು ವ ರ್ತ್ಯದ
ರಾಪರಸ್ಥಿರದವರ ನೆಚ್ಚದಿರೆಂದರಾ ಸತಿಗೆ ೮೮

ಪದವಿ ಯಾವುದು ಲೋಕದಲಿ ಸುರ
ಪದವಿಯಲ್ಲದೆ ಬೇರೆ ವಿ ಕ್ಕಿನ
ಪದವಿಯುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ
ಸದರವೇ ನರಜನ್ಮದವರಿಗೆ
ಯೊದಗಲರಿಯದು ಪುಣ್ಯ ನಿನಗಿದು
ಸುದತಿ ಕರುಣಿಸು ಮಾತನೆಂದರು ನಗುತ ರಂಭೆಯರು ೮೯

ಅಲರ ಪರಿಮಳನೆಡೆಗೆ ತುಂಬಿಗ
ಳೊಲಿದು ಹೋಹಂದದಲಿ ಧರೆಯೊಳು
ಅಲರು ವಿಕಸಿತವಾಗಿ ಹೋಹುದೆ ಅಳಿಗಳಿದ್ದೆಡೆಗೆ
ಸಲೆ ತವಕದಿಂದಮರಪತಿಯೆಡೆ
ಗೊಲಿದು ನೀ ಹೋಹಂತೆ ಸುರಪತಿ
ನಲವಿನಿಂದಲಿ ನಿನ್ನ ಬಳಿಗೈದುವನು ಪುಣ್ಯವಿದು ೯೦

ಎನಲು ಕೇಳಿದಳಾ ನುಡಿಯ ಸುರ
ವನಿತೆಗೆಂದಳು ಚಿತ್ತವೆನಗೊ
ಬ್ಬನಲಿ ಸಿಲುಕಿತು ಮರಳಿಪಡೆ ಕಮಲಾಕ್ಷಗಳವಲ್ಲ
ಅನಿಮಿಷಾಧಿಪ ತನಗೆ ದೇವಾಂ
ಗನೆಯರಿರುತಿರೆ ಮನುಜಸತಿ ಪಾ
ವನವೆ ಬರಿದೆ ದುರಾಸೆ ತನಗೇಕೆಂದಳಿಂದುಮುಖಿ ೯೧

ಮರಳಿದರು ರಂಭೆಯರು ಬಳಿಕಾ
ನರನುತನು ನಳನೃಪತಿ ತಾ ಮನ
ಹರುಷದಲಿ ನಿಜರೂಪ ತಾಳ್ದನು ರಾಜತೇಜದಲಿ
ಅರಸನಿರೆ ದಮಯಂತಿ ಕಂಡ
ಚ್ಚರಿಯ ಮದನನೊ ನಳನೊ ನಳಕೂ
ಬರನೊ ಜಯಂತನೊ ಎನೆ ವಿಸ್ಮಯಗೊಂಡಳಾ ತರುಣಿ ೯೨

ಎಂದು ಪರಿತೋಷದಲಿ ನಾರೀ
ವೃಂದಸಹಿತಿದಿರೆದ್ದು ವಿನಯದಿ
ನಿಂದು ಕರಗಳ ಮುಗಿದು ಸಿಂಹಾಸನದಿ ಕುಳ್ಳಿರಿಸಿ
ತಂದು ಮುಕ್ತಾಫಲಗಳನು ನಲ
ವಿಂದ ಕಾಣಿಕೆಯಿತ್ತು ಸತಿಯರ
ಸಂದಣಿಯ ಕೆಲಕೊತ್ತಿ ನುಡಿದಳು ಮಧುರವಚನದಲಿ ೯೩

ಆರು ನೀವೆಲ್ಲಿಂದ ಬಂದಿರಿ
ಕಾರಣವಿದೇನಮ್ಮ ರಾಜ
ದ್ವಾರವನು ನೀವ್ ಹೊಕ್ಕ ಹದನೇನಿಲ್ಲಿ ಗಂಡುನೊಣ
ಸೇರಲಮ್ಮದು ನೀವಗಾಧದ
ವೀರರತಿ ಸೌಂದರ್ಯರೆನೆ ನಳ
ಭೂರಮಣ ನಸುನಗುತ ನುಡಿದನು ಸತಿಗೆ ವಿನಯದಲಿ ೯೪

ತರುಣಿ ಕೇಳಮರೇಂದ್ರನಟ್ಟಿದ
ಚರನು ತಾ ಮಿಗೆ ನಿನ್ನ ರೂಪನು
ಸುರಮುನಿಪನರುಹಿದರೆ ಕೇಳುತಲಿಂದ್ರ ವಿರಹದಲಿ
ಕರಗಿ ಮದನನ ಶರಹತಿಗೆ ಮನ
ಮರುಗಿ ಬಂದಿಹನಿಲ್ಲಿ ಆತಂ
ಗರಸಿಯಾಗೆನೆ ಕೇಳಿ ಮೊಗದಿರುಹಿದಳು ದಮಯಂತಿ ೯೫

ಬಲ್ಲವರು ನೀವಧಿಕರೆಮ್ಮೊಳು
ಸಲ್ಲದೀ ನುಡಿಯೇತಕಿದು ಶಚಿ
ವಲ್ಲಭನ ಮಾತೇನು ಸಾಕಂತಿರಲಿಯೆನಗಿನ್ನು
ವಲ್ಲಭನು ನಳನೃಪತಿಯಲ್ಲದೆ
ನಲ್ಲನುಂಟೇ ನೀವು ಸುರಚರ
ರಲ್ಲ ನಿಮ್ಮಭಿಮಾನವೇನೆಂದಳು-ಸರೋಜಮುಖಿ ೯೬

ದೂತರಲಿ ಕುಲಗೋತ್ರಗಳ ನೀ
ನೇತಕರಸುವೆ ತರುಣಿಯಿಂದ್ರನು
ಖ್ಯಾತಪುರುಷನು ಬಯಸಿದದು ಕೃತಪುಣ್ಯ ನಿನಗಿನ್ನು
ಭೂತಳದ ನರರಧಿಕರೇ ಸಂ
ಪ್ರೀತಿಯೇಕವರಲ್ಲಿ ಬಿಡು ಪುರು
ಹೂತನನು ಕೈವಿಡಿದು ನೀ ಸುಖಿಯಾಗು ನಡೆಯೆಂದ ೯೭

ಇಳೆಯ ಮರ್ತ್ಯರು ನಾಕನಿಳಯರಿ
ಗಳವೆಯಂತರವಲ್ಲ ನುಡಿಯಲು
ಗುಲಗಿರಿಗೆ ನೊರಜಂತರವೆ ನೀ ನೋಡು ಚಿತ್ತದಲಿ
ನಳನೃಪನ ಬಯಸುವಡೆ ತಾ ನಿನ
ಗೊಲಿವನೇ ಧಾತ್ರೀಶರೊಳಗ
ಗ್ಗಳನೆ ಸಾಕೆಂದೆನಲು ಕನಲಿದು ನುಡಿದಳಾ ತರುಣಿ ೯೮

ಮಾನವಾಧೀಶ್ವರರೊಳಗೆ ಸ
ನ್ಮಾನವುಳ್ಳವ ಸತ್ಯಸಂಧ ನಿ
ಧಾನಿ ಹಿಮಕರವಂಶಪಾವನ ಸಾರ್ವಭೌಮನಲಾ
ಆ ನರೇಂದ್ರಗೆ ಸರಿಯೆ ಮನು ಮುನಿ
ದಾನವಾಮರರಿನ್ನು ನಿಮಗೀ
ಹೀನವೃತ್ತಿಯ ಮಾತದೇಕೆಂದಳು ಸರೋಜಮುಖಿ ೯೯

ನಿಷಧಪತಿಯೇ ಪತಿಯೆನುತ ಭಾ
ವಿಸಿದೆನಾತನ ಕರುಣವೆನ್ನಲಿ
ಪಸರಿಸಿದಡದು ಲೇಸು ಲೇಸಲ್ಲದಡೆ ನಳನೃಪಗೆ
ಅಸುವ ತೆರುವೆನು ಎನಗೆ ಫಲ ಸಿ
ದ್ಧಿ ಸಲಿದೇ ಸಂಕಲ್ಪವೆಂದಾ
ಶಶಿವದನೆ ಕಂಬನಿಯ ಮಿಡಿದಳು ನಖದ ಕೊನೆಗಳಲಿ ೧೦೦

ಕರಗಿತಂತಃಕರಣ ನೃಪತಿಗೆ
ಸರಸಿಜಾಕ್ಷಿಯ ದೃಢವ ಕಂಡನು
ಕರುಣಲತೆ ಕುಡಿದೋರಿತಾಕ್ಷಣ ನುಡಿದನಾ ಸತಿಗೆ
ಸರಸಿಜಾನನೆ ಕೇಳು ತಾನೇ
ಧರಣಿಪತಿ ನಳನೆನಲು ಲಜ್ಜಿಸಿ
ಶಿರವ ನಸುಬಾಗಿಸುತಲವಳಿಂತೆಂದಳಾ ನೃಪಗೆ ೧೦೧

ನಾಕನಿಳಯರು ಕುಟಿಲವಿದ್ಯರ
ನೇಕ ಮಾಯಾವಿದರು ಇಳೆಯೊಳು
ಪ್ರಾಕೃತರು ನಾವ್ ನಿಮ್ಮ ನಂಬುವ ಪರಿಯದೆಂತೆನಗೆ
ಸಾಕು ಮನ ನಂಬುವರೆ ಹೃದಯದ
ಜೋಕೆಯಲಿ ಕುರುಹೆನಗೆ ತೋರೆನ
ಲಾ ಕಮಲಲೋಚನೆಗೆ ನುಡಿಸಿದನು ನೃಪ ನಿದರ್ಶನವ ೧೦೨

ವನಜಮುಖಿ ನಿನ್ನಂತರಂಗದ
ಮನವ ಕಾಣುವ ಬಗೆಯೊಳಾನಿಂ
ದಿನಲಿ ಅನಿಮಿಷನೆಂದು ಪೇಳಿದೆನಿದಕೆ ತಪ್ಪೇನು
ಮನದ ಸಂಶಯವೇಕೆ ಹಂಸೆಯ
ನಿನಗೆ ಕಳುಹಿದೆ ರಾಯಭಾರದಿ
ವನಿತೆ ನೀನಿದ ತಿಳಿದು ನಂಬುವುದುಳಿದು ಸಂಶಯವ ೧೦೩

ನಳನೆನಲು ತನು ಪುಳಕಜಲಪಲಿ
ಮುಳುಗಿ ಹೊಂಪುಳಿಯೋಗಿ ತನ್ಮಯ
ಕೆಳದಿಯರ ಮರೆಗೊಂಡು ನೃಪಸುತೆ ಹೃದಯಭೀತಿಯಲಿ
ತೊಲಗಿದಳು ನೃಪಸಿತ್ತ ಪುರವನು
ಕಳೆದು ಬಂದನು ಮನದ ವಿರಹದಿ
ಬಳಲುತಿಹ ದೇವೇಂದ್ರಸಿದ್ಧೆಡೆಗಾಗಿ ವಹಿಲದಲಿ ೧೦೪

ಬಂದು ಭಯಭಕ್ತಿಯಲಿ ನಳನೃಪ
ನಿಂದ್ರ ಮಾರುತ ಯಮ ವರುಣರಿಗೆ
ವಂದಿಸುತೆ ದಮಯಂತಿ ಹೇಳಿದ ಮಾತ ವಿವರಿಸಲು
ಒಂದು ನಿನ್ನಲಿ ಕಪಟವಿಲ್ಲರ
ವಿಂದಪದನೆಯರಿಂದ ಕೇಳಿದೆ
ವೆಂದು ಸಂತೈಸಿದರು ಭಯಗೊಂಡಿಹ ನೃಪಾಲಕನ ೧೦೫

ನಳಿನಮುಖಿಯರ ಕಪಟಚಿತ್ತವ
ತಿಳಿಯಲಾರಿಗೆ ಸಾಧ್ಯ ಕೇಳೈ
ನಳನೃಪತಿ ನಮಗಾಗಿ ಬಳಲಿದೆಯೆ ನುತಲುಪಚರಿಸಿ
ಒಲಿದು ಭೂಷಣವಿತ್ತು ಕಳುಹಿದ
ರಿಳೆಯ ವಲ್ಲಭನನು ತಾವ್ ತ
ಮ್ಮೊಳಗೆ ಆಲೋಚಿಸಿದರಾ ಯಮಯಿಂದ್ರಮಾರುತರು ೧೦೬

ಲಲನೆಯೊಲಿವುದಕಿನ್ನು ಹಪನಿದು
ಹಲವು ಮಾತೇನೆಂದು ನಾಲ್ವರು
ನಳನ ರೂಪನು ತಾಳ್ದರಿತ್ತಲು ಧರಣಿ ವಲ್ಲಭರು
ನಲಿದು ಬರುತಿರೆ ಸ್ವರ್ಗ ಮರ್ತ್ಯ
ವಳಿಯ ಜನ ಸುರ ಸಿದ್ಧ ಕಿನ್ನರ
ರೊಲಿದು ಗುಹ್ಯಕ ಗರುಡ ಗಂಧರ್ವಾದಿ ಸುರರಲ್ಲಿ ೧೦೭

ನೆರೆದುದಗಣಿತದರಸುಗಳು ಕರಿ
ತುರಗ ರಥ ಪಾಯ್ದಳದ ಸಂದಣಿ
ಮೊರೆವ ಶಂಖ ಮೃದಂಗ ತಂಬಟೆ ಭೇರಿ ನಿಸ್ಸಾಳ
ಉರುಬಿತಲ್ಲಿ ವಿದರ್ಭಪುರಪತಿ
ಧರಿಸಲಾಪನೆ ಹಾ ಮಹಾ ದೇ
ವರಸ ಬಣ್ಣಿಸಲರಿಯೆ ನೆರೆದ ಮಹಾಮಹೀಶ್ವರರ ೧೦೮

ಆವರವರ ಕರೆಕರೆದು ವಿನಯದೊ
ಳವರವರ ಮರಿಯಾದೆ ಮೇರೆಯೊ
ಳವರವರ ಸತ್ಕರಿಸಿ ಕುಳ್ಳಿರಿಸಿದನು ಭೀಮನೃಪ
ಆವರವರಿಗುಚಿತೋಪಚಾರದೊ
ಳವರವರ ಮನ್ನಿಸುತಲಿರ್ದನು
ಭುವನಪತಿಗಳನೇಕರನು ಸಭೆಯೊಳಗೆ ಕೇಳೆಂದ ೧೦೯

ಇತ್ತಲಾ ದಮಯಂತಿಗೆಣ್ಣೆಯ
ನೊತ್ತಿದರು ಶೋಭಾನಗಳ ಪಾ
ಡುತ್ತ ಗೆಲಿದರು ತಿರುಗ ಮಿಗೆ ವಿವಿಧೋಪಚಾರದಲಿ
ಉತ್ತಮಾಂಗನೆಗಳವಡಿಸಿ ನಲಿ
ಯುತ್ತ ಸತಿಯರು ಮಜ್ಜನದ ಮನೆ
ಗತ್ಯಧಿಕ ಹರುಷದಲಿ ದಮಯಂತಿಯನು ಕರೆದೊಯ್ದು ೧೧೦

ಜೆರಸಿದರು ಪನ್ನೀರ ಹೊಂಗೊ
ಪ್ಪರಿಗೆಯಲಿ ಮೊಗೆ ಮೊಗೆದು ನಾರಿಯ
ರೆರೆದರಂಗನೆಗಮಳ ಚಂದನ ಗಂಧ ಪರಿಮಳವ
ತರುಣಿಯರು ಲೇಪಿಸಿದರರಸಿಗೆ
ವರ ದುಕುಲಾಭರಣಗಳ ಶೃಂ
ಗರಿಸಿದರು ದಮಯಂತಿಯೊಪ್ಪಿದಳಧಿಕ ತೇಜದಲಿ ೧೧೧

ಮಡದಿಯರು ಬಳಸಿದರು ಸುತ್ತಲು
ಹಡಪ ಚಾಮರ ಗಿಂಡಿಯೊಳಿಗ
ಮೊಡನಿರಲು ಬಂದಳು ಸಿತಾಬ್ಜಕೆ ಲಕ್ಷ್ಮಿಯಂದದಲಿ
ಎಡಬಲದೊಳಿಹ ಕಂಚುಕಿಗಳು
ಗ್ಗಡದಿ ಪಾಯವಧಾರೆನಲು ಮುಂ
ಗುಡಿಯ ಸಖಿಯರ ಗಡಣದಲಿ ನಡೆತಂದಳಿಂದುಮುಖಿ ೧೧೨

ಕುಡಿತೆಗಂಗಳ ಸಿರಿಮುಡಿಯ ಬಡ
ನಡುವ ಸೆಳೆವತಿ ಬಡಗಿನಲಿ ಹೊಂ
ಗೊಡಮೊಲೆಯ ವೈಯಾರದುಡುಗೆಯ ನಿರಿಯ ಸಡಗರದ
ತೊಡರ ಝಣಝಣ ರವದ ಮೆಲ್ಲಡಿ
ಯಿಡಮ ಗಮನದ ಭರದಿ ಕಿರು ಬೆಮ
ರಿಡುತ ಬಂದಳು ಸಖಿಯರೊಡನೆ ವಿವಾಹ ಮಂಟಪಕೆ ೧೧೩

ಅವನಿಪತಿ ನಿಜಕುವರಿಗೆಂದನು
ವಿವಿಧ ರತುನದ ಮಕುಟವರ್ಧನ
ಭುವನಪತಿಗಳನೇಕರಿದೆಲಾ ಸಿಂಹಪೀಠದಲಿ
ಯುವತಿ ನೋಡಿತ್ತರೆದೊಳಿಹ ನೃಪ
ನಿವಹದಲಿ ನೀ ಹಾಯ್ಕು ಮನವೊಲಿ
ದವರ ಕೊರಳಲಿ ಎನುತ ಕೊಟ್ಟನು ಪುಷ್ಪಮಾಲಿಕೆಯ ೧೧೪

ಬಂದಳಾ ದಮಯಂತಿ ನೃಪಸಭೆ
ಗಂದು ಹೊಕ್ಕಳು ಕೆಳದಿಯರು ಮುದ
ದಿಂದ ತೋರಿದರಲ್ಲಿ ಇವರಿವರೆಂದು ವಿವರಿಸುತ
ಮುಂದೆ ಬರೆ ಕೈಕಂಬಿಯರು ಬಲು
ಸಂದಣಿಯ ಕೆಲಕೊತ್ತಿಸಲು ಅರ
ವಿಂದಮುಖಿ ನೋಡಿದಳು ಲಜ್ಜಾಭರದೊಳವನಿಪರ ೧೧೫

ಮಾಳವಾಧಿಪನೀತ ಮಗಧ ನೃ
ಪಾಲನೀತನು ಮತ್ಸ್ಯ ಕುರು ನೇ
ಪಾಳನೀತನು ಕೋಸಲಾನ್ವಯನೀತ ಬರ್ಬರನು
ಚೋಳನೀತನು ಸಿಂಧುರಾಜ ಸು
ಶೀಲನೀತ ಕಳಿಂಗ ಕುಂತಳ
ಪಾಲಕನ ನೋಡಿತ್ತಲಾಸುರೇಶ್ವರನ ಒಲಗದಿ ೧೧೬

ಬಾಯ ಬಿಂಕದ ಸವಿನುಡಿಯನಾ
ರಾಯರಾಡಿದರಲ್ಲಿ ಕಮಲದಳಾ
ಯತಾಂಬಕಿ ನಳನ ರೂಪಿನ ನಾಲ್ವರಿರೆ ಕಂಡು
ಮಾಯವಿದು ತಾನರಿಯೆನಿವರ ನಿ
ಜಾಯತವನೆಂದೆನುತ ಮುರಿದಾ
ವಾಯುವೇಗದಿ ಬಂದು ಹೊಕ್ಕಳು ತನ್ನ ಮಂದಿರವ ೧೧೭

ಕಂಡುಪೇಕ್ಷಿಸಿ ಬಂದಳಂಗನೆ
ಮಂಡಲಾಧಿಪರೆಲ್ಲರನು ಅದ
ಕಂಡು ಭೀಮನೃಪಾಲ ತನುಜೆಯ ಬಳಿಗೆ ನಡೆತಂದು
ಅಂಡಲೆದು ಬೆಸಗೊಂಡಡಂದಾ
ಖಂಡಲನ ಮಾಯಗಳ ವಿವರಿಸೆ
ಅಂದು ಭಯಭಕ್ತಿಯಲಿ ನೃಪ ಚಿಂತಿಸಿದ ಭಾರತಿಯ ೧೧೮

ವಾಣಿ ನೀರಜಪಾಣಿ ಬ್ರಹ್ಮನ
ರಾಣಿ ಪನ್ನಗವೇಣಿ ಸುಕೃತ
ಶ್ರೇಣಿ ಸುರನಿಕುರುಂಬ ವಂದಿತೆ ಸತ್ಯಸಂಚಾರಿ
ಜಾಣೆ ಸ್ತ್ರೀಕುಲರನ್ನೆ ವರ ಗೀ
ರ್ವಾಣಿ ರಕ್ಷಿಸು ರಕ್ಷಿಸೆಂದಾ
ಕ್ಷೋಣಿಪತಿ ಕೈಮುಗಿದು ಬೇಡಿದನಾ ಸರಸ್ವತಿಯ ೧೧೯

ನೆನೆಯಲಾಕ್ಷಣ ಬಂದಳಲ್ಲಿಗೆ
ವನಜನಾಭನ ಸೊಸೆ ಜಗತ್ಪಾ
ವನೆ ಸುರಾರ್ಚಿತೆ ದೇವಿ ಭಕ್ತಾಶ್ರಿತಜನಾಧಾರೆ
ಜನಪ ನೀನಿಂದಿನಲಿ ನಮ್ಮನು
ನೆನೆದ ಹದನೇನೆನಲು ಪದಯುಗ
ವನಜಕಾನತನಾಗಿ ಬಿನ್ನೈಸಿದನು ಭಾರತಿಗೆ ೧೨೦

ನಿಗಮನುತೆ ಗೀರ್ವಾಣಿ ರಕ್ಷಿಸು
ಮುಗುದರನು ಕರುಣದಲಿ ನೋಡುತ
ಅಗಣಿತದಿ ಅರಸುಗಳು ನೆರದಿರೆ ತಿಳಿಯಲರಿದೆಮಗೆ
ಮಗಳ ಮನ ವಿಗಡಿಸಿತು ನಾಲ್ವರು
ಬೆಗಡುಗೊಳಿಸಿದರೆನಲು ಭಾರತಿ
ನಗುತ ನುಡಿದಳು ಕರೆದು ದಮಯಂತಿಯನು ಕರುಣದಲಿ ೧೨೧

ದೇವಮಾಯೆಯಿದೀಗ ಕೇಳೆಲೆ
ದೇವಿ ಇಂದ್ರನ ಭಜಿಸೆನಲು ಸಂ
ಭಾವನೀಯರ ಸಭೆಗೆ ಬಂದೆರಗಿದಳು ಭಕ್ತಿಯಲಿ
ದೇವಕುಲಸಂಭವರು ರಕ್ಷಿಸಿ
ನೀವು ಮಗಳೆಂದೆನ್ನ ಭಾವಿಸಿ
ಪಾವನರು ತರಳೆಯನು ಪತಿಕರಿಸೆಂದಳಿಂದುಮುಖಿ ೧೨೨

ಗಳಿಲನಾ ಪ್ರಚ್ಛನ್ನವೇಷವ
ಕಳೆದು ಯಮ ಪವಮಾನ ವರುಣರು
ಬಳಿಕ ಸುರಪತಿ ಮೆಚ್ಚಿ ದಮಯಂತಿಯನು ಕೊಂಡಾಡಿ
ನಳನೃಪನ ಕರೆಸಿದರು ಹೂವಿನ
ಮಳೆಯ ಕರೆದಳು ದೇವದುಂದುಭಿ
ಮೊಳಗೆ ಅರಸನ ಕೊರಳಿಗಿಟ್ಟಳು ಪುಷ್ಪಮಾಲಿಕೆಯ ೧೨೩

ಆ ಸಮಯದಲಿ ಭೀಮನೃಪ ಸಂ
ತೋಷದಲಿ ಕರೆಸಿದನು ಮುನಿಗಳ
ನೇಸೆದಳೆದರು ಸತಿಪತಿಯರಿಗೆ ಹರಸಿ ಅಕ್ಷತೆಯ
ಭೂಸುರರ ಮತದಿಂದಲಾ ಧರ
ಣೀಶ ಧಾರೆಯನೆರೆದನಲ್ಲಿ ವಿ
ಲಾಸದಲಿ ಪಾಡಿದರು ಮುತ್ತೈದೆಯರು ಶೋಭನವ ೧೩೪

ಮಂಗಳಾರತಿಯೆತ್ತಿದರು ದೇ
ವಾಂಗನೆಯರವನಿಪಗೆ ಧರೆಯೊಳು
ತುಂಗವಿಕ್ರಮನಾಗೆನುತ ಹರಸಿದರು ಮುನಿವರರು
ವಿಂಗಡದಲಿಂದ್ರನು ಮನೋಹರ
ದಂಗವಸ್ತ್ರಾಭರಣವಿತ್ತು ಸು
ರಾಂಗನೆಯರೊಡಗೂಡಿ ಕಳುಹಿಸಿಕೊಂಡನುಚಿತದಲಿ ೧೩೫

ಅರಸ ಕೇಳೈ ತನ್ನ ಬಾಂಧವ
ಧರಣಿಪರ ಮಂತ್ರಿಗಳ ಮುನಿಮು
ಖ್ಯರ ಸುಗಾಯಕ ಪಂಡಿತರ ಭೂಸುರರ ಯಾಚಕರ
ಹರುಷ ಮಿಗಿಲಾದರಿಸಿ ಕರಿ ರಥ
ತುರಗ ವಸ್ತ್ರಾಭರಣದಿಂದುಪ
ಚರಿಸಿ ಭೀಮನೃಪಾಲನವರವರುಗಳ ಕಳುಹಿದನು ೧೩೬

ಅಳಿಯನನು ಮನ್ನಿಸಿದ ಮಗಳಿಗೆ
ಹೊಳೆವ ಮಣಿಭೂಷಣದ ಪೆಟ್ಟಿಗೆ
ಗಳನು ಗಜ ರಥ ತುರಗ ಹೇಮದ ಮಂಚ ಲಲನೆಯರ
ಬಳುವಳಿಯನಿತ್ತವನಿಪತಿ ನಿಜ
ಬಲಸಹಿತ ಮಾಡಿದನು ಪಯಣವ
ನುಲಿವ ಮಂಗಳವಾದ್ಯ ಸಂದಣಿಯಿಂದ ರಭಸದಲಿ ೧೩೭

ವರಮುಹೂರ್ತದೊಳೇರಿದನು ಮಣಿ
ಕಿರಣದುನ್ನತ ರಥವ ನಳಭೂ
ವರನು ನಿಜಸತಿಸಹಿತ ಹೊಕ್ಕನು ನಿಷಧಪಟ್ಟಣವ
ಮೊರೆವ ಶಂಖ ಮೃದಂಗ ಭೇರಿಗ
ಳಿರದೆ ಮೊಳಗಲು ಸಕಲದಳ ಮೋ
ಹರಿಸಲಾ ನಿಸ್ಸಾಳತತಿ ಪುರಜನದ ಜಯರವದಿ ೧೨೮

ಬಂದು ಹೊಕ್ಕನು ಅರಮನೆಯ ಸುರ
ವೃಂದ ನಲಿಯಲು ಸಕಲಜನ ಸಹಿ
ತಂದು ಸಿಂಹಾಸನವನೇರಿದನು ಸಚಿವರೊಡಗೂಡಿ
ಇಂದುಮುಖಿ ದಮಯಂತಿಯೊಡನಾ
ನಂದದಲಿ ಸಾಮ್ರಾಜ್ಯವಾಳಿದ
ನಂದು ವರನಗರಾಧಿಪತಿ ಚೆನ್ನಿಗನ ಕರುಣದಲಿ ೧೨೯

ಕೇಳಿದೈ ರಾಜೇಂದ್ರ ಧರ್ಮನೃ
ಪಾಲ ನೈಷಧನತುಳ ಸಂಪದ
ದೇಳಿಗೆಯನೇನೆಂಬೆ ಸಪ್ತದ್ವೀಪದವನಿಪರ
ಮೌಳಿಗಳು ನೃಪಸಂಘ್ರಿಕಮಲವ
ನೋಲಗಿಸುತಿಹುದವನ ಕೀರ್ತಿ ಧ
ಡಾಳಿಸಿತು ತ್ರೈಜಗವನವನೀಪಾಲ ಕೇಳೆಂದ ೧೩೦

ಇಂತೆಸೆವ ಸಂಪತ್ತಿನಲಿ ಭೂ
ಕಾಂತ ನಳ ಚಕ್ರೇಶನಲಿ ದಮ
ಯಂತಿ ಪಡೆದಳು ಪುತ್ರಕನ ಮಿಗೆ ಪುತ್ರಿಯೊರ್ವಳನು
ಸಂತಸದಲಿರಲಾ ವಿದರ್ಭ ಪು
ರಾಂತರದಿ ನೆರೆದಖಿಳಜನ ಭೂ
ಕಾಂತರೊಡನೈತಂದು ಹೊಕ್ಕರು ತಮ್ಮ ನಗರಿಗಳ ೧೩೧

ಸುರಪನಾಗ ವಿದರ್ಭಪುರದಿಂ
ತೆರಳುತಮರಾವತಿಗೆ ದಿಕ್ಪಾ
ಲರು ಸಹಿತ ನಲವಿಂದೆ ದಮಯಂತಿಯ ಚರಿತ್ರೆಯನು
ಹರುಷ ಮಿಗೆ ಕೊಂಡಾಡುತೈತರು
ತಿರಲು ಮಾರ್ಗದಿ ಕಂಡರಾ ಕಲಿ
ಪುರುಷನನು ಕುಟಿಲಾತ್ಮಕನ ನಿಸ್ಸಾರ ಹೃದಯನನು ೧೩೨

ಕುರುಳು ಜುಂಜುರು ತಲೆಯ ತಗ್ಗಿದ
ಕೊರಳ ಕೆಂಗರಿಗಣ್ಣ ಮೋರೆಯ
ಹರಕು ಗಡ್ಡದ ಕೆಂಚುಮಿಸೆಯ ಮಲಿನವಸನದಲಿ
ನೆರೆದ ವೀರ ಕರಾಳ ಭಟರಿ
ತ್ತೆರದೊಳುಕ್ಕಿನ ತೇರಿನಲಿ ಕಲಿ
ಪುರುಷ ಕಾಣಿಸಿಕೊಂಡನಮರೇಶ್ವರನ ನಸುನಗುತ ೧೩೩

ಆರು ನೀ ಜಂಭಾರಿಯೋ ಇವ
ರಾರು ಯಮ ವರುಣಾದ್ಯರೋ ಸಂ
ಚಾರವೆತ್ತಲು ನಿಮಗೆ ಎನಲಮರೇಂದ್ರ ನಸುನಗುತ
ತೋರಹತ್ತದೊಳೆಂದ ನಳನಿಗೆ
ನಾರಿ ದಮಯಂತಿಯನು ಮದುವೆಯ
ಧಾರೆಯೆರೆಯಿಸಿ ಬಂದೆವೆನೆ ಖತಿಗೊಂಡ ಕಲಿರಾಯ ೧೩೪

ಅನಿಮಿಷರು ನೀವಧಿಕಬಲರಾ
ವನಿತೆಯನು ಕೈಕೊಳ್ಳಲಾರದೆ
ಜನಪ ನಳನೃಪಗಿತ್ತು ಬಂದಿರಿ ಶಿವ ಮಹಾದೇವ
ಎನಗೆ ನೇಮಿಸಿ ಕಳುಹಿ ನಿಮ್ಮಯ
ಮನದ ಬಯಕೆಯ ಸಲಿಸುವೆನು ಕೇ
ಳೆನಲು ಸುರಪತಿ ನಸುನಗುತ ಕಲಿಪುರುಷಗಿಂತೆಂದ ೧೩೫

ಲೇಸನಾಡಿದೆ ಕಲಿಪುರುಷ ನಿನ
ಗೀಸು ಪೌರುಷವುಂಟೆ ನಮಗಿ
ನ್ನಾ ಸರೋರುಹಗಂಧಿಯಲಿ ಮನವಿಲ್ಲ ನಳನೃಪತಿ
ಈ ಸಮಸ್ತ ನೃಪಾಲರಲಿ ಸ
ದ್ಭೂಷಣನು ಶೌರ್ಯೋನ್ನತನು ಕಮ
ಲಾಸನಂಗಳವಲ್ಲ ನಿನ್ನಲಿ ಹರಿವುದೇನೆಂದ ೧೩೬

ಎನಲು ಖತಿಗೊಂಡೆಂದ ಕೇಳಲಿ
ಅಮಿಷಾಧಿಪ ಎನ್ನನರಿಯೆಯ
ದಿನಿಪನಿದಿರಲಿ ತಮದ ಹಾವಳಿಯೇ ಮಹಾದೇವ
ಎನಗೆ ಸರಿಯಾರಿನ್ನು ತಹೆನಾ
ವನಿತೆಯನು ಕುಹಕದಲಿ ನಳಭೂ
ವರನ ಕೆಡಿಸಿಯೆ ಕಾನನಕೆ ಕಳುಹುವೆನು ನೋಡೆಂದ ೧೩೭

ನಿಮಗೆ ಪೌರುಷವಿಲ್ಲ ನಳನಾ
ಕ್ರಮಿಸಿಕೊಂಡನು ಸತಿಯ ಪುರುಷಾ
ಧಮರು ನೀವಿನ್ನೇಕೆ ಕೊಡಿ ವಟುವೇಷವನು ತನಗೆ
ಕಮಲಮುಖಿಯನು ನಿಮಗೆ ಪಟ್ಟದ
ರಮಣಿಯನು ಮಾಡುವೆನು ಎಂದು
ದ್ಭ್ರಮಿಸಿ ನುಡಿದನು ಗರ್ವದಲಿ ಕಲಿಪುರುಷ ಸುರಪತಿಗೆ ೧೩೮

ಕೇಳಿ ಕಿವಿ ಮುಚ್ಚಿದನು ಶಿವ ಶಿವ
ಫಾಳಲೋಚನ ಎನುತ ಸಭೆಯಲಿ
ಖೂಳನಾಡಿದ ನುಡಿಗೆ ಸುರಪತಿ ಕನಲಿ ಖತಿಗೊಂಡು
ಬೀಳುಮಾತುಗಳೇಕೆ ನಿನಗಿದು
ನೀಲಮೇಘಶ್ಯಾಮನಿಗೆ ಸಮ
ಪಾಳಿಯೆನಿಸುವ ನಳನೃಪಗೆ ಎರಡೆಣಿಸಬೇಡೆಂದ ೧೩೯

ಹಿಡಿಯೆ ಮುನ್ನವೆ ಹಿಡಿದ ಬಳಿಕದ
ಬಿಡೆನು ಮತವೆನ್ನಲ್ಲಿ ನಿಷಧನ
ನಡವಿಗಟ್ಟದೆ ಮಾಣೆ ಮಾತಾಡದಿರಿ ನೀವೆನಲು
ಮಿಡುಕಿದರು ಕಡುಪಾಪಿಯಿವ ತಾ
ಬಿಡನೆನುತ ಮನನೊಂದು ಸುರಪತಿ
ತಡೆಯದೈದಿದನಮರಪುರಿಗತ್ಯಧಿಕ ವಹಿಲದಲಿ ೧೪೦

ಇಳಿದನವನೀತಳಕೆ ಖಳಕುಲ
ತಿಳಕನೆಂದನು ತನ್ನ ಭಟರಿಗೆ
ನಳನೃಪನ ಹೊದ್ದುವಡಸಾಧ್ಯವಿದೆನೆಗೆ ಆತನಲಿ
ಒಲಿದಿಹಳು ಜಯವಧು ಸುಶೀಲತೆ
ನೆಲೆಸಿಹುದು ದುಶ್ಶೀಲ ದುರ್ಗುಣ
ಬಳಸದರಸನನೆನುತ ಹೊಕ್ಕನು ನಿಷಧಪಟ್ಟಣವ ೧೪೧

ಇಲ್ಲವೆನ್ನರು ಬೇಡಿದರೆ ಬೆಡ
ರಲ್ಲಿ ಪಾಡಿನ ಪಂಥಗಳ ನುಡಿ
ಯಲ್ಲಿಯನೃತವನಾಡರಗ್ಗದ ಸತ್ಯನಿರ್ಮಲರು
ಎಲ್ಲರಲಿ ಅತಿಹಿತರು ಕ್ರೋಧಗ
ಳಿಲ್ಲ ಸದ್ಧರ್ಮ ಸ್ವರೂಪಿಗ
ಳಲ್ಲಿ ಮೆರೆದರು ಸುಜನರಾ ನಳನೃಪನ ರಾಜ್ಯದಲಿ ೧೪೨

ಅಲ್ಲಿ ತಿರುಗಿದ ಬೀದಿ ಬೀದಿಗ
ಳಲ್ಲಿ ಪುರಜನವರಿಯದಂತಿರ
ಲಲ್ಲಿ ಮಾಯಾರೂಪಿನಿಂದ ಪಿಶಾಚನಂದದಲಿ
ಸಲ್ಲಲಿತ ಶಿವ ವಿಷ್ಣು ಭಕ್ತರಿ
ಗೆಲ್ಲ ನಯವಿದರಾದ ಸುಜನರ
ನ್ನೆಲ್ಲ ಕಾಣುತ ಬಂದನರಮನೆಗಾಗಿ ಕಲಿರಾಯ ೧೪೩

ಮುರಿದು ನೋಡಿದನಲ್ಲಿ ತೆಂಗಿನ
ಮರಗಳುನ್ನತ ವಿವಿಧ ವೃಕ್ಷದ
ಹೊರೆಗೆಯಲಿ ಕಣ್ಗೆಸೆವ ನಗರೋದ್ಯಾನ ವೀಥಿಯಲಿ
ಉರುತರದೊಳಿಹ ಕರ್ಣಪತ್ರದ
ತರುವಿನಗ್ರದೊಳಿರ್ದ ಬಹುದಿನ
ವರಸ ಕೇಳ್ ಕಲಿಪುರುಷನಿತ್ತಲು ರಾಜಭವನದಲಿ ೧೪೪

ಒಂದು ದುರ್ದಿವಸದಲಿ ನೃಪನಿಗೆ
ಬಂದುದಲ್ಪಾಚಮನ ಕಾಲವು
ಅಂದು ಶುದ್ಧಾಚಮನವಿಲ್ಲದೆ ಮರೆದು ನೀರ್ಗುಡಿಯೆ
ಇಂದು ತನಗಿದೆ ಸಮಯವೆಂದಾ
ನಂದದಲಿ ಕಲಿಪುರುಷ ರಾಯನ
ಸಂಧಿಸಿದ ವಿಧಿವಶವ ತಪ್ಪಿಸಲಾರ ಹವಣೆಂದ ೧೪೫

ಕಪಟ ಭೂಸುರ ವೇಷದಲಿ ನಿ
ಷ್ಕಪಟಿ ನಳಭೂಪನನು ಕೆಡಿಸುವ
ಉಪಮೆಯನು ತಾ ನೆಗಳ್ದು ಬಂದನು ಪುಷ್ಕರನ ಹೊರೆಗೆ
ನಿಪುಣನೆಂದನು ನಿನಗೆ ನಳಭೂ
ಮಿಪನು ಸಖನನೆ ಕೇಳಿ ಬಂದೆನು
ಅಪಯಶಕೆ ಹೆದರದಿರು ನಿನಗಹುದಖಿಳ ರಾಜ್ಯಪದ ೧೪೬

ಬಲ್ಲೆಯಾ ನೀನೆನ್ನ ಲೋಕಕೆ
ಬಲ್ಲಿದನು ತಾ ಕಲಿಪುರುಷ ನಳ
ನಲ್ಲಿ ದ್ಯೂತವನಾಡಿ ಗೆಲಿಸುವೆ ನಿನ್ನ ನೆತ್ತದಲಿ
ಒಲ್ಲೆನೆನದಿರು ಸಕಲ ರಾಜ್ಯದ
ವಲ್ಲಭನ ಮಾಡುವೆನು ನಡೆ ಹುಸಿ
ಯಲ್ಲ ನಿಷಧನ ಕಿತ್ತು ಬಿಸುಡುವೆ ನಂಬು ನೀನೆಂದ ೧೪೭

ನಂಬಿದನು ಲೇಸಾಗಿ ಭಾಷೆಯ
ನಿಂಬುಗೊಂಡುದು ಹೃದಯ ಪುಷ್ಕರ
ನೆಂಬ ಖಳ ಸಂತೋಷದಲಿ ಕಲಿಪುರುಷನೊಡಗೂಡು
ಅಂಬುಜಾಕ್ಷನ ಕಳೆಗೆ ತಾ ಪ್ರತಿ
ಬಿಂಬನೆನಿಸುವ ನಳನ ಬಳಿಗತಿ
ಸಂಭ್ರಮದೊಳೈತಂದರಿಬ್ಬರು ರಾಯನೋಲಗಕೆ ೧೪೮

ಮಿಸುನಿ ರತ್ನಪ್ರಭೆಗಳಲಿ ರಂ
ಜಿಸುವ ಮಂಟಪದೊಳಗೆ ರಾಜ
ಪ್ರಸರ ಸಹಿತವನೀಶನಿದ್ದನು ಸಿಂಹಪೀಠದಲಿ
ಶಶಿಮುಖಿಯರೆಡಬಲದಿ ಕೈವಾ
ರಿಸುತ ಸಿತಚಾಮರವ ಚಿಮ್ಮಲು
ನಸುನಗುತ ಕೈಮುಗಿದು ಪುಷ್ಕರನಂದ ನಳನೃಪಗೆ ೧೪೯

ಅರಸ ಕೇಳೀ ವಿಜ್ಞಾಪನೆ ಭಾ
ಸುರ ಸುತೇಜದೊಳೆಸೆವ ನೆತ್ತವ
ನೆರಡ ಕಾಣಿಕೆಗೊಟ್ಟನಿದರಲಿ ಎನಗ ಮನವಾಯ್ತು
ಹರವು ಹಾಸಂಗಿಗಳನಾಡುವೆ
ವಿರಚಿ ಸೋತವನಾವನಾಗಲಿ
ಧರೆಯನುಳಿದು ವನಾಂತರಕೆ ತೆರಳುವುದು ಸತಿಸಹಿತ ೧೫೦

ಧರಣಿಪತಿ ನಿನಗಿನ್ನು ಚಿತ್ತಕೆ
ಹರುಷವಾಗಿರಲಾಡು ಮನವಲಿ
ಕೊರತೆದೋರಲು ಮಾಣು ಇದು ಪಾರ್ಥಿವರ ಪಂಥ ಕಣಾ
ಧ ರಕೆ ಬೇಂಟೆಗೆ ಜೂಜಿಗೆಡೆಯುಲ
ಕರೆದರೋಸರಿಸುವುದು ನೀತಿಯೆ
ನಿರುತವಿದು ಚಿತ್ತೈಸು ಎಂದನು ನೃಪಗೆ ಕೈಮುಗಿದು ೧೫೧

ಮೇದಿನೀಪತಿ ಕೇಳು ಸಜ್ಜನ
ಸಾಧು ಬಲ್ಲನೆ ಖಳನ ಹೃದಯವ
ನಾ ದುರಾತ್ಮನ ನುಡಿಯ ಕೈಕೊಂಡಾಡಿದನು ನೃಪತಿ
ಭೇದದಲಿ ಕಲಿಪುರುಷ ಮಾಯೋ
ಪಾಧಿಯಲಿ ಪುಷ್ಕರನ ಜೂಜಿನ
ವಾಪದಿಂದಗಳಿಗೆಯಲಿ ಗೆಲಿಸಿದನು ವಸ್ತುಗಳ ೧೨೨

ಆಡಿದನು ಜೂಜಿನಲಿ ನೃಪ ಹೋ
ಗಾಡಿದನು ರಾಜ್ಯವನು ಕೋಶವ
ಕೇಡುಗರ ಕೈಮೇಳವಿಸಿದುದು ದೈವಗತಿಯಿಂದ
ಬಾಡಿತರಸನ ವದನ ಸಭೆಯಲಿ
ನೋಡಿದರು ಸಜ್ಜನರು ಮರುಗಿದ
ರಾಡಲೇನದನರಸ ಸೋತನು ವಿಧಿಯ ಘಟನೆಯಲಿ ೧೨೩

ಅರಸನಾಪ್ತ ಪುರೋಹಿತನು ಮನ
ಹರುಷವಳಿದೆಯ್ತಂದನಂತಃ
ಪುರವ ಹೊಕ್ಕನು ರಾಜವದನೆಯ ಸಭೆಗೆ ತಾ ಬಂದು
ತರುಣಿಯರ ಮೇಳದಲಿ ನೃಪಸತಿ
ಪರಮತೇಜದಿ ರತ್ನಪೀಠದಿ
ಶರಧಿರಾಜತನೂಜೆಯಂತಿರೆ ಕಂಡು ಕೈಮುಗಿದ ೧೨೪

ತಾಯೆ ಬಿನ್ನಹವಿಂದು ನಿಮ್ಮಯ
ರಾಯ ಸೋತನು ಜೂಜಿನಲಿ ನಿ
ರ್ದಾಯದಲಿ ಪುಷ್ಕರನು ಗೆಲಿದನು ಸಕಲ ರಾಜ್ಯವನು
ನೋಯಲಾಗದು ಚಿತ್ತದಲಿ ಸಿರಿ
ಬೀಯವಾದುದು ಕೇಳಿ ಇನ್ನಿದ
ರಾಯತವ ನೀವ್ ಬಲ್ಲಿರೆಂದನು ವಿಪ್ರ ಕೈಮುಗಿದು ೧೨೫

ಕಮಲವನದಲಿ ಮಂಜು ಸುರಿವಾ
ಕ್ರಮದ ಬಗೆಯಲಿ ಸತಿಯಳಿಗೆ ಮುಖ
ಕಮಲ ಬಾಡಿತು ನುಡಿಯ ಕೇಳುತ ಮನದ ಚಿಂತೆಯಲಿ
ಕಮಲನಾಭನ ಕರುಣಕವಚವು
ಸಮೆದರಾರೇಗುವರು ಶಿವಶಿವ
ಕುಮತಿ ಪುಷ್ಕರನಿಂತು ಮುನಿದನೆ ಎನುತ ಮರುಗಿದಳು ೧೫೬

ವಿಮಲಪತಿ ನಳನೃಪಗೆ ರಾಜ್ಯ
ಭ್ರಮಣವಾದುದೆ ಎನುತ ಸತಿ ಭೂ
ರಮಣನೆಡೆಗೈತಂದು ನೋಡಿದಳಿನಿಯನಿಂಗಿತವ
ತಮದ ರಾಹುಗ್ರಹವು ನೋಂಕಿದ
ದ್ಯುಮಣಿಯಂತಿರೆ ಕಂಡು ಧೈರ್ಯದಿ
ಕಮಲಮುಖಿ ಕೈಮುಗಿದು ಬಿನ್ನೈಸಿದಳು ನಿಜಪತಿಗೆ ೧೫೭

ಶಶಿಕುಲಾಂಬುಧಿ ಚಂದ್ರ ರಿಪು ನೃಪ
ನಿಶಿತ ಭಾಸ್ಕರ ತೇಜ ನಿಮಗೀ
ವ್ಯಸನ ತೋರಿತೆ ಜೂಜಿನಲಿ ಶಿವಶಿವ ಮಹಾದೇವ
ಬಿಸರುಹಾಕ್ಷನ ಕರುಣವಿದು ಸೋ
ಲಿಸಿದನೇ ಪುಷ್ಕರನು ಇದು ವಿಧಿ
ವಶವಲಾ ತಪ್ಪೇನು ಸಾಕಿನ್ನೆಂದಳಿಂದುಮುಖಿ ೧೫೮

ತರುಣಿ ಕೇಳಪಜಯದ ನಾರಿಯ
ಸೆರಗ ಹಿಡಿದೆನು ರಾಜ್ಯಲಕ್ಷ್ಮಿಯ
ಪರರಿಗಿತ್ತುಳುಹಿದೆನು ದೇಹವನಿದಕೆ ಅಂಜದಿರು
ತರುಣಿ ನೀ ಕಾನನದಿ ಗಿರಿ ಗ
ಹ್ವರಗಳಲಿ ಬಿಡದೆಂತು ತೊಳಲುವೆ
ಹರಹರಾ ಎಂದೆನುತ ಸತಿಯನು ನೋಡಿ ಬಿಸುಸುಯ್ದ ೧೫೯

ಚಿತ್ತವಿಸು ಶಶಿಕುಲ ಶಿರೋಮಣಿ
ಹೆತ್ತವರು ಸತಿಸುತರು ಮನೆ ಮನೆ
ವಾರ್ತೆ ಬಾಂಧವ ಧರಣಿ ಧನ ಭೋಗೈಕಸಂಪದವು
ನಿತ್ಯವಲ್ಲ ಶರೀರಸುಖಗಳ
ನಿತ್ಯವೆಂಬುದನರಿಯಿರೇ ನಿಜ
ಸತ್ಯವನು ಕೈವಿಡಿದು ಸಲಹೆಂದಳು ಸರೋಜಮುಖಿ ೧೬೦

ಚಿಂತೆ ಬೇಡೆಂದರಸನನು ಸತಿ
ಸಂತವಿಟ್ಟಳು ನೀತಿಯಲಿ ದಮ
ಯಂತಿ ನಿಜಮಂದಿರಕೆ ಸರಿಯಲು ಕಂಡು ಪುಷ್ಕರನು
ಇಂತು ಜೂಜಲಿ ಸೋತು ತಿರುಗಿ
ನ್ನೆಂತು ರಾಜ್ಯದಿ ನಿಲುವಿರೆನೆ ಭೂ
ಕಾಂತ ನಿಜಸತಿ ಸಹಿತ ವನವಾಸಕ್ಕೆ ಅನುವಾದ ೧೬೧

ತಳಿತ ಮಣಿಭೂಷಣಗಳೆಲ್ಲವ
ಕಳಚಿ ಬಿಸುಟನು ಗುರುವಿನಂಘ್ರಿಗೆ
ನಳಿನಮುಖಿ ಸಹಿತೆರಗಿ ಹೊರವಂಟವನು ನಿಜಾಲಯವ
ಬಳಿಯಲೈದಿದರಖಿಳ ಪುರಜನ
ಜಲದ ಕಂಗಳ ಧಾರೆಯಲಿ ಗಾ
ವಳಿಯು ಮುಸಗಿತು ಶೋಕರಸ ತುಂಬಿಮುದು ಪಟ್ಟಣವ ೧೬೨

ಮನದಿ ಮುನ್ನವೆ ತಿಳಿದು ನೃಪಸತಿ
ತನಯರನು ರಥದೊಳಗೆ ತಂದೆಯ
ಮನೆಗೆ ಕಳುಹಿದಳಾಪ್ತರೊಡನೆ ವಿದರ್ಭಪುರವರಕೆ
ಜನಪ ಕೇಳಿತ್ತಲು ಮಹಾರೋ
ದನದಿ ಪಟ್ಟಣವೆಲ್ಲ ಮರುಗಲು
ವನಿತೆ ಪತಿಯೊಡನೈದಿದಳು ನಿಜಭಾವಶುದ್ಧಿಯಲಿ ೧೬೩

ಏನನೆಂಬೆನು ಜೀಯ ಲೋಕದ
ಮಾನಿನಿಯೆ ದಮಯಂತಿ ಸತ್ಯ
ಜ್ಞಾನಿಯಲ್ಲಾ ಸತಿಯರಿಗೆ ಗುರು ಪತಿವ್ರತಾಗುಣದಿ
ಮೌನದಲಿ ಪತಿಪಂಕ್ಪ್ರ ಕಮಲ
ಧ್ಯಾನದಲಿ ಮನಸಂದು ಸತಿ ಘನ
ಕಾನನಕೆ ಗಮಿಸಿದಳು ಸರಪುರದರಸನಾಜ್ಞೆಯಲ ೧೬೪

ಕೇಳು ಕುಂತೀತನಯ ನಳನೃಪ
ಬೀಳುಕೊಂಡನು ಪುರವನಲ್ಲಿಂ
ಮೇಲೆ ನಡೆದರು ಪಯಣಗತಿಯಲಿ ಹಲವು ಯೋಜನವ
ಹೇಳಲೇನದನವರ ವಿಧಿಯನು
ತಾಳಿಗೆಗಳೊಣಗಿದವು ಸತಿಯಳ
ಕಾಲೊಡೆದು ಸುರಿವರುಣಜಲದಲಿ ಬಟ್ಟೆ ಕೆಸರಾಯ್ತು ೧೬೫

ಎಳೆಯ ಬಾಳೆಯ ಸುಳಿಯು ಅನಲನ
ಜಳದ ಹೊಯ್ಲಲಿ ನೊಂದವೋಲುರೆ
ಬಳಲಿದಬಲೆಯ ಕಂಡು ನೃಪ ಮರುಗಿದನು ಮನದೊಳಗೆ
ಲಲಿತ ಹೇಮದ ತೂಗುಮಂಚದ
ಹೊಳೆವ ಮೆಲ್ಹಾಸಿನಲಿ ಮಲಗುವ
ಲಲನೆಗೀ ವಿಧಿ ಒಂದುದೇ ಹಾ ಎನುತ ಬಿಸುಸುಯ್ದ ೧೬೬

ಮರುಗಲಿನ್ನೇಕರಸ ಬಿಡು ವಿಧಿ
ಬರೆದ ಬರಹವ ತಪ್ಪಿಸಲು ಹರಿ
ಹರ ವಿರಿಂಚಾದ್ಯರಿಗೆ ಸಾಧ್ಯವೆ ನಮ್ಮ ಪಾಡೇನು
ಹರೆವುದಾಕ್ಷಣ ತುಂಬುವುದು ಗೋ
ಚರಿಸುವುದು ಸಿರಿ ನಿತ್ಯವೇನಿದ
ನರಿಯದವನೇ ನೋಯಲೇಕೆಂದಳು ಸರೋಜಮುಖಿ ೧೬೭

ನುಡಿಯ ಕೇಳುತ ಮನದಿ ಮಿಡುಕುತ
ಪೊಡವಿಪತಿ ಸತಿಸಹಿತ ಘನತರ
ದಡವಿಯಲ ಬರುತಿರ ಜಗನ್ಮೋಹನದ ಪಕ್ಷಿಗಳು
ಪೊಡವಿಗಿಳಿಯಲು ಕಂಡಪೇಕ್ಷಿಸಿ
ಪಿಡಿವೆನೆಂದುರುಪಣಿಸಿ ನೃಪ
ಹಚ್ಚಡವ ಬೀಸಿ ಡವನು ಕೊಂಡೊಯ್ದುವು ನಭಸ್ಥಳಕೆ ೧೬೮

ಮೂಗಿನಲಿ ಬೆರಳಿಟ್ಟು ಮುಕುಟಪ
ತೂಗಿದನು ನಸುನಗುತ ನಿಂದಿರ
ಲಾಗ ಸೂಚಿಸಿದವು ನಿರಂತರ ರಾಜ್ಯಭೋಗವನು
ಬೇಗದಿಂದಪಹರಿಸಿಕೊಂಡವ
ರೀಗ ನಾವಿದನರಿದಿರೆಂದು ಸ
ರಾಗದಿಂದಲಿ ಮಾಯವಾದವು ಪಕ್ಷಿಯುಗಳಗಳು ೧೬೯

ಧರಣಿಪತಿ ಕೇಳ್ ನಿಷಧಪತಿ ಕಲ
ಪುರುಷ ಮಾಯವ ಬಲ್ಲನೇ ಮನ
ಮರುಗಿ ನಿರ್ವಾಣದಲಿ ನಿಂದಿರಲಾಗ ಸತಿ ಕಂಡು
ಹರಹರಾ ಎನುತಾಗ ಸೀರೆಯ
ಸೆರಗ ಹರಿದಿತ್ತಳು ನೃಪಾಲಗೆ
ಶಿರವ ನಸುಬಾಗಿದಳು ನಾಚಿಗೆಯಾಗಲಿಂತೆಂದ ೧೭೦

ಧರೆಯ ನೃಪರಿಗೆ ನಿಷಧಪುರಪತಿ
ಯರಮನೆಯ ಬಾಗಿಲಿನ ಸಮುಖವು
ದೊರಕಲದು ತಾ ಪುಣ್ಯವೆಂಬೀಯರಸುತನ ನಮಗೆ
ಹರೆದುದೆಲ್ಲ ಸಮಸ್ತ ರಾಜ್ಯದ
ಸಿರಿಗೆ ಬಾಹಿರನಾಗಿ ಪತ್ನಿಯ
ಸೆರಗನುಡುವಂತಾಯ್ತೆ ಹರಹರ ಎನುತ ಬಿಸುಸುಯ ೧೭೧

ಧರೆಯ ಸಂಪದದಷ್ಟು ಭೋಗವ
ಪರಿಹರಿಸಿ ನಿಜಪುತ್ರ ಮಿತ್ರರ
ತೊರೆದು ನಂಬಿದ ಸತಿಯ ಘೋರಾರಣ್ಯ ಮಧ್ಯದಲಿ
ಹಿರಿದು ಬಳಲಿಸಿ ನೋಯಿಸಿದೆ ಕೇಳ್
ತರುಣಿ ಎನ್ನವೊಲಾರು ಪಾಪಿಗ
ಳರದೆ ನೀ ಪೋಗಿನ್ನು ತಂದೆಯ ಮನೆಗೆ ನಡೆಯೆಂದ ೧೭೨

ಇನಿಯನಾಡಿದ ನುಡಿಗೆ ಅಂಗನೆ
ಕನಲಿ ನುಡಿದಳು ಶೋಕದಲಿ ನೀ
ನಿನಿತು ಮುನಿದಾಡುವರೆ ಸಾಕಿನ್ನಾರು ಗತಿಯೆನಗೆ
ಅನುದಿನವು ನಾ ನಿಮ್ಮ ಪದಯುಗ
ವನಜವನು ಭಜಿಸುವುದ ತೊರೆದೀ
ತನುವ ಸೈರಿಸಲಾವೆನೇ ಹೇಳೆಂದಳಿಂದುಮುಖಿ ೧೭೩

ನೆಳಲು ತನುವಿನ ಬಳಿಯಲಲ್ಲದೆ
ಚಲಿಸುವುದೆ ತಾ ಬೇರೆ ನಿಮ್ಮಡಿ
ನಳಿನದಲಿ ಸುಖದುಃಖವಲ್ಲದ ಬೇರೆ ಗತಿಯುಂಟೆ
ಹಳುವವೇ ಸಾಮ್ರಾಜ್ಯ ನಿಮ್ಮಡಿ
ನೆಳಲಿನಲಿ ತಾನಿರುವೆನಲ್ಲದೆ
ನಿಳಯವೇ ನನಗಡವಿಯೆಂದೆರಗಿದಳು ಪದಯುಗಕೆ ೧೭೪

ಶೋಕವೇಕೆಲೆ ತರುಣಿ ಬಾರೆಂ
ದಾ ಕಮಲಲೋಚನೆಯ ತೋಳಿನೋ
ಳಾಕಿ ಬಿಗಿದಪ್ಪಿದನು ಸೆರಗಿನೊಳೊರಸಿ ಕಂಬನಿಯ
ಜೋಕೆಯಲಿ ಕುಳ್ಳಿರಿಸಿ ತೊಡೆಯೊಳ
ನೇಕ ಪ್ರೀತಿಯೊಳೆಂದ ನೀನವಿ
ವೇಕಿಯೇ ಬಿಡು ಮನದ ದುಗುಡವನೆಂದನಾ ನೃಪತಿ ೧೭೫

ಎಂದು ಸತಿಯನು ಸಂತವಿಟ್ಟರ
ವಿಂದನಾಭ ಧ್ಯಾನದಲಿ ಬರೆ
ಮುಂದೆ ಘೋರಾರಣ್ಯವೆಸೆದುದು ಘನಭಯಂಕರದಿ
ಸಂದ ಖಗ ಮೃಗವಲ್ಲಿ ನೆರೆದಿರೆ
ಬಂದು ಹೊಕ್ಕರು ಕಾನನವನರ
ವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ ೧೭೬

ಲೋಕಕಧಿಪತಿ ನಳನ ರಾಣಿಗೆ
ಶೋಕ ಪರ್ಬಿದ ತೆರದಿ ಕತ್ತಲೆ
ಲೋಕವನು ಮುಸುಕಿದುದು ಭರಣಿಯ ಪುಚ್ಚಿದಂದದಲಿ
ಭೀಕರ ಧ್ವನಿಗಳಿಗೆ ಹೆದರಿದ
ಳಾ ಕಮಲಲೋಚನೆಯ ಕಂಡು ವಿ
ವೇಕನಿಧಿ ಸಂತೈಸಿ ಬಿಗಿಯಪ್ಪಿದೆನು ತೂಪಿರಿದು ೧೭೭

ಎಲ್ಲರೋಪಾದಿಯ ಪತಿವ್ರತೆ
ಯಲ್ಲವೀ ದಮಯಂತಿ ಬಿಡುವವ
ಳಲ್ಲ ತನ್ನನು ತರುಣಿ ಕಾಣದ ಕಡೆಗೆ ತೆರಳಿದರೆ
ಅಲ್ಲಿ ತಂದೆಯ ಮನೆಗೆ ಹೋಗುವ
ಳಿಲ್ಲಿ ತಾನಿರೆ ಬಿಡಳೆನುತ ಮನ
ದಲ್ಲಿ ಯೋಚಿಸಿ ನಿದ್ರೆಗೈಸಿದ ತನ್ನ ನಿಜಸತಿಯ ೧೭೮

ಮರೆದು ಮಲಗಿದಳವಳ ಮುಗ್ಗುಲ
ಸೆರಗ ಮೆಲ್ಲನೆ ಜಾರಿಸುತಲಾ
ಗರಸ ವಸನವ ಕೊಂಡು ಮಲಗಿದ ಸತಿಯನೀಕ್ಷಿಸುತ
ಮರುಗಿದನು ಕಣ್ಣೀರಿನಲಿ ಶ್ರೀ
ಹರಿ ಜಗತ್ಪತಿ ಅಡವಿಯಲಿ ಎ
ಚ್ಚರಿಸದೆ ತಾನೆಂತು ಪೋಗುವೆನೆನುತ ಬಿಸುಸುಯ್ದು ೧೭೯

ಮಡದಿಯಗಲಿದ ಬಳಿಕ ಹತ್ತೆಂ
ಟಡಿಯ ದಾಂಟುವ ಮರಳಿ ನಿಜಸತಿ
ಯೆಡೆಗೆ ತಿರುಗುವ ಚಂದ್ರಬಿಂಬಾನನವನೀಕ್ಷಿಸುವ
ಅಡಸಿದತಿದುಃಖವಲಿ ಮೆಲ್ಲಡಿ
ಯಿಡುವ ಸತಿಯನು ನೋಡಿ ಮನದು
ಗ್ಗಡದ ಶೋಕದಿ ನಡೆದ ನಳನೃಪನೊಂದು ಯೋಜನವ ೧೭೦

ಕರುಣದೋರದೆ ನೃಪತಿ ಇಪ್ಪಿಯಳ
ತೊರೆದು ಬಿಸುಟನು ವನದೊಳಗೆ ಹುಲಿ
ಕರಡಿ ಮೃಗದುಪಟಳವ ತಾನಿನ್ನೆಂತು ನೈರಿಪಳೋ
ಮೊರೆಯ ಲಾಲಿಸಿ ನೋಳ್ಪನೆಂದುರು
ತರದ ಪ್ರೇಮದಿ ಬಂದು ಸತಿಗೆ
ಚ್ಚರಿಸುವಂದದಿ ತರಣಿ ತಲೆದೋರಿದನು ಪೂರ್ವದಲಿ ೧೭೧

ನಳಿನಮುಖಿ ಮೈಮುರಿದ ನಿದ್ರೆಯ
ತಿಳಿದು ಮೆಲ್ಲನೆ ನೋಡಿದಳು ಎಡ
ಬಲವನೀಕ್ಷಿಸಿ ಪತಿಯ ಕಾಣದ ಬಲಿದ ಮೂರ್ಛೆಯಲಿ
ಮಲಗಿದಳು ಮೈಮರೆದು ನಿಮಿಷಕೆ
ತಿಳಿದು ಕಾಣದೆ ಕಾತರದಿ ಹಂ
ಬಲಿಸಿ ಹಲುಬಿದಳಲ್ಲಿ ಗಿರಿ ತರುನಿಕರ ಮಧ್ಯದಲಿ ೧೮೨

ಹಾ ರಮಣ ನಳನೃಪತಿ ಹಾ ರಣ
ಧೀರ ಸದ್ಗುಣಹಾರ ರಿಪು ಸಂ
ಹಾರ ನಿತ್ಯೋದಾರ ನಿರ್ಮಲ ಸತ್ಯಸಂಚಾರ
ಘೋರ ಕಾನನದೊಳಗೆ ನಂಬಿದ
ನಾರಿಯನು ಬಿಸುಡುವರೆ ತನಗಿ
ನ್ನಾರು ಗತಿ ಮುಖದೋರನುತ ಹಲುಬಿದಳು ದಮಯಂತಿ ೧೮೩

ಪೊಡವಿಗಿಳಿವೆನೊ ಹಾಯ್ದು ಪಾವಕ
ನೊಡಲ ಹೊಗುವೆನೊ ಕಾಳಕೂಟದ
ಮಡುವಿನೊಳು ಮುಳುಗುವೆನೊ ಹಾಸರೆಯೊಳಗೆ ಬೀಳುವೆನೊ
ಅಡಸಿದಾಪತ್ತಿನಲಿ ಗರಳವ
ಕುಡಿವೆನೊ ತಾನೆನುತ ಸತಿ ಬಾಯ್
ಬಿಡುತ ಕಾನನನೊಳಗೆ ತಿರುಗಿದಳಬಲೆ ಶೋಕದಲಿ ೧೨೪

ಮುಡಿ ಚದುರಿ ಹುಡಿಯೊಳಗೆ ಹೊರಳುತ
ಲೊಡಲನೀಡಾಡಿದಳು ಧರೆಯೊಳ್
ಗಡವಿ ಪಾಲ ಗೆಂದು ಪಡೆವಳೂ ತನ್ನ ನಿಜಜನನಿ
ಮಡದಿಯರು ತನ್ನಂತೆ ಲೋಕದೊ
ಳೊಡಲ ತೆತ್ತವರುಂಟೆ ಶೋಕದಿ
ಪೊಡವಿಪತಿ ಮುಖದೋರೆನುತ ಹಂಬಲಿಸಿದಳು ಪತಿಯ ೧೨೫

ಮಾನವಾಧಿಪ ಕೇಳು ಬನದಲಿ
ಮಾನಿನಿಗೆ ಮತ್ತೊಂದು ಕಂಟಕ
ಹಾನಿ ಬಂದುದದೇನನೆಂಬೆನು ಪತಿಗೆ ಬಾಯ್ಬಿಡುತ
ಕಾನನದ ಬಳಿವಿಡಿದು ಬರೆ ಸು
ಮ್ಮಾನದಲಿ ತರಗೆಲೆಯ ಹಕ್ಕೆಯು
ಮೌನದಲಿ ಉರಗೇಂದ್ರನಿದ್ದನು ಬಲಿದ ನಿದ್ರೆಯಲಿ ೧೨೬

ತರಳೆ ಕಾಣದೆ ಬರುತ ಮೆಟ್ಟಿದ
ಉರಗಪತಿಯನು ಕೋಪದಲಿ ಮಿಗೆ
ಸುರಿವ ಗರಳದಿ ರೌದ್ರಮಯ ರೂಪಿನಲಿ ಬಾಲಕಿಯ
ತರುಬಿ ಹಿಡಿದನು ತವಕದಲಿ ಹಿಮ
ಕರನ ನುಂಗುವ ರಾಹುವಿನವೋಲ್
ಅರಸ ಕೇಳಂಗನೆಯ ವಿಧಿಯನು ಹೇಳಲೇನೆಂದ ೧೨೭

ಹಾ ರಮಣ ನಳನೃಪತಿ ತನ್ನನು
ಆರಿಗೊಪ್ಪಿಸಿ ಕಳೆದೆ ಹರಿ ಹರಿ
ಕ್ರೂರಸರ್ಪನ ಬಾಯ್ಗೆ ತುತ್ತಾದೆನೆ ಜಗನ್ನಾಥ
ಆರಿಗೊರಲುವೆನೆನ್ನ ಪ್ರಾಣವ
ನಾರು ಕಾವವರಕಟ ಬಿಡಿಸೈ
ವಾರಿಜಾಕ್ಷ ಮುಕುಂದ ಸಲಹೆಂದೊರಲಿದಳು ತರಲೆ ೧೮೮

ಶೈಲಶಿಖರದೊಳಿರ್ದು ಕೇಳಿದ
ಬಾಲಕಿಯ ಶೋಕವನು ಬಿಲ್ಲಿನ
ಕೋಲುಗಾರನು ಕರದ ಬಿಲ್ಲಿನ ಶಬರನೈತಂದು
ಆ ಲತಾಂಗಿಯ ಪಿಡಿದು ನುಂಗುವ
ಕಾಲಭುಜಗನ ಕಂಡು ನಿಜಕರ
ವಾಲದಲಿ ಖಂಡಿಸಿದನಹಿಯನು ಬಿಡಿಸಿದನು ಸತಿಯ ೧೮೯

ಬಂದು ಕೆಂದಾವರೆಯ ಕೊಳದಲಿ
ಮಿಂದು ನಿಂದಿರೆ ಶಬರನೆಂದನು
ಇಂದುಮುಖಿ ನೀನೆನಗೆ ಸತಿಯಾಗೆನಲು ಖತಿಗೊಂಡು
ಇಂದೆನಗೆ ಅಸುವಿತ್ತು ಸಲಹಿದ
ತಂದೆಯಲ್ಲವೆ ನೀನು ಕೇಳು ಪು
ಳಿಂದ ಮುಳಿದರೆ ಶಪಿಸುವೆನು ಹೋಗೆಂದಳಿಂದುಮುಖಿ ೧೯೦

ತರುಣಿ ಕೋಪಿಸಿ ನುಡಿಯೆ ಭಯದಲಿ
ಶಿರವ ಬಾಗಿ ಪುಳಿಂದನತ್ತಲು
ಮರಳಿದನು ದಮಯಂತಿ ಮನದಲಿ ಪತಿಗೆ ಹಂಬಲಿಸಿ
ಮರುಗುವಳು ಬನದೊಳಗೆ ಭೂಪನ
ನರಸಿ ಕಾಣದೆ ಬಯಲನಪ್ಪುವ
ಳುರವಣಿಪ ಕಣ್ಣೀರಿನಲಿ ನಡೆತಂದಳಿಂದುಮುಖಿ ೧೯೧

ಅರಸ ಕೇಳಾಶ್ಚರ್ಯವನು ಸತಿ
ಬರುತಿರಲು ಕಾನನದಿ ನೆರೆದಿಹ
ಮರುಳು ಬಳಗವು ಭೂತ ಭೇತಾಳಗಳು ತೊಲಗಿದವು
ಶರಭ ಮೊಲ ಕಾಡಾನೆ ಸಿಂಹಗ
ಳಿರದೆ ಜಾರಿದವಲ್ಲಿ ಸತಿಯಳ
ಪರಮ ಪಾತಿವ್ರತ್ಯ ಮಹಿಮೆಯನರಸ ಕೇಳೆಂದ ೧೯೨

ಮುಂದೆ ಕಂಡಳು ಹೊಳೆವ ತಾಪಸ
ವೃಂದವನು ಕಂಬನಿಯ ಸುರಿಸುತ
ಬಂದ ವನಿತೆಯ ಕೇಳಿದರು ಮುನಿವರರು ಕರುಣದಲಿ
ಇಂದುಮುಖಿ ನೀನಾರು ಇಲ್ಲಿಗೆ
ಬಂದ ಹದನೇನೆನಲು ಶೋಕದಿ
ನೊಂದು ನುಡಿದಳು ಮುನಿಗಳಿಗೆ ಕೈಮುಗಿದು ವಿನಯದಲಿ ೧೯೩

ಭೂತಳವ ನಳನೃಪತಿ ಜೂಜಲಿ
ಸೋತು ಪುಷ್ಕರಗಿತ್ತು ಸತ್ಯದ
ನೀತಿ ತಪ್ಪದೆ ಬಂದು ಬನದಲಿ ತನ್ನನಗಲಿದನು
ಧಾತುಗುಂದಿದೆ ಪತಿಯ ಕಾಣದೆ
ಭೀತಿಯಲಿ ನಿಮ್ಮಡಿಯ ಕಂಡೆನು
ಭೂತದಯೆ ನಿಮಗುಂಟಲಾ ಸಲಹೆಂದಳಿಂದುಮುಖಿ ೧೯೪

ನೆನೆದುದಂತಃಕರಣ ಕೇಳುತ
ಮುನಿಗಳೆಂದರು ತಾಯೆ ಶೋಕದಿ
ಕನಲಿ ಕಂಗೆಡಬೇಡ ನಿಜಪತಿ ರಾಜ್ಯಸಿರಿ ಸುತರು
ನಿನಗೆ ಬಂದಪುದಿನ್ನು ಯೋಗದ
ಮನದೊಳರಿವೆವು ನಾವು ಅಂಜದಿ
ರೆನುತ ಪೇಳಿಯದೃಶ್ಯರಾದರು ಮುನಿಗಳೊಗ್ಗಿನಲಿ ೧೯೫

ಆ ತರುಣಿ ಬೆರಗಾಗಿ ಕನಸಿನ
ರೀತಿಯಾಯ್ತು ಕಟಕಟ ವಾನಿ
ವ್ರಾತಪೆತ್ತಲು ಸರಿದುದೇ ವಿಸ್ಮಯವಲಾ ಎನುತ
ಆ ತಳೋದರಿ ಪತಿಯ ಕಾಣದೆ
ಕಾತರದಿ ಬರುತಿರಲು ಕಂಡರು
ನೂತನದ ಬೇಹಾರಿಗಳು ತೊಳಲುವ ನಿತಂಬಿನಿಯ ೧೯೬

ಆರಿವಳು ವನಲಕ್ಷ್ಮಿಯೋ ಸುರ
ನಾರಿಯೋ ವಾರಾಂಗನೆಯೋ ಮದ
ನಾರಿಸತಿಯೊ ನರಸತಿಯೊ ಪುಣ್ಯಪುರ ಮಾನಿನಿಯೊ
ಆರ ವನಿತೆಯೊ ಕಾಮರೂಪದ
ಭೂರಿಭೂತವೊ ತಿಳಿಯಲರಿದಿವ
ಳಾರೆನುತ ಭಯಗೊಂಡು ಓಡಿದರಲ್ಲಿ ವಣಜಿಗರು ೧೯೭

ನೋಡಿದಳು ದಮಯಂತಿ ಭೀತಿಯ
ಲೋಡುತಿಹ ಬೀಡಿಕೆಯ ವೈಶ್ಯರ
ಹೇಡಿತನವನು ಕಂಡು ನಸುನಗುತಲ್ಲಿಗೈತಂದು
ಒಡಲೇತಕೆ ನಿಮಗುಪಹತಿಯ
ಮಾಡುವಳು ತಾನಲ್ಲ ಜಗಕತಿ
ರೂಢಿಸಿದ ನಳನೃಪನ ಸತಿ ತಾನೆಂದಳಿಂದುಮುಖಿ ೧೯೮

ವೀರಸೇನನ ತನಯ ನಳನೃಪ
ಧಾರಿಣಿಯನುರೆ ಸೋತು ಕಾರ್ಯದ
ಕಾರಣದಿ ನಡೆತಂದನಡವಿಗೆ ತನ್ನನಗಲಿದನು
ದಾರಿತಪ್ಪಿದೆನಿಲ್ಲಿ ನಿಮ್ಮನು
ಸೇರಿದೆನು ಪರದೇಶಿ ತನಗೊಂ
ದೂರ ತೋರಿರಿ ನೀವೆನುತ ತುಂಬಿಯಳು ಕಂಬನಿಯ ೧೯೯

ತಾಯೆ ನಿಮ್ಮ ಪದಾಬ್ಜ ದರ್ಶನ
ವಾಯಿತೆಮಗಿಂದಿನಲಿ ಧನ್ಯರು
ಈಯವಸ್ಥೆಗೆ ತಂದುದೇ ವಿಧಿ ನಿಮ್ಮನೆನುತೆರಗಿ
ನೋಯದಿರಿ ಇದೆ ಚೈದ್ಯಪುರವೆಂ
ದಾ ಯುವತಿಯೊಡಗೊಂಡು ಬರುತಿರೆ
ತೋಯಜಾಪ್ತನು ಪಶ್ಚಿಮಾಂಬುಧಿಗಿಳಿದನೊಲವಿನಲಿ ೨೦೦

ಹಗಲು ಸವೆದುದು ಹೊಂಬಿಸಿಲು ನೆರೆ
ತೆಗೆದುದತಿವೇಗದಲಿ ಕತ್ತಲೆ
ಬಿಗಿದುದವನೀತಳವ ಪೆಟ್ಟಿಗೆ ಮುಚ್ಚಿದಂದದಲಿ
ಸುಗುಣೆ ದಮಯಂತಿಯನು ನೋಡಲು
ಸೊಗಸಬಂದನಿಮಿಷರವೋಲ್ ತಾ
ರಗಳು ಮೂಡಿದವಂಬರದಿ ಪ್ರಜ್ವಲಿಪ ಕಾಂತಿಯಲಿ ೨೦೧

ಅವನಿಪತಿ ಕೇಳ್ ವೈಶ್ಯಕುಲ ಸಂ
ಭವರು ಹಾಯ್ಕಿದರಲ್ಲಿ ಗೂಡಾ
ರವನು ಬಿಟ್ಟರು ಪಾಳಯವ ಮಲಗಿದರು ರಾತ್ರಿಯಲಿ
ಅವಧಿ ಬಂದುಗನೇನನೆಂಬೆನು
ಕವಿದು ಕಾಡಾನೆಗಳು ಮಡುವಿಗೆ
ತವಕದಿಂ ನೀರಡಿಸಿ ಬಂದುದು ಗಿರಿಗಳಂದದಲಿ ೨೦೨

ತೂಳಿದವು ಮದಕರಿಗಳವರನು
ಸೀಳಿ ಹಾಯ್ಕಿತು ಕೆಲರ ಮುಮ್ಮೊನೆ
ಯಾಳು ಕವಿದುದು ಹೊಕ್ಕು ಕಾದಿಪರತುಳ ಭುಜಬಲರು
ತಾಳಬಲ್ಲರ ಕೆಲರು ಕರಿಗಳ
ದಾಳಿ[illegible]ಟರೇ ಮುರಿದು ಹಾಯ್ದರು
ಹೇಳಲೇನದನರಸ ತೆಗೆದೋಡಿದರು ದೆಸೆದೆಸೆಗೆ ೨೦೩

ಅಮ್ಮ ಕೇಳೀ ಮದಗಜಂಗಳು
ನಮ್ಮ ಕೊಲುತಿವೆ ಹದನ ಕಾಣೆನು
ನಮ್ಮನೇ ನೆರೆನಂಬಿ ಬಂದಿರಿ ಇದಕೆ ಗತಿಯೇನು
ನಿಮ್ಮನಿಲ್ಲಿಗೆ ತಂದುದೇ ವಿಧಿ
ಬೊಮ್ಮ ಬರಹವ ಮೀರುವವರಾ
ರಮ್ಮ ಲೋಕದೊಳೆಂದು ಮರುಗಿದ ವೈಶ್ಯಕುಲತಿಲಕ ೨೦೪

ಜನನವೇ ವರಭೀಮರಾಯನ
ಮನೆ ತನಗೆ ನಳಚಕ್ರವರ್ತಿಯೆ
ಇನಿಯನಗ್ಗದ ವೀರಸೇನನೆ ಮಾವನಾಗಿರಲು
ವನದೊಳೀಪರಿ ಕರಿಗಳಿಗೆ ತಾ
ತನುವ ತೆರಬೇಕೆಂಬ ಕಾರಣ
ತನಗಿರಲು ನೀವೇನಮಾಡುವಿರೆಂದಳಿಂದುಮುಖಿ ೨೦೫

ಎನುತ ಕಣ್ಣವೆ ಬಿಗಿದು ಮನದಲಿ
ನೆನೆದಳಚ್ಯುತನಂಘ್ರಿಕಮಲವ
ವನಜನಾಭ ಮುಕುಂದ ಸಲಹೆನೆ ಕರಿಗಳಾಕ್ಷಣಕೆ
ವನಕೆ ಮರಳಿದವವರನೆಲ್ಲರ
ವನಿತೆ ಸಂತೈಸಿದಳು ದೈವವ
ನೆನೆವ ಭಕ್ತರಿಗುಂಟೆ ಭಯವೆಲೆ ನೃಪತಿ ಕೇಳೆಂದ ೨೦೬

ಕಳೆದರಂದಿನ ರಾತ್ರಿಯನು ರವಿ
ಬೆಳಗಿದನು ಪೂರ್ವಾದ್ರಿಯಲಿ ಸಂ
ದಣಿಸಿ ನಡೆದರು ಮುಂದೆ ಕಂಡರು ಚೇದಿಪಟ್ಟಣವ
ಹೊಳೆವ ಹೇಮದ ಸೌಧಗಳ ತಳ
ತಳಿಪ ನೆಲೆಯುಪ್ಪರಿಗೆಗಳ ಕಂ
ಡೊಲಿದು ಮನ ಹರುಷದಲಿ ಹೊಕ್ಕರು ಸತಿಸಹಿತ ಪುರವ ೨೦೭

ರಸದ ಲೇಪದ ಮಿಸುನಿಯೊ ಮಲಿನ
ವಸನದಲಿ ಹುದುಗಿರ್ದ ರತ್ನವೊ
ನಸಿದ ಮೇಘದೊಳೆಸೆವ ಚಂದ್ರನ ಬಿಂಬದಂದದಲಿ
ಶಶಿವದನೆ ಬರುತಿರಲು ಪುರಜನ
ವೊಸೆದು ನೋಡಿದುದಲ್ಲಿಗಲ್ಲಿಗೆ
ಬಿಸಜಮುಖಿಯಿವಳಾರೆನುತ ಬೆರಗಾಯ್ತು ಜನನಿಕರ ೨೦೮

ಹೇಮದುಪ್ಪರಿಗೆಯಲಿ ನೃಪಸತಿ
ಕಾಮಿನಿಯರೋಲಗದೊಳೊಪ್ಪುತ
ತಾಮರಸದಳನಯನ ದಮಯಂತಿಯನು ತಾ ಕಂಡು
ಈ ಮಹಾಸತಿ ಯಾವಳೋ ಸು
ತ್ರಾಮನರಸಿಯೊ ಎನುತ ಕರೆಸಿದ
ಡಾ ವ ಹಿಳೆ ಬಂದಳು ನೃಪಾಲನ ಸತಿಯ ಸಮ್ಮುಖಕೆ ೨೦೯

ತಾಯೆ ನೀನಾರಾವದೇಶದ
ರಾಯನರಸಿಯಿದೇನು ನಿನಗೀ
ಪ್ರಾಯದಲಿ ಕಳೆಕಂದಿ ಮಾಸಿಹುದೇನು ಪೇಳೆನಲು
ಆ ಯುವತಿ ಕಣ್ಣೀರಿನಲಿ ಪೂ
ರಾಯ ಶೋಕದೊಳೆಂದಳಾ ತರ
ಳಾಯತಾಕ್ಷಿಗೆ ತನ್ನ ವೃತ್ತಾಂತವನು ಬಿಸುಸುಯ್ದು ೨೧೦

ಕ್ಷಿತಿಯನೆಲ್ಲವ ಸೋತು ಜೂಜಲಿ
ಪತಿ ವನಕೆ ಬಂದೆನ್ನನಗಲಿದ
ಮತಿವಿಕಳತನದಿಂದ ತಿರುಗುತ ಬಂದೆ ನಿಮ್ಮೆಡೆಗೆ
ಹಿತವರಾರನು ಕಾಣೆ ನೀವೇ
ಗತಿಯೆನಗೆ ಪರದೇಸಿಯನು ಪರ
ಹಿತವೆ ಪುಣ್ಯವು ರಕ್ಷಿಸೆಂದಳು ನಳನೃಪನ ರಾಣಿ ೨೧೧

ನುಡಿಯ ಕೇಳುತ ಚೈದ್ಯಭೂಪನ
ಮಡದಿ ನೂಪುರ ಘಲ್ಲುಘಲಿರೆನೆ
ಅಡಿಯಿಡುತ ಬಂದಪ್ಪಿ ನೆರೆಗಿನೊಳೊರೆಸಿ ಕಂಬನಿಯ
ಬಿಡು ವ್ಯಥೆಯ ವರಭೂಷಣಂಗಳ
ತೊಡು ದುಕೂಲವನುಡು ಸುಮಾಲ್ಯವ
ಮುಡಿಗೆ ಸೇರಿಸು ತರುಣಿ ಎಂದಳು ಚೈದ್ಯನೃಪನರಸಿ ೨೧೨

ದೇವಿ ನಿಮ್ಮುಪಚಾರವೇ ಸಂ
ಭಾವನೆಯುಲಾ ತನಗೆ ಬೇರಿ
ನ್ನಾವ ಭೂಷಣವೇಕೆ ದೇಸಿಗರಾವು ನಿಮ್ಮಡಿಯ
ಸೇವೆಯಲಿ ತಾನಿಹೆನು ಹೀನವ
ನಾವು ಬಳಸುವರಲ್ಲ ತನ್ನನು
ಕಾವ ಹದನನು ನೀವೆ ಬಲ್ಲಿರಿಯೆಂದಳಾ ಸತಿಗೆ ೨೧೩

ಎನಲು ನಸುನಗುತೆಂದಳಾ ಮಾ
ನಿನಿಗೆ ನಮ್ಮಿಂದಾಗದುಪಹತಿ
ನಿನಗೆ ಪೇಳೆವು ಹೀನಕೆಲಸವ ಚಿಂತೆ ಬೇಡಿನ್ನು
ತನಗೆ ಮಗಳು ಸುನೀತಿಯಾಕೆಯು
ಮನೆಯೊಳಿರು ಸೈರಂಧ್ರಿತನದಿಂ
ದನವರತ ನೀನೆಂದು ನೇಮಿಸಿ ಕಳುಹಿದಳು ಮನೆಗೆ ೨೧೪

ಮನದ ದಗೆಯಡಗಿತು ಸುನೀತಿಯ
ಮನೆಯೊಳಿದ್ದಳು ಭೇದವಿಲ್ಲದೆ
ಅನುದಿನದೊಳಾಹಾರ ನಿದ್ರಾಂಗನೆಯ ತಾನುಳಿದು
ವನಜನಾಭನ ಕರುಣದಲಿ ಬಂ
ದಿನಿಯನೆಂದಿಗೆ ಮುಖವ ತೋರುವ
ನೆನುತ ಚಿಂತಿಸುತಿರ್ದಳಾ ವರಪುರದ ಚೆನ್ನಿಗನ ೨೧೫

ಕೇಳು ಕುಂತೀತನಯ ನಿಷಧ ನೃ
ಪಾಲನಿತ್ತಲು ಮರೆದು ಮಲಗಿದ
ಬಾಲಕಿಯ ಬಿಟ್ಟಡವಿಯಲಿ ಹೊರವಂಟನಾಶ್ರಮವ
ಕಾಲವಾವನ ಕೀಳು ಮಾಡದು
ಶೂಲಪಾಣಿಯೆ ಬಲ್ಲ ನಳಭೂ
ಪಾಲಕನ ವಿಧಿಯನೇನೆಂಬೆನು ಬಂದನಡವಿಯಲಿ ೨೧೬

ವನಿತೆ ಮಲಗಿಹಳೊ ಅಧೈರ್ಯದಿ
ನೆನೆವಳೊ ದೈವವನು ನಿದ್ರೆಯ
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ
ಕನಲಿ ವಿಧಿಯನು ಬೈವಳೊ ಕಂ
ಬನಿಯ ಸುರಿವಳೊ ಶೋಕದಲಿ ನಿಜ
ತನುವ ಬಿಡುವಳೊ ಕಾಂತೆಯೆಂತಿಹಳೆನುತ ಬಿಸುಸುಯ್ದ ೨೧೭

ಸುತರ ಪರರೆಡೆಗಿತ್ತು ನಂಬಿದ
ಸತಿಯ ತಂದಡವಿಯಲಿ ಮಲಗಿಸಿ
ಮತಿವಿಕಳನಾದೆನು ಪುರಾಕೃತ ಕರ್ಮಫಲವ್ಯೆಸೆ
ಕ್ಷಿತಿಯೊಳಾರುಂಟೆನ್ನವೋಲ್ ನಿಜ
ಸತಿಗೆ ತಪ್ಪಿದ ಬಾಹಿರನು ಎಂ
ದತಿಶಯದ ಶೋಕದಲಿ ನಡೆದನು ಶಿವಶಿವಾ ಎನುತ ೨೧೮

ಲೋಕದೊಳಗಗ್ಗಳಿಯ ಮಹಿಪರ
ನೇಕರವರೊಳಗಾರನೊಲ್ಲದೆ
ನೂಕಿ ತನ್ನನೆಯೊಲಿದು ಕೈಕೊಂಡಳು ಸರೋಜಮುಖಿ
ಆಕೆಯಗಲಿದ ಪಾತಕನು ತಾ
ನೇಕೆ ಧರೆಯೊಳು ಶಿವಶಿವಾ ಎಂ
ದಾ ಕಮಲಲೋಚನೆಗೆ ಮರುಗುವನರಸ ಕೇಳೆಂದ ೨೧೯

ಈ ಪರಿಯೊಳತಿಶೋಕದಿಂಗ ಪ್ರ
ಳಾಪಿಸುತ ನಳನೃಪತಿ ಹೆಚ್ಚಿದ
ತಾಪದಲಿ ಕಡುನೊಂದು ಬಳಲಿದ ತನ್ನ ಮನದೊಳಗೆ
ಶ್ರೀಪತಿಯ ನೆಲೆಗೊಳಿಸಿ ಹೃದಯದ
ತಾಪದೊಳು ಬರುತಿರಲು ಮುಂದೆ ಸ
ಮೀಪದಲಿ ಹುತವಹನ ಮಹಿಮೆಯ ಕಂಡನವನೀಶ ೨೨೦

ಬಿದಿರಮೆಳೆ ಧಗಧಗಿಸೆ ಘನ ಹೆ
ಬ್ಬಿದಿರು ಛಟಿಛಟಿರೆನಲು ಉರಿಯೊಳು
ಕದಳಿಗಳು ಸಿಮಿಸಿಮಿಸೆ ತರುಗಳನುರುಹಿ ಮೆಳೆಗಳನು
ಗದಗದಿಸೆ ಗುಹೆಯಲಿ ಮೃಗತತಿ
ಹೆದರಿ ಹಾಯ್ದವು ಪಕ್ಷಿಸಂಕುಲ
ಉದುರಿದವು ಗರಿಸಹಿತ ಬೆಂದವು ವನದ ಮಧ್ಯದಲಿ ೨೨೧

ತೆಗೆದು ಹಾಯ್ದುದು ಸಿಂಹ ಶಾರ್ದೂ
ಲಗಳು ಕರಿಗಳ ಹಿಂಡು ನಾನಾ
ಮೃಗಗಳಗಣಿತ ಬೆಂದು ಬಿದ್ದವು ನಿಮಿಷ ಮಾತ್ರದಲಿ
ಚಿಗಿದು ಹಾಯ್ದವು ಗಂಡಭೇರುಂ
ಡಗಳು ಮೊದಲಾದಖಿಳ ಮೃಗ ಪ
ಕ್ಷಿಗಳು ಕೆಡೆದುದು ಕಿಚ್ಚಿನೊಳಗವನೀಶ ಕೇಳೆಂದ ೨೨೨

ಪ್ರಳಯದಿನದಲಿ ಸುಳಿವ ವಡಬಾನ
ಳನೊ ಎನಲಾ ವನವ ಸುಡುತಲಿ
ಸುಳಿಸುಳಿಯುತಾಹಾಂಗೊಳುತಿರಲಲ್ಲಿ ಧ್ವನಿಯಾಯ್ತು
ಸಿಲುಕಿದೆನು ಪಾವಕನೊಳಕಟಕ
ಟಳಿವೆ ಹಾ ನೃಪಕುಲ ಶಿರೋಮಣಿ
ಯೊಲಿದು ಬಿಡಿಸೈ ಸುಕೃತ ನಿನಗಹುದೆಂದುದಾ ನಿನದ ೨೨೩

ಆಗಲಾ ಧ್ವನಿಗೇಳಿ ನೃಪತಿ ಸ
ರಾಗದಿಂದಲೆ ಬಂದು ಹೊಕ್ಕನು
ಕೂಗಿದವರಾರೆನುತ ಬರುತಿರೆ ಕಂಡನುರಗಪತಿ
ಪೋಗುತಿದೆ ಎನ್ನಸುವು ಸಲಹು ಷ
ಡಾಗಮಜ್ಞ ನೃಪಾಲ ಎನಲಾ
ಭೋಗಿಯನು ಕಂಡರಸ ನೀನಾರೆಂದು ಬೆಸಗೊಂಡ ೨೨೪

ಉರಗಪತಿ ಕಾರ್ಕೋಟಕನು ತಾ
ನರಸ ಕೇಳ್ಳೆ ಬನದೊಳಿರುತಿರೆ
ಪರಮಋಷಿ ಬಂದೆನ್ನ ತಾಗಿದನೆಂದು ಖಾತಿಯಲಿ
ಕರೆದು ಕೊಟ್ಟನು ಶಾಪವನು ಸಂ
ಚರಿಸದಂತಿರೆ ಎನಗೆ ಇದ ಪರಿ
ಹರಿಸಲೆಂದಿಗೆ ಮುನಿಪ ಕರುಣಿಸು ಎಂದೊಡಿಂತೆಂದ ೨೨೫

ಇರಲಿರಲು ಕಾಲಾಂತರಕೆ ಭೂ
ವರನು ನಳನೃಪನಿಲ್ಲಿಗೈದುವ
ಧರಣಿಪನ ಕರಕಮಲ ಸೋಂಕಲು ಶಾಪವಿದು ಬಳಿಕ
ಪರಿಹರಿಪುದೆನೆ ಮುನಿಯ ವಚನದಿ
ಬರವ ಹಾರುತ್ತಿರಲು ಬಂದ್ಯೆ
ಕರುಣದಿಂದಗ್ನಿಯನು ಪರಿಹರಿಸೆಂದನುರಗಪತಿ ೨೨೬

ಕರುಣದಲಿ ನೃಪ ಭೀತಿಗೊಳ್ಳದೆ
ಯುರಗಪತಿಯನು ತೆಗೆದು ಅನಲನ
ಉರಿಯ ತಪ್ಪಿಸಿ ಕೊಳನ ತೀರಕೆ ತಂದು ಉಪಚರಿಸೆ
ಕರವಿಡಿದು ಧರಣಿಪನ ಕಚ್ಚಿದ
ಹುರವಣಿಸಿ ವಿಷವೇರಿ ನೃಪತಿಯು
ಪರಮತೇಜದ ದೇಹ ಕೆಟ್ಟಿತು ವಿಕೃತರೂಪಾಗಿ ೨೨೭

ದೊಡ್ಡ ಹೊಟ್ಟೆಯ ಗೂನು ಬೆನ್ನಿನ
ಅಡ್ಡ ಮೋರೆಯ ಗಂಟು ಮೂಗಿನ
ದೊಡ್ಡ ಕೈಕಾಲುಗಳು ಉದುರಿದ ರೋಮ ಮೀಸೆಗಳ
ಜಡ್ಡು ದೇಹದ ಗುಜ್ಜು ಗೊರಲಿನ
ಗಿಡ್ಡ ರೂಪಿನ ಹರಕು ಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ೨೨೮

ಮಾರನಾಕಾರದ ನೃಪಾಲಕ
ಕ್ರೂರರೂಪಾದನು ಪುರಾಕೃತ
ಮಾರಲಾರಳವೆಂದು ನುಡಿದನು ತನ್ನ ಮನದೊಳಗೆ
ತೋರಮಾಣಿಕವೆಂದು ಪಿಡಿದರೆ
ಭೂರಿಕೆಂಡವಿದಾಯ್ತು ಶಿವಶಿವ
ಕ್ರೂರಜಂತುಗಳೊಡನೆ ಸಖತನ ಫಲಿಸಿತೆನಗೆಂದ ೨೨೯

ಮುನ್ನ ಮಾಡಿದ ಕರ್ಮಫಲವಿದು
ಬೆನ್ನ ಬಿಡದಿದೆ ಉರಗಪತಿ ಕೇ
ಳಿನ್ನು ನೋಯಲದೇಕೆ ತಾನೇ ಪಾಪಿಯಾದೆನಲಾ
ಪನ್ನಗಾರಿಧ್ವಜನ ಕೃಪೆ ತನ
ಗಿನ್ನು ತಪ್ಪಿದ ಬಳಿಕ ಲೋಕದೂ
ಳಿನ್ನು ಸ್ಥಿರಿಸಲಾರವಶವೆಂದೆನುತ ಮರುಗಿದನು ೨೩೦

ಏಕೆ ನೃಪತಿ ವೃಥಾ ಮನೋವ್ಯಥೆ
ಕಾಕ ಬಳಸಲು ಬೇಡ ನೀನವಿ
ವೇಕಿಯೇ ಸಾಕಿನ್ನು ನಿನಗುಪಕಾರವಂಜದಿರು
ಲೋಕ ನಿನ್ನನ್ನು ಕಾಣದಂತಿರ
ಬೇಕೆನುತಲೇರಿಸಿದೆ ಗರಳವ
ನೇಕ ಉಪಕಾರಾರ್ಥವಿದರಿಂದಹುದು ನಿನಗೆಂದ ೨೩೧

ಜನಪ ಕೇಳ್ಳೆ ಧರೆಗೆ ಋತುಪ
ರ್ಣನು ಮಹಾರಾಜೇಂದ್ರ ಗುಣನಿಧಿ
ಇನಕುಲಾಂಬುಧಿಚಂದ್ರನಾತನ ಪುರವಯೋಧ್ಯೆಯದು
ನಿನಗೆ ಬಹುದಕ್ಷದ ಹೃದಯುವಾ
ತನಲಿ ನೀನವಗಶ್ವಹೃದಯುವ
ನನುಗೊಳಿಸು ಸಾಕಿನ್ನು ಚಿಂತಿಸಬೇಡ ಹೋಗೆಂದ ೨೩೨

ಪೊಡವಿಪನನೋಲೈಸು ವಾರ್ಷ್ಣೆಯ
ಪಿಡಿದು ಬಾಹುಕನೆಂಬ ನಾಮದಿ
ನಡೆಸು ರಥವನು ಹೀನವೃತ್ತಿಯದಲ್ಲ ನಿನಗಿನ್ನು
ಬಿಡದೆ ಮುನ್ನಿನ ರೂಪು ಬೇಕಾ
ದಡೆ ನೆನೆವುದಾ ಪಕ್ಷಿಗಳ ಹ
ಚ್ಚಡವ ನೀವುವು ಧರಿಸಲಡಗುವುದೀ ಕುರೂಪಿತನ ೨೩೩

ನಿನ್ನ ಹವಣೇಂ ಪೂರ್ವದಲಿ ಭಿ
ಕ್ಷಾನ್ನವನು ಬೇಡಿದನು ಪಶುಪತಿ
ಪನ್ನಗಾರಿಧ್ವಜನು ಕಾದನು ಪಶುಗಳಡವಿಯಲಿ
ಉನ್ನತೈಶ್ವರ್ಯಪ್ರದನು ಶತ
ಮನ್ಯು ಬನದಲಿ ನವೆಯನೇ ಸಾ
ಕಿನ್ನು ಮನನೋಯದಿರು ಚಿತ್ತೈಸೆಂದನುರಗಪತಿ ೨೩೪

ಪರಮ ಸತ್ಯವ್ರತದೊಳಾ ಪು
ಷ್ಕರನ ಗೆಲಿದುನ್ನತದ ರಾಜ್ಯದ
ಸಿರಿ ಮಿಗಿಲು ಸಾಮ್ರಾಜ್ಯವಾಳುವೆ ನಿನ್ನ ಸತಿಸಹಿತ
ವರವನಿತ್ತೆನು ನಿನಗೆ ಎಂದುಪ
ಚರಿಸಿ ಕಾರ್ಕೋಟಕನು ನಳನೃಪ
ಗರುಹುತಾಕ್ಷಣ ಮಾಯವಾದನು ರಾಯ ಕೇಳೆಂದ ೨೩೫

ಬಲಿದ ಚಿಂತೆಯ ಮನದ ದುಗುಡದ
ನಳನೃಪತಿ ಕಾನನದಿ ಬರುತಿರೆ
ಮಲೆತು ತೊಲಗದ ದುಷ್ಟಮೃಗಗಳ ಕಂಡು ನಸುನಗುತ
ಹಲವು ಗಿರಿ ಗುಹೆ ಗಹ್ವರಂಗಳ
ಕಳೆದು ಮುಂದಣ ಜವಪದಂಗಳ
ಬಳಿವಿಡಿದು ನಡೆತಂದನಲಸದೆ ಹಲವು ಯೋಜನವ ೨೩೬

ಹರಿವ ನದಿಗಳ ವನ ತಟಾಕದ
ವರ ಕುಸುಮ ಮಲ್ಲಿಗೆಯ ಬನಗಳ
ಪುರದ ಪ್ರಾಂತ್ಯದೊಳೆಸೆವ ಕೆಂದಾವರೆಯ ಕೊಳಗಳನು
ಉರುತರದ ಮಂಟಪಗಳಿಂದುರೆ
ಮೆರೆವ ರಾಜ್ಯವ ಕಳೆದು ಮುಂದಕೆ
ಬರುತಯೋಧ್ಯಾಪುರವ ಕಂಡನು ನೃಪತಿ ಕೇಳೆಂದ ೨೩೭

ಹೊಳೆವ ಮಿಸುನಿಯ ರತ್ನನಿಚಯದ
ನೆಲೆಯ ಸೌಧಾಗ್ರದಲಿ ನೆರೆ ಪ್ರ
ಜ್ವಲಿಪ ಹೇಮದ ಕಲಶಗಳ ರವಿ ಚಂದ್ರಶಾಲೆಗಳ
ಲಲನೆಯರ ಗಾನದ ವಿನೋದದ
ಹಲವು ಗೋಪುರ ಶಿಖರದಗಣಿತ
ನೆಲೆಯ ವರ್ಣಿಸಲರಿದಯೋಧ್ಯಾಪುರವು ರಂಜಿಸಿತು ೨೩೮

ಬಂದು ಹೊಕ್ಕನು ಪುರವ ಮೆರೆವತಿ
ಚಂದವನು ನೆರೆ ನೋಡಿ ಮನದೊಳ
ಗಂದು ಕೊಂಡಾಡಿದನು ಋತುಪರ್ಣನ ಮಹಾಸಿರಿಯ
ತಂದುದೇ ವಿಧಿ ತನ್ನನಿಲ್ಲಿಗೆ
ಮಂದಭಾಗ್ಯನು ತಾನೆನುತ ಮನ
ನೊಂದು ನೆನೆದನು ವರಪುರಾಧಿಪ ಚೆನ್ನಕೇಶವನ ೨೩೯

ಕೇಳು ಧರ್ಮಜ ರತ್ನನಿರ್ಮಿತ
ದಾಲಯದ ಸೊಬಗಿನಲಿಯೋಲಗ
ಶಾಲೆಯಲಿ ಋತುಪರ್ಣನಿದ್ದನು ಸಿಂಹಪೀಠದಲಿ
ಸಾಲಮಕುಟದ ನೃಪರು ಭೂಸುರ
ಜಾಲ ಮಂತ್ರಿ ಪುರೋಹಿತರು ಗುಣ
ಶೀಲರುತ್ತಮ ಸತಿಯರಿಂದೆಸೆದಿರ್ದುದಾಸ್ಥಾನ ೨೪೦

ಇದು ಸಮಯ ತನಗೆಂದು ನಳನೃಪ
ಮುದದಿ ವೇಷವ ತಾಳ್ದು ಹರಿಯಂ
ದದಲಿ ಬಂದನು ಸಭೆಗೆ ಕಂಡನು ನೃಪಗೆ ಕೈಮುಗಿದು
ಸದಮಲಾಸ್ಥಾನದಲಿ ರಿಪುಭಟ
ಕದನಕಲಿಗಳು ಜೀಯೆನಲು ನಯ
ಹೃದಯದಲಿ ಬಿನ್ನೈಸಿದನು ಋತುಪರ್ಣ ಭೂಪತಿಗೆ ೨೪೧

ಅವನಿಪತಿ ಕೇಳ್ ನಿಮ್ಮ ಪದಕಮ
ಲವನು ಭಜಿಸುವೆ ಜೀಯ ಚಿತ್ತದಿ
ಸವಡಿನುಡಿಯೆನಗಿಲ್ಲ ಬಾಹುಕನೆಂಬುದಭಿಧಾನ
ಭುವನದೊಳು ತಾನಶ್ವಕುಲಹೃದ
ಯವನು ಬಲ್ಲೆನು ಶಾಕಪಾಕದಿ
ಸವಿಗೊಳಿಪ ಸೂವಾರವಿದ್ಯೆಯನರಿವೆ ತಾನೆಂದ ೨೪೨

ಸೂಪಕಾರ್ಯದೊಳಗ್ಗಳನು ಕಡು
ರೂಪಿನವ ತಾನಲ್ಲ ಚಿತ್ತದಿ
ಕಾಪುರುಷನೆನ್ನದಿರು ನೋಡಾ ತನ್ನ ಪೌರುಷವ
ಭೂಪ ಮುಂಗೈಕಂಕಣಕೆ ಕುಲ
ದೀಪ ಕನ್ನಡಿಯೇಕೆ ತರಿಸು ಪ್ರ
ತಾಪವಾಜಿಯನೆಂದು ಬಿನ್ನೈಸಿದನು ನಸುನಗುತ ೨೪೩

ಪೊಡವಿಪತಿ ಋತುಪರ್ಣ ಬಾಹುಕ
ನುಡಿದ ವಚನಕೆ ಮೆಚ್ಚಿ ಮನದು
ಗರುಡದ ತೇಜಿಯ ತರಿಸಿ ಕೊಡಲೇರಿದನು ಬೀದಿಯಲಿ
ಮುಡದ ಸನ್ನೆಗೆ ಕುಣಿದುರವೆಗಾ
ರಿಡುತ ಜೋಡಣೆಯಿಂದ ಹಯವಡಿ
ಗಡಿಗೆ ಚಿಮ್ಮಿತು ವಾಯುವೇಗದೊಳರಸ ಕೇಳೆಂದ ೨೪೪

ಕರದ ವಾಘೆಯ ಸಡಿಲ ಬಿಡೆ ನಿ
ಬ್ಬರದ ಗಮನದೊಳೈದಿತವನಿಯೊ
ಳುರವಣಿಸಿ ಕೆಂಧೂಳಿ ಮುಸುಕಿದುದಂಬರವ ಬಿಡದೆ
ಧರಣಿ ತಲ್ಲಣಿಸಿದುದು ಗಗನದಿ
ಸುರರು ಕೊಂಡಾಡಿದರು ರಾವುತ
ರರಸನಹುದೋ ಭಾಪು ಭಾಪೆಂದುದು ಸಮಸ್ತ ಜನ ೨೪೫

ಮುರುಹಿ ಹಿಡಿಯಲು ಮುಡದ ಸನ್ನೆಗೆ
ತಿರುಗತಿ ವೇಗದಲಿ ಹಯವೋ
ಸರಿಸಿ ಕಿರು ಬೆಮರಿಡಲು ನಿಲಿಸಿದ ವಾರುವವನಿಳಿದು
ಕರವ ಮುಗಿಯಲು ನೃಪತಿ ಮೆಚ್ಚುತ
ತರಿಸಿ ಕೊಟ್ಟನು ಭೂಷಣಂಗಳ
ಹಿರಿದು ಸಂಬಳವಿತ್ತು ನಿಲಿಸಿದನರಸ ಬಾಹುಕನ ೨೪೬

ಅರಸ ಕೇಳಾ ಪುರದೊಳೊಬ್ಬರಿ
ಗರಿಯದಂದದಿ ನಳನಿರಲು ಭೂ
ಸುರರ ಮತದಲಿ ಕೇಳ್ದ ಭೀಮನೃಪಾಲನೀ ಹದನ
ಧರೆಯನೆಲ್ಲವ ಜೂಜಿನಲಿ ಪು
ಷ್ಕರಗೆ ನಳನೃಪ ಸೋತು ಅಡವಿಗೆ
ತರುಣಿ ಸಹ ಹೊರವಂಟನೆನೆ ಹೊರಳಿದನು ಶೋಕದಲಿ ೨೪೭

ಹಾ ಮಗಳೆ ದಮಯಂತಿ ನಿಷಧಸ
ನಾಮನನು ಕೈವಿಡಿದು ಬಾಳುವ
ನೇಮವನು ಬಿಸುಟೆಡವಿಗಟ್ಟಿತೆ ವಿಧಿವಿಕರ್ಮಫಲ
ಭೀಮನೃಪನುದರದಲಿ ಜನಿಸಿ ವಿ
ರಾಮವಾದುದೆ ನಿನ್ನ ಸಿರಿ ಮುಖ
ತಾಮರಸವನು ಕಾಣೆ ತೋರೆಂದರಸ ಹಲುಬಿದನು ೨೪೮

ಬಡವರುದರದೊಳುದಿಸಿ ಸುಖವನು
ಪಡೆಯಲೊಲ್ಲದೆ ಬಂದು ನೀನೀ
ಪೊಡವಿಪತಿಯುದರದಲಿ ಸಂಜನಿಸುವರೆ ಎಲೆ ತಾಯೆ
ಗಿಡುಮೆಳೆಗಳಾರಣ್ಯದಲಿ ತನು
ವಿಡಿದು ಸೈರಿಪುದೆಂತು ಮಗಳೇ
ಸುಡು ತನುವನಿದನೆಂದು ಮರುಗಿದಳವಳ ನಿಜಜನನಿ ೨೪೯

ಸತಿಪತಿಗಳೀ ಪರಿಯ ಶೋಕೋ
ನ್ನತಿಯ ಸೈರಿಸಲಾರದಾ ಮಾ
ರುತನ ಸಖನೊಳು ಪುಗುವೆವೆಂದುರವಣಿಸಿ ನಡೆತರಲು
ಕ್ಷಿತಿಪ ಕೇಳಾಕಸ್ಮಿಕದೊಳಾ
ಯ್ತತಿವಚನವಾಕಾಶದಲಿ ಪತಿ
ವ್ರತೆಗೆ ಹಾನಿಯೆ ಸುಖದೊಳಿಹಳೆಂದುದು ನಭೋನಿನದ ೨೫೦

ಎಂದ ವಾಕ್ಯವ ಕೇಳಿ ಭೂಸುರ
ವೃಂದದಲಿ ಮುನಿಯೋರ್ವ ನುಡಿದನು
ಸಂದ ಪರಮಾನಂದಜ್ಯೋತಿರ್ಮಯನ ವಾಕ್ಯವಿದು
ಇಂದುಮುಖಿ ದಮಯಂತಿ ನಳನೃಪ
ರೆಂದಿಗೂ ಸುಕ್ಷೇಮಿಗಳು ನೀ
ವಿಂದು ಕಳುಹಿಸಿ ಚರರ ಭೇದಿಸಲೆಂದನಾ ಮುನಿಪ ೨೫೧

ಎನಲು ಮುನಿಪನ ಮಾತಿನಲಿ ಅರ
ಮನೆಗೆ ಬಂದು ವಿಶಾಲಚಿಂತೆಯ
ಮನದೊಳಿರೆ ಇನನಿಳಿದನಸ್ತಾಂಬುಧಿಗೆ ವಹಿಲದಲಿ
ಜನಪನಾ ರಾತ್ರಿಯಲಿ ನಿದ್ರಾಂ
ಗನೆಯನುಳಿದಿರೆ ಪೂರ್ವಶೈಲದಿ
ದಿನಪ ತಲೆದೋರಿದನು ಹರೆದುದು ರಜನಿಯಾಕ್ಷಣಕೆ ೧೫೨

ಅರಸ ಕರೆಸಿದನಾಪ್ತರನು ಭೂ
ಸುರರಿಗೆಂದನು ನೀವು ಕರುಣದಿ
ಧರೆಯೊಳೆಲ್ಲಿಹಳೆನ್ನ ಸುತೆ ದಮಯಂತಿ ನಳನೃಪರ
ಇರವ ಕಾಂಬುದು ಕಂಡು ಕರೆತಂ
ದರಿಗೆ ಕೊಡುವೆನು ಧರೆಯೊಳರ್ಧವ
ನಿರುತವೆಂದುಚ್ಚರಿಸಿ ಕಳುಹಿದ ಭೀಮನೃಪನವರ ೧೫೩

ಪುರನಗರ ವೀಥಿಗಳ ಮಧ್ಯದಿ
ನೆರೆದ ಸಭೆಯಲಿ ಮಾರ್ಗದಲಿ ಸಂ
ಚರಿಸುವವರನು ಕಂಡು ಕೇಳುತ ಬಂದರಲ್ಲಲ್ಲಿ
ಇರವ ಕಾಣದೆ ಬಳಲಿ ಚಿಂತಿಸಿ
ಮರುಗುತವನೀಸುರರು ಭೇದಿಸು
ತಿರಲು ಮೂವರು ಬೇರ ಹೊಕ್ಕರು ಚೈದ್ಯನಗರಿಯನು ೧೫೪

ಅಲ್ಲಿ ವಾರ್ತೆಯ ಕೇಳಿದರು ಭೂ
ವಲ್ಲಭನ ಕ್ರತುಸಮಯವೆಂದವ
ರೆಲ್ಲ ಗಮಿಸಲು ಕಂಡು ಮೂವರು ತಾವು ಅವರೊಡನೆ
ನಿಲ್ಲದೈದಿರರಮನೆಗೆ ತಮ
ಗಲ್ಲಿ ದಕ್ಷಿಣೆ ಮೃಷ್ಟ ಭೋಜನ
ವಲ್ಲಿ ಮಿಗಿಲಹುದೆನುತ ಹೊಕ್ಕರು ಯಜ್ಞಮಂಟಪವ ೧೫೫

ಜನಪನವನೀಸುರರ ಮಂತ್ರದೊ
ಳನಿಲಸಖನಾರಾಧಿಸಲು ನೃಪ
ತನುಜೆಯಾದ ಸುನೀತಿಯೊಳು ದಮಯಂತಿ ಭಾವಿಸುತ
ವನಿತೆಯಿರೆ ಕಂಡನು ಸುದೇವನು
ಮನದೊಳನುಮಾನಿಸಿದನೀ ಮಾ
ನಿನಿ ಮಹಾಸತಿಯೆನುತ ವಿಸ್ಮಯಗೊಂಡು ಮನದೊಳಗೆ ೨೫೬

ಮುಗಿಲು ಮುಸುಕಿದ ಚಂದ್ರಬಿಂಬವೊ
ಹಗಲೊಳೆಸೆವ ಸುದೀಪಕಾಂತಿಯೊ
ಹೊಗೆಯೊಳೆಸೆಯುವ ಚಿತ್ರಪ್ರತಿಮೆಯೊ ಹೇಳಲೇನವಳ
ಉಗಿದು ಬಿಸುಟ ವಿಭೂಷಣದ ಮೈ
ಲಿಗೆಯ ಸೀರೆಯ ಮಲಿನ ತನು ಕಳೆ
ದೆಗೆದು ಕೈಗಲ್ಲದಲಿ ನಿಂದಿರೆ ಕಂಡನಾಸತಿಯ ೨೫೭

ಇದು ಪತಿವ್ರತಧರ್ಮವಹುದೀ
ಸುದತಿ ತೊರೆದಿಹಳೆಲ್ಲವನು ನೃಪ
ವಧುವ ಕಾಣಿಸಿಕೊಂಬೆನೆಂದು ಸುದೇವ ನಡೆತಂದು
ಹದನಿದೇನೌ ತಾಯೆ ನಿಮ್ಮಯ
ವದನಕಮಲವು ಬಾಡಿ ಕಡು ಮಾ
ಸಿದ ವಸನದುಡಿಗೆಯಲಿ ನೀವಿಹುದೇನು ಪರಿಯೆಂದ ೨೫೮

ಇಂದುವದನೆ ವಿದರ್ಭಪಟ್ಟಣ
ದಿಂದ ಬಂದೆನು ತಾನು ಭೂಸುರ
ವಂದ್ಯನೆನ್ನಭಿಧಾನ ಕೇಳು ಸುದೇವನೆಂಬುವುದು
ಇಂದು ನಿಮ್ಮನು ನೋಡ ಕಳುಹಿದ
ತಂದೆ ಭೀಮನೃಪಾಲನಾತನ
ನಂದನೆಗೆ ತಾ ಸಖನು ಚಿತ್ತೈಸೆನ್ನ ಬಿನ್ನಪವ ೨೫೯

ಕ್ಷಿತಿಪ ಭೀಮನೃಪಾಲನಾತನ
ಸತಿಸುತರು ಬಾಂಧವ ಸಹೋದರ
ರತಿಶಯರು ನಿಮ್ಮಯ ಕುಮಾರರು ಕುಶಲರಿಂದಿನಲಿ
ಕ್ಷಿತಿಯನಗಲುತ ನಳನೃಪತಿ ನಿಜ
ಸತಿಸಹಿತ ವರಕೈದಿದುದ ಕೇ
ಳುತಲಿ ನಿಮ್ಮವರೆಲ್ಲ ಶೋಕಾಬ್ಧಿಯಲಿ ಮುಳುಗಿಹರು ೨೬೦

ಘೋರತರ ಶೋಕವನು ಸೈರಿಸ
ಲಾರದಾ ಸತಿಪತಿಗಳಿಬ್ಬರು
ಸೋರುತಿಹ ಕಂಬನಿಗಳಲಿ ಕರೆದೆಮ್ಮ ಕಳುಹಿದರು
ಧಾರಿಣಿಯೊಳರಸುತ್ತ ಬಂದೆವು
ವಾರಿಜಾನನೆ ನಿಮ್ಮ ಕಂಡೆವು
ಸೇರಿತೆಮ್ಮಯ ಪುಣ್ಯವೆಂದು ಸುದೇವ ಕೈಮುಗಿದ ೨೬೧

ವನಿತೆ ಕೇಳುತ ಶೋಕಜಲದಲಿ
ನೆನೆದು ಬುಧಕುಲತಿಲಕನನು ಬಾ
ರೆನುತ ಮನ್ನಿಸಿ ತನ್ನವರನಡಿಗಡಿಗೆ ಬೆಸಗೊಳಲು
ವನಿತೆ ನೋಡಿದಳಾ ಸುದೇವನ
ಜನನಿಗರುಹಲು ಬಂದಳಾ ವಿ
ಪ್ರನನು ನೀವಾರೆಂದು ಬೆಸಗೊಳೆ ನುಡಿದನಿಂತೆಂದು ೨೬೨

ಕೇಳು ತಾಯೆ ವಿದರ್ಭಪತಿ ಭೂ
ಪಾಲನಾತ್ಮಜೆ ಪತಿಯೊಡನೆ ತ
ನ್ನಾಲಯುವನುಳಿದು ವನಕೈದಿದಳೆನಲು ನೃಪ ಕೇಳಿ
ತಾಳಲಾರದೆ ನೋಡಿ ಕರೆತರ
ಹೇಳಿ ಕಳುಹಲು ಬಂದೆನಿಲ್ಲಿಗೆ
ಬಾಲೆ ದಮಯಂತಿಯುಳ ಕಂಡೆನೆನ್ನುತ ಕೈಮುಗಿದ ೨೬೩

ಕೇಳಿ ಶಿವಶಿವಯೆನುತ ಶೋಕವ
ತಾಳಿ ತೆಗೆದಪ್ಪಿದಳು ಮಗಳೆ ವಿ
ಟಾಳಿಸಿತೆ ನಿಜರಾಜ್ಯಸಿರಿ ನಿನಗಿಂತು ಬಲುವ್ಯಥೆಯ
ಭಾಳದಲಿ ವಿಧಿ ಬರೆದನೇ ಜನ
ಪಾಲ ನಳನೃಪನೆತ್ತ ಸರಿದನೊ
ಕಾಲಗತಿಯಿಂತಾದುದೇ ಹಾ ಎನುತ ಮರುಗಿದಳು ೨೬೪

ಬಾಲೆ ಬಿಡು ಶೋಕವನು ಭೀಮನೃ
ಪಾಲನರಸಿಗೆ ತಂಗಿ ತಾ ತ
ನ್ನಾಲಯದಿ ಕಡುನೊಂದೆ ಮಗಳೇ ಸಾಕು ನಮ್ಮೊಡನೆ
ವೇಳದಿಹರೆ ಸುನಂದನಿಗೆ ಸಮ
ಪಾಳಿ ನೀನೆಮಗೆಂದು ತಳ್ಕಿಸಿ
ಪಾಲಿಸಿದಳತಿಕರುಣದಲಿ ದಮಯಂತಿಯನು ಜನನಿ ೨೬೫

ಕಿರಿಯ ತಂದೆ ಸುಬಾಹು ಮರುಗಿದ
ವರಕುವರಿ ದಮಯಂತಿ ನಿನ್ನಯ
ಪುರುಷನಿಲ್ಲದೆ ಚಿಂತೆಯಿಂದೆಲ್ಲವನು ನೀ ತೊರೆದು
ಕರಗಿ ಕಂದಿದೆ ಮಗಳೆ ತಾನಿಂ
ತರಿದುದಿಲ್ಲಕಟಕಟ ಪುರುಷನ
ಕರೆಸಿ ಕೊಡಿಸುವೆನಿದಕೆ ಚಿಂತಿಸಬೇಡ ಬಾರೆಂದ ೨೬೬

ತರಳೆ ಬಾರೆಂದೆನುತ ಕಣ್ಣಿನೊ
ಳೊರೆವ ಕಂಬನಿಗಳನು ನರಗಿನೂ
ಳೊರೆಸಿ ದಮಯಂತಿಯನು ಮನ್ನಿಸಿ ಬಂದನೋಲಗಕೆ
ಕರೆಸಿದನು ಭೂಸುರ ಸುದೇವನ
ನಿರುಪಮಿತಭೂಷಣಗಳಿಂದುಪ
ಚರಿಸಿ ಕಳುಹಲು ಬಂದ ಭೀಮನೃಪಾಲನೋಲಗಕೆ ೨೬೭

ಅರಸ ಕೇಳು ವಿದರ್ಭಪತಿ ಮನ
ಮರುಗುತಿರಲಾ ಸಮಯದಲಿ ಭೂ
ಸುರ ಸುದೇವನು ಬಂದು ಕೈಮುಗಿದೆಂದನೀ ಹದನ
ಅರಸುತೆಲ್ಲಿಡೆ ಹೋಗಿ ನಾನಾ
ಪುರವರಂಗಳ ಕಳಿದು ಚೈದ್ಯನ
ಪುರವ ಹೊಕ್ಕೊಡನಲ್ಲಿ ಕಂಡೆವು ನಿನ್ನ ನಂದನೆಯ ೨೬೮

ಕಂಡು ಮಾತಾಡಿದೆನು ಸತಿಯಳ
ಮಂಡೆ ಮಾಸಿದೆ ಮಲಿನ ವಸನದ
ಗಂಡನಗಲಿದ ಚಿಂತೆಯಲಿ ಮುಖ ಬಾಡಿ ದೇಹವನು
ದಂಡಿಸಿದಳನ್ನದಲಿ ಮನ ಮುಂ
ಕೊಂಡುದಾ ಸತಿಗಿನಿಯನನು ನೆರೆ
ಕಂಡು ಹೇಳುವರಾರೆನುತ ಮರುಗುವಳು ಮನದೊಳಗೆ ೨೬೯

ಕೇಳುತರಸನ ವದನಕಾಂತಿ
ಶಾಲವಾದುದು ಮನದಿ ಹರುಷವ
ತಾಳಿ ಹೊಂಪುಳಿವೋಗಿ ಭೀಮನೃಪಾಲ ಕರೆಸಿದನು
ಬಾಲೆಯರ ತನ್ನಾಪ್ತ ಸಚಿವರ
ಮೇಳದಲಿ ನಿಜಸುತೆಯ ಕರೆತರ
ಹೇಳಿ ರತ್ನಾಭರಣಗಳನಿತ್ತವರ ಕಳುಹಿದನು ೨೭೦

ಬಂದರಲ್ಲಿಗೆ ಚೈದ್ಯನೃಪತಿಯ
ನಂದು ಕಾಣಿಸಿಕೊಂಡನವರನು
ಮಂದಿರದ ಸುಕ್ಷೇಮವನು ಕೇಳವರೆ ಪೇಳಿದರು
ಇಂದುಮುಖಿ ದಮಯಂತಿಯನು ಕಳು
ಹೆಂದು ಭೀಮನೃಪಾಲ ಹರುಷದೊ
ಳಿಂದು ನಿಮಗುಡುಗೊರೆಗಳನು ಕಳುಹಿದನು ಕೇಳೆಂದ ೨೭೧

ಅರಸ ಕೇಳು ಸುಬಾಹು ಭೂಪತಿ
ಕರೆಸಿದನು ಮಂತ್ರಿಗಳ ಭೀಮನ
ಪುರಕೆ ಪಯಣವ ಮಾಡಿದನು ದಮಯಂತಿಯನು ಕರೆದು
ತರುಣಿ ನೀ ನಮ್ಮಲ್ಲಿ ತಿಂಗಳು
ಹೊರೆದೆ ದೇಹವ ಕಷ್ಟದಲಿಯೆಂ
ದುರುತರದ ಪ್ರೇಮದಲಿ ಕೊಟ್ಟನು ಸಕಲ ಭೂಷಣವ ೨೭೨

ತರಿಸಿದನು ದಂಡಿಗೆಯೊಳಗೆ ಕು
ಳ್ಳಿರಿಸಿ ಸತಿಯರ ಗಡಣದಲಿ ಮಂ
ದಿರವ ಹೊರವಂಟರಸನೇರಿದ ಗಜದ ಕಂಧರವ
ಮೊರೆವ ವಾದ್ಯದ ರಭಸದಲಿ ಕರಿ
ತುರಗ ರಥ ಕಾಲಾಳ ಸಂದಣಿ
ಯುರವಣಿಸೆ ನಡೆತಂದು ಹೊಕ್ಕ ವಿದರ್ಭ ಪಟ್ಟಣವ ೨೭೩

ದೂತರೈದಿದರೊಸಗೆಯಲಿ ಜನ
ಜಾತ ನಲಿಯ ಲು ಬಂದು ಬೇಗದಿ
ಭೂತಳೇಂದ್ರಗೆ ಕೈಮುಗಿದು ದಮಯಂತಿ ಬಂದಳೆನೆ
ಮಾತ ಕೇಳುತಲೆದ್ದು ಬಲಸಂ
ಗಾತಲೈತಂದವರ ಕಂಡತಿ
ಪ್ರೀತಿಯಿಂ ತಕ್ಕೈಸಿ ಕರೆತಂದನು ನಿಜಾಲಯಕೆ ೨೭೪

ಅವನಿಪತಿ ಕೇಳಾ ಪುರದೊಳು
ತ್ಸವವನದನೇನೆಂಬೆನಂದಿನ
ದಿವಸದೊಳಗರಮನೆಯೊಳಾ ದಮಯಂತಿಯನು ಜನನಿ
ತವಕದಿಂ ಬಿಗಿದಪ್ಪಿದಳು ಬಾಂ
ಧವರು ಸಂತೋಷಿಸಿದನಿಬರು
ಯುವತಿಯರು ನಿಜ ತನಯರಾಲಿಂಗಿಸಿದರಂಗನೆಯ ೨೭೫

ಮಗನ ನೋಡಿದಳಿಂದ್ರಸೇನನ
ತೆಗೆದು ತಕ್ಕೈಸಿದಳು ಕರೆದಳು
ಮಗಳ ಚಂದ್ರಾಸ್ಯವನು ತೊಡೆಯೊಳಗಿಟ್ಟು ಮಮತೆಯ ಲಿ
ಮೊಗವನೀಕ್ಷಿಸಿ ಮೊಲೆಗಳಲಿ ತೊರೆ
ದುಗುವ ಹಾಲಿನ ಜನನಿ ಮಿಗೆ ನೀ
ರೊಗುವ ಕಣ್ಣೀರಿನಲಿ ಸಂತೈಸಿದಳು ನಿಜಸುತರ ೨೭೬

ಕಂತುಪಿತನೊಲುಮೆಯಲಿ ಧರಣೀ
ಕಾಂತ ಭೀಮನೃಪಾಲ ಬಾಂಧವ
ಸಂತತಿಯನಾದರಿಸಿ ಕಳುಹಿದನವರನುಚಿತದಲಿ
ಸಂತತವು ನಿಜಪತಿಯನಗಲಿದ
ಚಿಂತೆಯಲಿ ಮನಗುಂದಿದಳು ದಮ
ಯಂತಿ ನೆನೆಯುತ್ತಿರ್ದಳಾ ವರಪುರದ ಚೆನ್ನಿಗನ ೨೭೭

ಕೇಳಿದೈ ರಾಜೇಂದ್ರ ಧರ್ಮನೃ
ಪಾಲ ತೊರೆದಳು ಸಕಲ ವಿಭವವ
ಧೂಳಿ ಮುಸುಕಿದ ಮಲಿನ ವಸನದ ಮಗಳ ತಾ ನೋಡಿ
ಕೇಳಿದಳು ಪೂರ್ವೋತ್ತರವ ಭೂ
ಪಾಲನವನಿಯನುಳಿದು ನಿನ್ನ ವ
ನಾಲಯದೊಳಿಂತಗಲಿಗನು ಪೇಳೆಂದಳಾ ಜನನಿ ೨೭೮

ಕಪಟದಲಿ ರಾಜ್ಯವನು ಪುಷ್ಕರ
ನಪಹರಿಸಿ ಜೂಜಿನೊಳು ನಳ
ನೃಪತಿ ಸೋತಾರಣ್ಯಕೈದಿದನೊಂದುವಸ್ತ್ರದಲಿ
ಗುಪಿತದಿಂ ಬರೆ ಮುಂದೆ ಪಕ್ಷಿಗ
ಳುಪಮೆಯಲಿ ಕೊಂಡೊಯ್ಯೆ ವಸನವ
ಕೃಪಣತನದಲಿ ತನ್ನ ಸೀರೆಯೊಳೊಯ್ದನರ್ಧವನು ೨೭೯

ಮರೆದು ಮಲಗಿದೆ ರಾತ್ರೆಯಲಿ ಎ
ಚ್ಚರಿಸದೇ ನೃಪ ತೆರಳಿದನು ಕಾ
ತರಿಸಿ ಕಂಬನಿಯೊಳಗೆ ಬಂದೆನು ಚೈದ್ಯನಗರಿಯಲಿ
ಕರುಣಿ ಚಿಕ್ಕಮ್ಮನಲಿ ತಿಂಗಳು
ಹೊರೆದೆನೀ ದೇಹವನು ಇಲ್ಲಿಗೆ
ಕರೆಸಿದಿರಿ ನೀವೆನುತ ಕಂಬನಿದುಂಬಿದಳು ತರಳೆ ೨೮೦

ಪತಿವಿಹೀನೆಗೆ ಸಲುವುದೇ ಸು
ವ್ರತ ಸುಭೋಜನ ಸೌಖ್ಯ ಸುಖ ಸ
ದ್ಗತಿಗಳುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ
ಸತಿಯರಿಗೆ ಪತಿ ದೈವವೆಂದಾ
ಶ್ರುತಿ ವಚನವಾಡುವುದು ತನಗಾ
ಪತಿಯನಗಲಿದ ಬಳಿಕ ಗತಿಯಿಲ್ಲೆಂದಳಿಂದುಮುಖಿ ೨೮೧

ಧರೆಯೊಳೆಲ್ಲಿಹನೋ ವಿಚಾರಿಸಿ
ಕರೆಸಿಕೊಡು ಎಲೆ ತಾಯೆ ಎನ್ನಯ
ಪುರುಷನಿಲ್ಲದ ಬಳಿಕ ಬಿಡುವೆನು ತನುವನೆಂದೆನಲು
ಮರುಗಿದಳು ಮಗಳೆಂದ ಮಾತಿಗೆ
ಕರೆದು ಕಂಬನಿ ತೊಡೆದು ತನ್ನಯ
ಪುರುಷನೊಡನಿಂತೆನಲು ಭೀಮನೃಪಾಲ ಚಿಂತಿಸಿದ ೨೮೨

ಅರಸ ಕೇಳು ವಿದರ್ಭ ಪುರಪತಿ
ಕರೆಸಿದನು ಭೂಸುರರನವರಿಗೆ
ಪರಮ ವಸ್ತುವನಿತ್ತು ಕಳುಹಿದ ನಿಷಧಪತಿಯಿರವ
ಶರಧಿ ಮೇರೆಯೊಳೆಲ್ಲ ಭೇದಿಸಿ
ಕರೆದು ತಾರೆನಲವರು ಬರುತಿರೆ
ಕರೆಸಿದಳು ದಮಯಂತಿಯವರೊಡನೆಂದಳೀ ಮಾತ ೨೮೩

ನಳನೃಪತಿ ನಿಜರಾಜತೇಜವ
ನುಳಿದು ತಾ ಪ್ರತಿರೂಪು ತಾಳಿಹ
ನಿಳೆಯೊಳಗ್ಗದ ಸಭೆಯೊಳಗೆ ನೀವೆಂಬುದೀ ನುಡಿಯ
ಹಳುವದಲಿ ಸತಿಯುಟ್ಟ ಸೀರೆಯ
ಸೆಳೆಯುತರ್ಧವ ಕೊಂಡು ನಾರಿಯ
ಕಳೆದು ಹೋದವರುಂಟೆಯೆನಲುತ್ತರವ ಪೇಳುವನು ೨೮೪

ಆ ನುಡಿಯ ತಂದೆನಗೆ ನೀವನು
ಮಾನವಿಲ್ಲದೆ ಪೇಳೆನುತ ಸ
ನ್ಮಾನದಲಿ ಬೀಳ್ಕೊಟ್ಟಳಂಗನೆ ತೆರಳಿದರು ಬಳಿಕ
ಮಾನವೇಂದ್ರರ ಸಭೆಯ ನೋಡಿ ನಿ
ಧಾನಿಸುತ ನಾನಾ ದಿಗಂತ
ಸ್ಥಾನದಲಿ ನಗರಗಳ ಭೇದಿಸುತೈದಿದರು ಪಥವ ೨೮೫

ಇಳಿಯಮರರಲ್ಲಲ್ಲಿ ಗಿರಿ ವನ
ಗಳ ನಿರೀಕ್ಷಿಸಿ ಕೆಲವು ಋಷಿಗಳ
ನಿಳಯಗಳ ನೋಡುತ್ತ ಕಾನನಗಳೆದು ಬೇಗದಲಿ
ಜಲಧಿಮೇರೆಯ ಮಧ್ಯದಲಿ ಭೂ
ವಳಯವೆಲ್ಲವ ಶೋಧಿಸುತ ತನು
ಬಳಲಿಕೆಯ ಭಾವಿಸದೆ ನಡೆದರು ಮುಂದೆ ಪಥವಿಡಿದು ೨೮೬

ಮುಂದೆ ಬರುತಿರೆ ಕಂಡರೊಬ್ಬನ
ಸಂದಯಾಚಕ ಭೂಸುರನನೆ
ಲ್ಲಿಂದ ಬಂದಿರಿಯೆನಲಯೋಧ್ಯಾನಗರಿಯಿಂದೆನಲು
ಕುಂದದಲ್ಲಿ ವಿಶೇಷವೇನುಂ
ಟೆಂದೆನಲು ಪೇಳಿದನು ತಾನೊಲ
ವಿಂದ ವಿಪ್ರನ ಮಾತಿನಿಂದೈದಿದರಯೋಧ್ಯೆಯನು ೨೮೭

ಮರುದಿವಸ ಋತುಪರ್ಣ ನೃಪತಿಮು
ಖ್ಯರು ಸಹಿತ ಓಲಗದೊಳಿರೆ ಕಂ
ಡರು ಮಹಾ ಸಭೆಯೊಳಗೆ ಹೊಕ್ಕರು ನಿಂದು ಕೈ ನೆಗಹಿ
ಹಿರಿಯರಿದೆ ಸಾಮಾಜಿಕರು ಸ
ಚ್ಚರಿತರಿದೆಲಾ ಕೇಳಿ ನೀವೆಂ
ದುರುತರದ ಗಂಭೀರವಾಕ್ಯದೊಳೆಂದನಾ ವಿಪ್ರ ೨೮೮

ಹಳುವದಲಿ ಬಂದಲಸಿ ಮಲಗಿದ
ಕುಲಸತಿಯ ವಸನದೊಳಗರ್ಧವ
ಕಳೆದುಕೊಂಡೊಯ್ದಗಲಿ ಹೋದವರುಂಟೆ ರಾತ್ರಿಯಲಿ
ಇಳೆಯನಾಳುವ ನೃಪರ ಸತ್ಯದ
ಬಳಕೆಗಿದು ಲೇಸಲ್ಲವೆನೆ ಮನ
ವಳುಕಿ ನಸುನಗೆಯಿಂದ ನುಡಿದನು ಒಲಿದು ಬಾಹುಕನು ೨೮೯

ಕ್ಷಿತಿಯಮರರೆಲ್ಲಿಂದ ಬಂದಿರಿ
ಸತಿಯನಗಲಿದ ಬಾಹಿರನು ನಿಜ
ಪತಿಯೆ ಸಾಕಂತಿರಲಿ ಬಿಡು ಋತುಪರ್ಣನೋಲಗದಿ
ಅತಿಶಯದ ನುಡಿಗೇಳ್ದ ವಕಟಾ
ಸತಿಗೆ ವಂಚನೆಯಲ್ಲವಗು ನಿಜ
ಪತಿಗೆ ಕೊರತೆಯದೆಂದು ಸೂಚಿಸಿ ನುಡಿದ ವಿಪ್ರರಿಗೆ ೨೯೦

ಈತನಾರು ಕುರೂಪಿ ನೈಷಧ
ನೀತನೋ ಸಭೆಯೊಳಗೆ ತಾನೀ
ಮಾತನಾಡಲದೇಕೆ ಸಂಶಯವೇನು ಮನದೊಳಗೆ
ಖ್ಯಾತರಾಲೋಚಿಸುತ ಬಂದರು
ಭೂತಳಾಧಿಪ ಭೀಮನೃಪಸಂ
ಜಾತೆಯನು ಕಂಡೆರಗಿ ಕೈಮುಗಿದೆಂದರೀ ಹದನ ೨೯೧

ದೇವಿಯರು ಚಿತ್ತೈಸುವುಸು ಭುವ
ನಾವಳಿಗಳೆಲ್ಲವನು ನೋಡಿದ
ನಾವು ಮುಂದೈತರಲು ಕಂಡೆವಯೋಧ್ಯನಗರಿಯನು
ಭೂವರನ ಋತುಪರ್ಣರಾಯನ
ಸೇವೆಯಲಿ ಕುರೂಪಿಯೋರ್ವನು
ಜೀವಸಖನಾತಂಗೆ ಬಾಹುಕನೆಂಬ ನಾಮದಲಿ ೨೯೨

ತುರಗ ನಿಕರದ ಶಿಕ್ಷೆಯಲಿ ಮಂ
ದಿರದ ಬಾಣಸಿತನದ ಕೆಲಸದಿ
ನೆರೆ ನಿಪುಣನೆಂದೆನಿಸಿಕೊಂಡಿಹ ನೃಪನ ಸಭೆಯೊಳಗೆ
ಪರುಠವಿಸಿ ನೀವೆಂದ ಮಾತನು
ವರಸಭಾ ಮಧ್ಯದಲಿ ನುಡಿಯಲು
ಇರದೆ ತಾನೀ ಮಾತನೆಂದನು ನಗುತ ಬಾಹುಕನು ೨೯೩

ಸತಿಗೆ ವಂಚನೆಗೈದ ಪತಿ ತಾ
ವಿಕಳಮತಿಯಂತಿರಲಿ ಭೂಸುರ
ಪತಿಯೆ ಕೇಳಾ ಸತಿಗೆ ಭಂಗವೆ ಪತಿಗೆ ಕೊರತೆ ಕಣ
ಪತಿವ್ರತವನಾಚರಿಸುವಳು ನಿಜ
ಪತಿಯ ಗುಣದೋಷಗಳನೆಣಿಪಳೆ
ಗತಿಗೆ ಕಾರಣ ಸತ್ಯವೇ ಸತಿಗೆಂದಸನ ನಗುತ ೨೯೪

ಎನಲು ತಲೆದೂಗಿದಳು ಈ ಮಾ
ತಿನಲಿ ಸಂಶಯವಿಲ್ಲದಿಹುದೆಂ
ದೆನುತ ಕಂಬನಿದುಂಬಿದಳು ದಮಯಂತಿ ಮನದೊಳಗೆ
ಇನಿಯನಹುದಾತನ ಪರೀಕ್ಷೆಗೆ
ನೆನೆಯಬೇಕೊಂದನುವನೆಂದಾ
ವನಿತೆ ತಂದೆಯನುಜ್ಞೆಯಲಿ ಕರೆದಳು ಸುದೇವನನು ೨೯೫

ಇಳೆಯಪುರ ಬಾರೆಂದು ವಿವರವ
ತಿಳುಹಿ ಪಯಣವ ಮಾಡಿ ಕಳುಹಲು
ಹೊಳಲ ಹೊರವಂಟನು ಸುದೇವನು ಹಲವು ಯೋಜನವ
ಕಳೆದು ಬರುತಿರೆ ಮುಂದೆ ಕಂಡನು
ಲಲಿತ ರತ್ನಪ್ರಭೆಯ ಗೋಪುರ
ಹೊಳೆವಯೋಧ್ಯಾಪುರವನೀಕ್ಷಿಸಿ ಹೊಕ್ಕನರಮನೆಯ ೨೯೬

ಇಟ್ಟ ಘಣೆಯೊಳಗೆಸವ ಮುಟ್ಟಿಯ
ತೊಟ್ಟ ಹೊಸ ಯಜ್ಞೋಪವೀತದ
ಕಟ್ಟಿಯಿರುಕಿದ ಕಕ್ಷಪಾಳದ ಬೆರಳ ಜಪಸರದ
ಉಟ್ಟ ಭಾಸುರ ಬಳಲುಗಚ್ಚೆಯ
ಸೃಷ್ಟಿಗಚ್ಚರಿ ರೂಪಿನಲಿ ಪರ
ಮೇಷ್ಠಿಯಂದದಿ ಬಂದನವ ಋತುಪರ್ಣನೋಲಗಕೆ ೨೯೭

ಆರು ನೀವೆಲ್ಲಿಂದ ಬಂದಿರಿ
ದೂರದೇಶದ ಮಹಿಮರಿಳೆಯೊಳು
ಕಾರಣಗಳೇನುಂಟು ಅಲ್ಲಿ ವಿಶೇಷವೇನೆನಲು
ಭೂರಮಣ ಕೇಳವನಿಯಲಿ ಸಂ
ಚಾರಿಸುತ ಬಂದೆವು ವಿದರ್ಭಕೆ
ಭೂರಿನೃಪರೈತರುತಲಿದೆ ಚತುರಂಗ ಬಲಸಹಿತ ೨೯೮

ದೇಶ ದೇಶದ ಯಾಚಕರು ಧರ
ಣೀಶರುನ್ನತ ತುರಗ ಗಜ ರಥ
ಭೂಸುರರು ಮಂತ್ರಿಗಳು ದೈವಜ್ಞರು ಸುಗಾಯಕರು
ಭಾಸುರದ ತೇಜದಲಿ ಜನಸಂ
ತೋಷದಲಿ ನಡೆತರುತಲಿದೆ ಹರಿ
ವಾಸುದೇವನೆ ಬಲ್ಲ ದಮಯಂತಿಯ ಸ್ವಯಂವರವ ೨೯೯

ಶಯನದಲಿ ಮಲಗಿದ ಸತಿಯನಡ
ವಿಯಲಿ ನಳನೃಪನಗಲಿ ಹೋದನು
ನಯವಿಹೀನಳಿಗಾಗಿ ರಚಿಸಿದರಾ ಸ್ವಯಂವರವ
ಪಯಣ ನಿಮಗುಂಟೇಗಳೆನೆ ನೃಪ
ಬಯಸಿ ಹೆಣ್ಣಿನ ಮೋಹದಲಿ ವಾ
ಜಿಯ ವರೂಥಕೆ ಹೂಡ ಹೇಳಿದ ಕರಸಿ ಬಾಹುಕನ ೨೦೦

ಹೈ ಹಸಾದವೆನ್ನುತ ವಂದಿಸಿ
ಬಾಹುಕನು ಮಂದಿರಕೆ ಬಂದು ವಿ
ವಾಹವುಂಟೇ ಮರಳಿ ದಮಯಂತಿಗೆ ಜಗನ್ನಾಥ
ಈ ಹದನವಾರಿಂದಲಾದುದೊ
ದ್ರೋಹಿಯಾ ದಮಯಂತಿ ಇದು ಸಂ
ದೇಹವಾಗಿದೆಯೆನುತ ಚಿಂತಿಸಿ ಬಂದನರಮನೆಗೆ ೨೦೧

ಲಾಯದೊಳಗುತ್ತಮವ ತೇಜಯ
ನಾಯ್ದು ಹೂಡಿದ ರಥಕೆ ಸೇರಿಸಿ
ವಾಯುವೇಗದ ತೇರ ನಿಲಿಸಿದ ತಂದು ನೃಪನೆಡೆಗೆ
ರಾಯನೇರಲು ಕರಿತುರಗರಥ
ಪಾಯದಳ ಸಂದಣಿಸಿಮುದು ನೆಲ
ಬಾಯ ಬಿಡೆ ಹೊರಹೊಂಟ ನೃಪ ಘನವಾದ್ಯರಭಸದಲಿ ೨೦೨

ಜನಪನೆಂದನು ಬಾಹುಕಗೆ ಪೂ
ರ್ವನಿಯನೀಕ್ಷಿಸಬೇಕು ನಿಲ್ಲದು
ಮನವಿದೊಂದೇ ದಿನಕೆ ನಡೆಸು ವಿದರ್ಭಪುರವರಕೆ
ಎನಲು ನಕ್ಕನು ಮನದೊಳಗೆ ತ
ನ್ನಿನಿಯಳಿಗೆ ವಿಧಿ ಬರೆದನೇ ಶಾ
ಸನವ ವಿಾರುವರಾರೆನುತ ಮರುಗಿದನು ನಳನೃಪತಿ ೨೦೩

ಕರೆದ ವಾಘೆಯ ಸಡಿಲ ಬಿಡೆ ಮುಂ
ಬರಿದು ಚಿಮ್ಮಿದವಡಿಗಡಿಗೆ ರಥ
ತರುಗ ಹಾಯ್ದುದು ತೇರು ಮುಂದಕೆ ಪವನವೇಗದಲಿ
ಭರದೊಳ್ಳೈತರೆ ನೃಪನ ಹಚ್ಚಡ
ಧರೆಗೆ ಬೀಳಲು ಸಾರಥಿಯನೆ
ಚ್ಚರಿಸಿದನು ಋತುಪರ್ಣನಿದಕಿನ್ನೇನು ಹದನೆನುತ ೨೦೪

ಜೀಯ ಚಿತ್ತೈಸುರವಣಿಸಿ ನಿ
ರ್ದಾಯದಲಿ ಹಿಂದುಳಿದುದಂಬರ
ವಾಯುಗತಿಯಲಿ ದಾಂಟಿ ಬಂದೆವು ಹಲವು ಯೋಜನವ
ಹೋಯಿತಾ ಮಾತೇಕೆ ನಡೆಯೆನೆ
ರಾಯ ಮೆಚ್ಚಿನ ಸಾರಥಿಯ ಬಿರು
ದಾಯಕನು ನೀನೆಂದು ಕೊಂಡಾಡಿದನು ಬಾಹುಕನ ೨೦೫

ಮುಂದೆ ಕಂಡನು ಬರುತಲಡವಿಯೊ
ಳೊಂದು ತಾರೆಯ ಮರನನದರೊಳು
ಸಂದ ಫಲಪರ್ಣಂಗಳೆಣಿಸದೆ ಸೂತ ಪೇಳೆನಲು
ಇಂದೆನಗೆ ಮತಿದೋರದವನಿಪ
ಕುಂದದೆನಗಿದ ಪೇಳು ನೀನೆನ
ಗೆಂದಡಾ ಸಾರಥಿಗೆ ಲೆಕ್ಕವನರುಹಿದನು ನೃಪತಿ ೨೦೬

ಇಳಿದು ರಥವನು ಬಂದು ವೃಕ್ಷದ
ಬಳಿಗೆ ನಿಂದಾ ಶಾಖೆಗಳಲಿಹ
ಫಲವದರ ಪರ್ಣಂಗಳೆಣಿಸಿದ ಪದ್ಮಸಂಖ್ಯೆಯಲಿ
ಒಲಿದು ಲೆಕ್ಕವ ಕಂಡು ತಾ ಮನ
ನಲಿದು ನಳನೃಪ ಪುಷ್ಕರನ ತಾ
ಗೆಲುವ ಹದನಾಯ್ತೆನುತ ಬರೆ ಕಲಿಪುರುಷನಿದಿರಾದ ೨೦೭

ಎಲೆ ನೃಪಾಲಕ ನಿನ್ನ ಸತ್ಯದ
ನೆಲೆಯನೀಕ್ಷಿಸಬೇಕನುತ ಬಂ
ದಳಲಿಸಿದೆ ಹಿರಿದಾಗಿ ನೋಯದಿರಿನ್ನು ಚಿತ್ತದಲಿ
ತೊಲಗಿದೆನು ಇಂದಿನಲಿ ಶುಭ ಮಂ
ಗಳಕರವು ನಿನಗಪ್ಪುದೆನಲಾ
ನಳನೃಪತಿ ಖತಿಗೊಂಡು ಶಾಪವ ಕೊಡದೆ ಮನ್ನಿಸಿದ ೩೦೮

ಮಾನವಾಧಿಪ ಕೇಳು ಲೋಕಕೆ
ದೀನಜನ ಬಾಂಧವನು ನಳನೃಪ
ಕಾನನದೊಳವನತ್ತ ಕಳುಹಿಸಿ ಬಂದು ರಥವೇರಿ
ಆ ನರೇಂದ್ರಗಶ್ವಹೃದಯವ
ತಾನರುಹಿ ಆತನಲಿ ಪಡೆದನು
ಸಾನುರಾಗದಿ ಭೂರುಹದ ಹೃದಯವನು ನಿಮಿಷದಲಿ ೩೦೯

ಕರೆದ ವಾಘೆಯ ಕೊಂಡು ನೃಪಗೆ
ಚ್ಚರಿಸಿ ನೂಕಿದ ತೇಜಿಗಳ ಹೂಂ
ಕರಿಸಿ ಮನ ಮೊಂಕೊಂಡು ಹಾಯ್ದುದು ಬಿಟ್ಟ ಸೂರಿಯಲಿ
ಭರದ ಗಮನವನೇನನೆಂಬೆನು
ನೆರೆದ ಜನವಲ್ಲಲ್ಲಿ ನಿಂದುದು
ಹರಹರಾ ಸಾರಥಿಗೆ ಸರಿಯಾರರಸ ಕೇಳೆಂದ ೩೧೦

ತುರಗ ಹೇಷಾರವದ ಗಾಲಯ
ಘರಘುರದ ಚಿತ್ಕೃತಿಯ ಸಾರಥಿ
ಯುರವಣೆಯ ರಥದಚ್ಚುಗಳ ಝೇಂಕಾರದ ನಾದದಲಿ
ಭರದಿ ಕೆಂದೂಳಿಡುತ ಬರಲಾ
ಪುರಜನರು ಸಂದಣಿಸಿ ನೋಡಲು
ಪರಿಚರರು ಬಂದಾ ವಿದರ್ಭನೃಪಾಲಗರುಹಿದರು ೩೧೧

ಬಂದನೇ ಋತುಪರ್ಣನೆನುತಾ
ನಂದದಿಂ ಕರೆಸಿದನು ಸಚಿವರ
ಮಂದಿಯನು ಕಳುಹಿಸಲು ಕರೆತಂವರು ನಿಜಾಲಯಕೆ
ಸಂಪಣಿಯು ಪರಿಹರಿಸಿ ನೃಪ ಮುದ
ದಿಂದ ಬೇರರಮನೆಯೊಳುಲುವೆಗ
ಳಿಂದಯೋಧ್ಯಾಪತಿಯ ಸತ್ಕರಿಸಿದನು ಭೀಮನೃಪ ೩೧೨

ಕೇಳಿದಳು ದಮಯಂತಿ ವಾರ್ತೆಯ
ತಾಳಿದಳು ಹರುಷವನು ಮನದಲಿ
ಭಾಳಲೋಚನನಿಂದ ಫಲಿಸಿತು ಪುಣ್ಯವೆನಗಿಂದು
ಬಾಲೆ ಕೇಳೆನಗಿಂದು ಶೋಕ
ಜ್ವಾಲೆ ಪರಿಹರವಾಯ್ತು ಮಂಗಳ
ದೇಳಿಗೆಯು ಪಸರಿಸಿತು ಶುಭಕರವೆಂದಳಂದುಮುಖಿ ೩೧೩

ಓಲಗವನಿತ್ತನು ವಿದರ್ಭ ನೃ
ಪಾಲ ಕರೆಸಿದ ಮಂತ್ರಿ ಬಾಂಧವ
ಜಾಲವನು ಋತುಪರ್ಣ ಬಂದನು ಬಾಹುಕನು ಸಹಿತ
ಸಾಲಮಣಿ ಪೀಠದಲಿ ಕುಳ್ಳಿರೆ
ಬಾಲೆಯರ ಸಂಗೀತ ನೃತ್ಯದ
ಕೇಳ ಮೇಳದಿ ರಂಜಿಸಿತು ಭೂಪಾಲನಾಸ್ಥಾನ ೩೧೪

ಖಿನ್ನನಾದನು ಚಿತ್ತದಲಿ ಋತು
ಪರ್ಣ ಭೂಸುರನಂದ ಮಾತಿನ
ಬಿನ್ನಣಕೆ ಮರುಳಾಗಿ ಬಂದನು ಮೂಢನಾದೆನಲ
ಭಿನ್ನವಿಲ್ಲದೆ ಕೊಂಡ ನಾಚಿಕೆ
ಗಿನ್ನು ಹದನೇನೆನುತ ಗುಣಸಂ
ಪನ್ನ ಮರುಗಿದ ತನ್ನ ಮನದ ದುರಂತಚಿಂತೆಯಲಿ ೩೧೫

ನಾರಿಯರ ಮರೆಗೊಂಡು ಸಭೆಯಲಿ
ಸಾರಥಿಯ ಕುಬ್ಜಾವತಾರವ
ನೋರೆಗಣ್ಣಿನೊಳೀಕ್ಷಿಸುತ ದಮಯಂತಿ ಮನದೊಳಗೆ
ಆರಿವನು ನಳನೃಪನ ಪೋಲುವ
ಚಾರು ಚಿಹ್ನೆಗಳಿಲ್ಲ ತೋರ್ಕೆ ವಿ
ಕಾರವಾಗಿದೆ ರೂಪೆನುತ ಚಿಂತಿಸಿದಳಿಂದುಮುಖಿ ೩೧೬

ಒರೆದೊರೆದು ನೋಡಿದಳು ಸೂತನ
ಸಿರಿಮೊಗದ ಕಾಂತಿಯನು ಕಳೆಗುಂ
ದಿರುವ ಕಾಯವ ಕಪ್ಪಿನಿಂದುದಿರಿರ್ದ ರೋಮದಲಿ
ಪರಿಕಿಸಲ್ಕೀರೂಪು ಕೈಕೊಂ
ಡಿರುವನೇ ನಳನೃಪನು ಶಿವ ಶಿವ
ಮುರಹರನು ತಾ ಬಲ್ಲನೆಂದುಮ್ಮಳಿಸಿದಳು ತರಳೆ ೩೧೭

ಹರೆದುದೋಲಗವಲ್ಲಿ ನಿಜಮಂ
ದಿರಕೆ ಬಂದಾಲೋಚಿಸುತ ಮಿಗೆ
ತರುಣಿಯರ ಕಳುಹಿಸಲು ಬಂದರು ಬಾಣಸಿನ ಮನೆಗೆ
ಇರವ ಕಂಡರು ಪಾಕದಲಿ ಕೈ
ಕರಣವನು ನೆರೆ ಸೂಪಕಾರನ
ಪರಿಯ ಹೊಗಳುತ ಬಂದು ಬಿನ್ನೈಸಿದರು ಭಾಮಿನಿಗೆ ೩೧೮

ತಾಯೆ ಚಿತ್ತೈಸಿನ್ನವನ ಕರ
ಣಾಯತವನೇನೆಂಬೆ ಲೋಕದ
ಸ್ತ್ರೀಯರೊಳಗಿನಿತಿಲ್ಲ ರಚಿಸುವ ಶಾಕಪಾಕದಲಿ
ಮಾಯವಿದು ತಾ ತಿಳಿಯಲರಿಯದು
ಪಾಯದಿಂದೀಕ್ಷಿಸಲು ಸಕಲ ರ
ಸಾಯನವು ಪರಿಪಕ್ವವಾಗಿದೆ ಪೇಳಲರಿದೆಮಗೆ ೩೧೯

ದಾದಿಯರು ಬಾಹುಕನ ಗುಣಗಳ
ಭೇದಿಸಿದರೊಂದೊಂದು ಬಗೆಯ ತ
ಳೋದರಿಗೆ ಬಿನ್ನೈಸೆ ನಿಶ್ಚೈಸಿದಳು ದಮಯಂತಿ
ಆನಡವ ನಳನಹುದು ಗುಣದಲಿ
ಭೇದಿಸುವೆನಿನ್ನೊಮ್ಮೆಯೆನುತ ವಿ
ನೋದದಿಂದಾಡುವ ಕುಮಾರರ ಕರೆಸಿದಳು ತರುಣಿ ೩.೨೦

ತರಳರಿಗೆ ನೀರೆರೆದು ಕಾಂಚನ
ವರದುಕೂಲವ ತೊಡಿಸಿ ದಿವ್ಯಾ
ಭರಣ ಭೂಷಿತರಾದ ತನಯರ ದಾದಿಯರ ಕೈಯ್ಯ
ಪಿಡಿದು ಕಳುಹಲು ಬಾಣಸಿನ ಮಂ
ದಿರದ ಬಾಗಿಲ ಮುಂದೆ ಬಿಡೆ ಸಂ
ಚರಿಸಿ ಸುಳಿದಾಡುವರ ಕಂಡನು ನೃಪತಿ ಹರುಷದಲಿ ೩.೨೧

ತರಳರನು ಪಿಡಿದೆತ್ತಿ ತೊಡೆಯೊಳ
ಗಿರಿಸಿ ಮುದ್ದಾಡಿದನು ಮಕ್ಕಳ
ಸುರಿವ ಕಂಬನಿಗಳಲಿ ಬಾಹುಕ ಮರುಗುತಿರಲಂದು
ಮರೆಯ ಜಾಲಂಧ್ರದಲಿ ಕಂಡಳು
ತರುಣಿ ನಳ ನೃಪನೀತನಹುದೆಂ
ದುರುತರದ ಪ್ರೇಮದಲಿ ಬಂದಳು ಜನನಿಯರಮನೆಗೆ ೩.೨೨

ತಾಯೆ ಸಂಶಯವಿಲ್ಲ ನೈಷಧ
ರಾಯನೀತನು ಸೂತನಲ್ಲ ವಿ
ಡಾಯದಲಿ ಬಂದಿಹನು ನೋಡು ಕುರೂಪಿವೇಷದಲಿ
ರಾಯರೊಳಗಗ್ಗಳಿಯ ನಳ ನೃಪ
ಮಾಯವನು ತೋರಿಹನು ಇವನ ನಿ
ಜಾಯತವ ನಾ ಬಲ್ಲೆ ಕರೆಸೆಂದಳು ಸರೋಜಮುಖಿ ೩.೨೩

ಧರಣಿಪನ ಮತದಿಂದಲಾತನ
ಕರೆಸಿದಳು ನೃಪನರಸಿ ಬಾಹುಕ
ನಿರದೆ ಬಂದನು ರಾಜಮಂದಿರದಲ್ಲಿ ಕುಳ್ಳಿರಲು
ತರಳೆ ಮಾಸಿದ ಸೀರೆಯಲಿ ಗರ
ಗರಿಕೆ ತಪ್ಪಿದ ಚೆಲುವಿನಲಿ ನಿಂ
ದಿರಲು ಕಂಡನು ಸತಿಯ ತಲೆಬಾಗಿದನು ಲಜ್ಜೆಯಲಿ ೩.೨೪

ಮುನ್ನ ಮಾಡಿದ ಕರ್ಮಫಲ ಋತು
ಪರ್ಣನಲಿ ಸೇವೆಯನು ಮಾಡುವ
ಮನ್ನಣೆಯಲಿ ಬಂದುದೇ ಮಿಗೆ ಸಾರ್ವಭೌಮರಿಗೆ
ತನ್ನ ಪುಣ್ಯದ ಹಾನಿ ತಾನಿದ
ಕಿನ್ನು ಮಾಡುವುದೇನು ಗುಣಸಂ
ಪನ್ನ ರಕ್ಷಿಸು ಸತಿಯನೆಂದೆರಗಿದಳು ಪದಯುಗಕೆ ೩.೨೫

ತುರುಬ ಹಿಡಿದೆತ್ತಿದನು ಸತಿಯಳ
ಸುರಿವ ಕಂಬನಿ ತೊಡೆದು ನುಡಿದನು
ಬರಿದೆ ಚಿಂತಿಸಲೇಕೆ ಮಾನಿನಿ ಬಿಡು ಮನೋವ್ಯಥೆಯ
ಅರಿಯದವಳೇ ನೀನು ಲೋಕದ
ಸರಸಿಜಾಕ್ಷಿಯರೆಲ್ಲರಿಗೆ ನೀ
ಗುರುವಲಾ ಬರಿದೆನ್ನ ಬಯಸಲು ಬೇಡ ಹೋಗೆಂದ ೩.೨೬

ವಿನಯಹೀನನು ತಾನು ಮನದಲಿ
ನೆನೆದು ತಪ್ಪಿದ ನಿರ್ದಯನು ಕಾ
ನನದಿ ನಿನ್ನನು ಬಿಸುಟು ಕಳೆದ ದುರಾತ್ಮ ಬಾಹಿರನ
ನೆನೆವರೇ ಬಿಡು ಮರಳೆ ನಿನಗಿಂ
ದಿನಲಿ ಮಾಳ್ಪ ಪುನಸ್ಸ್ವಯಂವರ
ಮನಕೆ ಸರಿಬಂದವನ ನೀನೊಲಿಸೆಂದನಾ ನೃಪತಿ ೩.೨೭

ಎನಲು ಕರ್ಣಂಗಳಿಗೆ ಸಬಳದ
ಮೊನೆಗಳರಿದಂತಾಗೆ ಸತಿ ಕ
ಣ್ಣಿನಲಿ ತುಂಬಿದಳುದಕವನು ಹರ ಹರ ಶಿವಾ ಎನುತ
ಎನಗೆ ಇನ್ನು ಪುನಸ್ಸ್ವಯಂವರ
ಮನದೊಳುಂಟೇ ನೀವು ಬರಬೇ
ಕನುತ ವಾರ್ತೆಯ ಕಲ್ಪಿಸಿದೆ ಕೇಳೆಂದಳಿಂದುಮುಖಿ ೩೨೮

ನಂಬಿದೆನು ಲೇಸಾಗಿ ಮನದೊಳ
ಗಿಂಬುಗೊಂಡುದು ವಿಕೃತ ರೂಪಿನ
ಡೊಂಬಿಯೇಕಿದು ಸಕಲ ಧರ್ಮವಿಚಾರವಂತರಿಗೆ
ಅಂಬುಜಾಕ್ಷನ ರೂಪಿನಲಿ ಪ್ರತಿ
ಬಿಂಬವಲ್ಲವೆ ನೀವು ಬಯಲಾ
ಡಂಬರದ ನುಡಿಯೇಕೆ ಸಾಕಿನ್ನೆಂದಳಿಂದುಮುಖಿ ೩೨೯

ನೋಯೆ ನೊಂದಿಹ ಸತಿಯನಾಡಲು
ನ್ಯಾಯವೇನಿದು ನಿನಗೆ ಕೇಳೆಲೆ
ರಾಯ ನಿನ್ನನು ನೋಡ ಕಳುಹಿದೆ ಚರರ ದಿಕ್ಕಿನಲಿ
ಮಾಯರೂಪಿದ ಕಾಣಲರಿಯದೆ
ಬಾಯಬಿಡುತ್ತಿರಲಿನ್ನಯೋಧ್ಯೆಯ
ರಾಯನಲಿ ನೂತನದ ಸಾರಥಿಯೆಂದು ಕೇಳಿದೆನು ೩೩೦

ಆಗ ಭೂಸುರಪತಿ ಸುದೇವನ
ಬೇಗಲಟ್ಟಿದೆ ನಿಮ್ಮ ಬಳಿಗೆ ಸ
ರಾಗದಿಂದುತ್ತರಕೆ ಪ್ರತ್ಯುತ್ತರವ ಪೇಳ್ದಿರಲ
ಈಗಳಿದು ಸಂಶಯವೆ ತಾನದ
ಕಾಗಿ ಕರೆಸಿ ಸ್ವಯಂವರವ ನಿಮ
ಗಾಗಿ ಪೇಳಿದೆನಿದರ ತಪ್ಪೇನೆಂದಳಿಂದುಮುಖಿ ೩೩೧

ಜನನುತನೆ ಕೇಳಾದಿಯಲಿ ಯೌ
ವನವ ನಿನಗೊಪ್ಪಿಸಿದೆನಲ್ಲದೆ
ತನುಮನೋವಾಕ್ಕಾಯಕರ್ಮಂಗಳಲಿ ತಾನೆರಡ
ನಿನಗೆ ನೆನೆದವಳಲ್ಲ ನೀನೇ
ಎನಗೆ ಗತಿಯೆಂದಿಹುದನರಿಯೆಯಾ
ಜನಪ ರಕ್ಷಿಸು ಕೈವಿಡಿದು ಸಲಹೆಂದಳಿಂದುಮುಖಿ ೩೩೨

ಇದಕೆ ಯಮವರುಣಾನಿಲೇಂದ್ರರು
ಮದನಜನಕನೆ ಸಾಕ್ಷಿಯೆನೆ ನೋ
ಘದಲಿ ನುಡಿದನು ವಾಯು ನಳನೃಪನೊಡನೆ ಸತ್ಯವನು
ಚದುರ ಕೇಳ್ ದಮಯಂತಿ ಲೋಕದ
ಸುದತಿಯೇ ತಿಳಿ ಲೋಕಪಾವನೆ
ಇದಕೆ ಸಂಶಯವೇಕೆ ಪಾಲಿಸು ಸತಿಯ ನೀನೆಂದು ೩೩೩

ಪವನನಾಡಿದ ನುಡಿಯ ಕೈಕೊಂ
ಡವನಿಪತಿ ಬಿನ್ನೈಸಿದನು ಕೈ
ತವದೆ ಕಲಿಯಿಂದ ನೊಂದೆನು ನಿಮ್ಮ ದರುಶನದಿ
ಬವಣೆ ಹಿಂಗಿ ಕೃತಾರ್ಥನಾದೆನು
ಎನಗೆಯಿನ್ನೇನೆನುತ ಪಕ್ಷಿಯ
ಹವಣ ಮನದಲಿ ನೆನೆಯೆ ಬಂದುದು ದಿವ್ಯಮಯವಸನ ೩೩೪

ಧರಿಸಿದನು ನಳನಾ ದುಕೂಲವ
ಪರಿಹರಿಸಿತಾ ರೂಪು ಮುನ್ನಿನ
ಪರಮತೇಜದ ದಿವ್ಯತನುವಿನೊಳೆಸೆದು ರಂಜಿಸಲು
ಸುರರ ದುಂದುಭಿ ಮೊಳಗೆ ಮಲ್ಲಿಗೆ
ಯರಳ ಮಳೆ ಸೂಸಿದವು ಗಗನದಿ
ಸುರಮುನಿಗಳಕ್ಷತೆಯ ತಳಿದರು ಹರಸಿ ನಳನೃಪನ ೩೩೫

ಸುರರು ಕೊಂಡಾಡಿದರು ಯಮುಭಾ
ಸ್ಕರ ವಿರಿಂಚಾದಿಗಳುಲಿಯೆ ವರ
ತರುಣಿ ಬಂದೆರಗಿದಳು ಪತಿಯಂಘ್ರಿಯಲಿ ದಮಯಂತಿ
ಹರುಷದಲಿ ಬಿಗಿದಪ್ಪಿದನು ಭೂ
ಸುರರು ಸಂಭ್ರಮಿಸಿದರು ವರಪುರ
ದರಸ ಚೆನ್ನಿಗರಾಯ ಸಲಹಿದನವರ ಕರುಣದಲಿ ೩೩೬

ಕೇಳು ಪಾಂಡುಕುಮಾರ ನಳಭೂ
ಪಾಲನಭ್ಯುದಯವನು ಮಂಗಳ
ದೇಳಿಗೆಯನೇನೆಂಬೆ ದಮಯಂತಿಯ ಮಹೋತ್ಸವವ
ಲೀಲೆಯಲಿ ಮಜ್ಜನವ ಮಾಡಿ ದು
ಕೂಲ ಮಣಿಭೂಷಣವ ಧರಿಸಿ ಥ
ಡಾಳಿಸುವ ಕಾಂತಿಯಲಿ ಸಿಂಹಾಸನದಿ ಕುಳ್ಳಿರ್ದ ೩೩೭

ಬಂದು ಕಂಡುದು ನಿಖಿಳ ಪುರಜನ
ವಂದು ಕಾಣಿಕೆಗೊಟ್ಟು ಮುದದಲಿ
ಸಂದಣಿಸೆ ಋತುಪರ್ಣ ಬಂದನು ಮಂತ್ರಿಜನ ಸಹಿತ
ಸಂದ ಮಣಿ ಕಾಂಚನ ಸುವಸ್ತುವ
ತಂದು ಸಮುಖದೊಳಿರಿಸಿ ವಿನಯದಿ
ನಿಂದು ಬಿನ್ನೈಸಿದನು ಕರಗಳ ಮುಗಿದು ನಳನೃಪಗೆ ೩೩೮

ರೂಢಿಯಲಿ ನಾ ನಿಮ್ಮನರಿಯದ
ಮೂಢಮತಿಯವಿವೇಕಿ ತುರಗವ
ಹೂಡಿದಾಗಲೆ ರಥಕೆ ಅಡಿಗೆಯೊಳರಿದೆನೇ ತಾನು
ಮಾಡಿದಪರಾಧಗಳನೊಂದನು
ನೋಡಲಾಗದು ಚಿತ್ತದಲಿ ಖಯ
ಖೋಡಿಯಿಲ್ಲದೆ ಸಲಹಬೇಕೆಂದೆರಗಿದನು ಪದಕೆ ೩೩೯

ಈ ಪರಿಯೊಳಿನಲಾ ನೃಪನ ಸಂ
ತಾಪವನು ಪರಿಹರಿಸಿ ನಳನೃಪ
ತಾ ಪಿರಿದು ಮಣಿಭೂಷಣಂಗಳನಿತ್ತು ನಸುನಗುತ
ಕೋಪವೆನಗಿಲ್ಲೆಂದಯೋಧ್ಯಾ
ಭೂಪನನು ಮನ್ನಿಸುವ ಸಮಯದಿ
ತಾಪಸೋತ್ತಮರರಸ ಬಂದನು ನಗುತ ಮೈತ್ರೇಯ ೩೪೦

ಬಂದ ಮುನಿಗವನೀಶ ಚರಣ
ದ್ವಂದ್ವದಲಿ ಚಾಚಿದನು ಮಕುಟವ
ನಂದು ಪಿಡಿದೆತ್ತಿದನು ನಸುನಗುತಲ್ಲಿ ಕುಳ್ಳಿರ್ದು
ಎಂದನೆಲೆ ನಳನೃಪತಿ ನಿಮಗೆ ಮು
ಕುಂದನೊಲವು ಸದಾವಕಾಲದಿ
ಸಂದಿರಲು ಇನ್ನಾವುದರಿದಿಲ್ಲೆಂದನಾ ಮುನಿಪ ೩೪೧

ಕಲಿಪುರುಷನಿಂದಾದುದುಪಹತಿ
ಲಲನೆ ಪುತ್ರರನಗಲಿ ಕಷ್ಟವ
ಬಳಸಿದೆಯಲಾ ನೊಂದು ಸತ್ಯವ ಬಿಡದೆ ಸಂಚರಿಸಿ
ಸುಲಭನಾದೆ ಕುಲಾಂಗನೆಯ ವ್ರತ
ಫಲದ ಪುಣ್ಯೋದಯದಿ ನಿಜಸಿರಿ
ಫಲಿಸಿತಿನ್ನೀಲೋಕದೊಳು ನಿನಗಾರು ಸರಿಯೆಂದ ೩೪೨

ಎಲ್ಲ ನೃಪರಂತಲ್ಲ ಲಕ್ಷ್ಮೀ
ವಲ್ಲಭನ ಪ್ರತಿಬಿಂಬ ನಿನ್ನಲಿ
ನಿಲ್ಲಬಲ್ಲನೆ ಕಲಿಪುರುಷನತಿಬೇಗ ತೆರಳಿದನು
ಸಲ್ಲಲಿತ ಸಾಮ್ರಾಜ್ಯ ಪದವಿಂ
ದೆಲ್ಲ ನಿನಗಹುದೆಂದು ಧರಣೀ
ವಲ್ಲಭನ ಸತ್ಕರಿಸಿ ಕೊಂಡಾಡಿದನು ಮೈತ್ರೇಯ ೩೪೩

ಎಂದು ಹರಸಿದವನನವನಿಪಗೆ ಮುದ
ದಿಂದ ಮಂತ್ರಾಕ್ಷತೆಗಳಲಿ ಮುನಿ
ವೃಂದ ಸಂತೋಷಿಸಿತು ನೃಪ ಸಿಂಹಾಸನದೊಳಿರಲು
ಇಂದುವದನೆಯರಾರತಿಯ ನಲ
ವಿಂದಲೆತ್ತಿರದಲ್ಲಿ ಸತಿಯರು
ಸಂದಣಿಸಿ ಪಾಡಿದರು ಶೋಭಾನವನು ಮನವೊಲಿದು ೩೪೪

ಅರಸ ಕೇಳು ವಿದರ್ಭಪತಿ ಮುನಿ
ವರರನುಪಚರಿಸಿದನು ಧರಣೀ
ಸುರರಿಗಿತ್ತನು ಗೋಹಿರಣ್ಯಫಲಾದಿ ದಾನವನು
ಕರೆಸಿಕೊಟ್ಟನು ನೃಪತಿ ಸಕಲಾ
ಭರಣಗಳ ಕರಿತುರಗರಥವನು
ಪುರಜನರ ಸಂತೈಸಿ ಕಳುಹಿದನಖಿಳ ಬಾಂಧವರ ೩೪೫

ಹರೆದುದೋಲಗವಲ್ಲಿ ಯಾಚಕ
ವರರು ಕೊಂಡಾಡಿದರು ಧರಣೀ
ಶ್ವರರು ಕಳುಹಿಸಿಕೊಂಡು ಹೊಕ್ಕರು ತಮ್ಮ ನಗರಿಗಳ
ಮರುದಿವಸ ಋತುಪರ್ಣ ನಳನೃಪ
ಗೆರಗಿ ಕಳುಹಿಸಿಕೊಂಡಯೋಧ್ಯಾ
ಪುರವ ಹೊಕ್ಕನು ಚೈದ್ಯಭೂಪತಿ ಮರಳಿದನು ಪುರಕೆ ೩೪೬

ಇಂದುಮುಖಿ ದಮಯಂತಿಯೊಡನಾ
ನಂದದಲಿ ನಳನೃಪತಿ ಮಾವನ
ಮಂದಿರದೊಳೊರ್ಬರಿಸವಿದ್ದನು ಸಕಲ ವಿಭವದಲಿ
ಹಿಂದುಗಳೆಯದೆ ನಿಷಧಪುರಿಗಾ
ವಿಂದು ಗಮಿಸಲುಬೇಕೆನುತ ನಳ
ನಂದು ಭೀಮನೃಪಾಲನೊಡನಾಲೋಚಿಸಿದ ಹದನ ೩೪೭

ದಂಡು ನಡೆಯಲಿ ನಿಷಧನಗರಿಗೆ
ಭಂಡನಹ ಪುಷ್ಕರನ ಮಾತೇ
ನಂಡಲೆದು ಫಲವಿಲ್ಲ ಸಾಕಿನ್ನೇಳಿಯೆಂದೆನುತ
ಮಂಡಲಾಧಿಪನೆನಲು ಭೂಪರ
ತಂಡವೆದ್ದುದು ಕೂಡೆ ಭಟರು
ದ್ದಂಡ ಕೈದುವ ಕೊಂಡು ನಡೆದರು ನಳನ ಸನ್ನಿಯಲಿ ೩೪೮

ತುರಗ ಹಲ್ಲಣಿಸಿದುದು ರಥ ಮೋ
ಹರಿಸಿ ತೆರಳಿತು ಸಂಗರಕೆ ಮದ
ಕರಿಗಳಿಟ್ಟಣಿಸಿದವು ಕಾಲಾಳಿರದೆ ಸಂದಣಿಸಿ
ನೆರೆದುದಗಣಿತ ಸೈನ್ಯ ಸಾಗರ
ಮೊರೆವವೊಲ್ ಗಂಭೀರ ಭೇರಿಗ
ಳುರವಣಿಸೆ ಹೊರವಂಟ ನಳನೃಪನರಸ ಕೇಳೆಂದ ೩೪೯

ದಾಳಿಯಿಟ್ಟರು ಹರಿದು ದಿಕ್ಕಿನ
ಮೂಲೆಯವರಂಜಿದರು ಮುಮ್ಮೊನೆ
ಯಾಳು ಕವಿದುದು ಹಿಡಿದುದಗ್ಗದ ಸಿರಿಯ ಸೂರೆಗಳ
ಕೇಳಿದನು ಪುಷ್ಕರನು ನಿಷಧನ
ದಾಳಿ ಬರುತಿದೆ ಎನಲು ಖತಿಯಲಿ
ಕಾಳಗಕ್ಕನುವಾಗೆ ನೃಪತಿಗೆ ನುಡಿದ ಮಂತ್ರೀಶ ೩೫೦

ಅರಿಭಯಂಕರ ನೈಷಧನ ಸಂ
ಗರದಿ ಗೆಲುವವರಾರು ದೇವಾ
ಸುರರು ನಿಲಲರಿದರಸ ಮಿಕ್ಕಿನ ನರರ ಪಾಡೇನು
ಮರಳುತನ ಬೇಡಿನ್ನು ನೃಪನನು
ಕರೆಸಿ ಸಂಧಿಯ ಮಾಡಿ ಜೂಜಿನ
ಪರಮ ಪಂಥದಿ ಗೆಲುವುದುಚಿತವಿದೆಂದನಾ ಮಂತ್ರಿ ೩೫೧

ಎನಲು ಕೇಳ್ದಾ ಮಾತಿನಲಿ ಬಂ
ದನು ನಳನ ಕಂಡನು ಮಹೀಪತಿ
ಎನಗೆ ನಿಮ್ಮಲಿ ಕದನವೇತಕೆ ಸಾಕದಂತಿರಲಿ
ಜನಪತಿಗಳೀಕ್ಷಿಸಲಿ ಮರು ಜೂ
ಜಿನಲಿ ನಿಪುಣರು ನಾವು ನಿಮ್ಮಲಿ
ಮನಕೆ ಹರುಷಿತವಾಗಲಾಡುವೆನೆಂದ ನಸುನಗುತ ೩೫೨

ಎಲವೊ ಕೇಳಿನ್ನಾದುದಾಗಲಿ
ಕಲಹಕಂಜುವೆ ನೀನು ಜೂಜಿನ
ಬಳಕೆಯಲಿ ಬಲ್ಲಿದನು ನಮ್ಮನು ಕರೆದೆ ತಪ್ಪೇನು
ಕಲಹವಾಗಲಿ ಜೂಜದಾಗಲಿ
ಗೆಲುವೆ ನಿನ್ನನು ಕುಟಿಲ ಹೃದಯದ
ನೆಲೆಯ ಬಲ್ಲೆನು ನಿನಗೆ ಮನವೊಲಿದುದನು ಮಾಡೆಂದ ೩೫೩

ಅರಸ ಕೇಳಾ ಪುಷ್ಕರನು ತ
ನ್ನರಮನೆಗೆ ಕರೆತಂದನಾ ಕಲಿ
ಪುರುಷನಿಂದಲಿ ಮುನ್ನ ಗೆಲಿದಗ್ಗಳಿಕೆಯಲಿ ನೃಪನ
ಪಿರಿದು ತಾ ಗೆಲಬಲ್ಲೆನೆಂದಾ
ಪ್ತರನು ಕರೆಸಿದನೋಲಗದಿ ಕು
ಳ್ಳಿರಲು ತಂದರು ಸಾರಿಗಳ ನಿಲಿಸಿದರು ಸಮ್ಮುಖದಿ ೩೫೪

ನಳನೃಪತಿ ನೀ ಗೆಲಿದಡೀ ಭೂ
ಲಲನೆಯನು ತಾ ಬಿಡುವೆ ಸೋತರೆ
ಬಳಿಕ ದಮಯಂತಿಯನು ನನಗೊಪ್ಪಿಸುವುದೆಂದೆನಲು
ಇಳಿಯೊಳಿಹ ಭೂರುಹದ ಹೃದಯದ
ನೆಲೆಯ ಬಲ್ಲಗ್ಗಳಿಕೆಯಲಿ ತಾ
ಗೆಲುವೆನೆಂದೊಪ್ಪಿದನು ಮನದಲಿ ಧೈರ್ಯಪರನಾಗಿ ೩೫೫

ಹೊಡಿದರು ಸಾರಿಗಳ ನೆತ್ತವ
ನಾಡಿದರು ಮನ ನಲಿದು ಖಾಡಾ
ಖಾಡಿಯಲಿ ದುಗ ಬಾರ ಇತ್ತಿಗನೆಂಬ ರಭಸದಲಿ
ಬೇಡಿದರೆ ಬೀಳುವುದು ದಾಯದ
ರೂಢಿ ಜಳುಪಿಸೆ ಹೊಳೆವ ದಾಳದ
ರೂಢಿಗಚ್ಚರಿಯಾಗೆ ನಳನೃಪ ಗೆಲಿದು ಬೊಬ್ಬಿರಿದ ೩೫೬

ಖಿನ್ನನಾದನು ಪುಷ್ಕರನು ಹರು
ಷೋನ್ನತಿಯ ಬೀಳ್ಕೊಡಲು ಗುಣಸಂ
ಪನ್ನನೇರಿದ ರತ್ನಸಿಂಹಾಸನವ ನಳನೃಪತಿ
ಪನ್ನಗಾರಿಧ್ವಜನ ಕೃಪೆ ನಿನ
ಗಿನ್ನು ಸಿದ್ಧಿಸಲೆಂದು ಮುನಿಜನ
ರುನ್ನತದಿ ಕೊಂಡಾಡಿ ಹರಸಿದರಲ್ಲಿ ನಳನೃಪನ ೩೫೭

ದೇವದುಂದುಭಿ ಮೊಳಗಿದುದು ದಿವಿ
ಜಾವಳಿಗಳಭ್ರದಲಿ ಸಂಧಿಸಿ
ಹೂವಿನಲಿ ಮಳೆಗರೆದರಾ ನೃಪನುತ್ತಮಾಂಗದಲಿ
ಕೋವಿದರು ಸುಜನಾವನೀಶರು
ಸೇವಿಸಲು ಧರೆ ನಲಿಯೆ ನೃಪ ರಾ
ಜೀವಲೋಚನನಂತೆ ಸಿಂಹಾಸನದಿ ರಂಜಿಸಿದ ೩೫೮

ನಲವು ಹಿಂಗದ ಪುಷ್ಕರನ ಮನ
ವೊಲಿದು ಮನ್ನಿಸಿ ಕರೆದು ನಳನೃಪ
ಕಲಿಪುರುಷನಿಂದಾದುಪಹತಿ ನಿನ್ನ ತಪ್ಪೇನು
ಹಲವ ಹಂಬಲಿಸದಿರು ನಿನ್ನಲಿ
ಛಲವು ನಮಗಿನಿತಿಲ್ಲ ಮುನ್ನವೊ
ಲಿಳೆಯ ಪಾಲಿಸು ನಮ್ಮ ನೀನೋಲಗಿಸು ಹೋಗೆಂದ ೩೫೯

ಎನಲು ಲಜ್ಜಿತನಾಗಿ ಪುಷ್ಕರ
ವಿನಯದಲಿ ತಾನೆರಗಿ ನಿಮ್ಮಡಿ
ವನಜದೆಡೆಗಪರಾಧಿಯಾದೆನಗಾವ ಗತಿಯಹುದೊ
ಜನಪ ಸಲಹು ಕೃತಘ್ನನನು ಸ
ಜ್ಜನ ಶಿರೋಮಣಿ ನೀನು ಗುಣ ಹೀ
ನನನು ಕೃಪೆಯಲಿ ರಕ್ಷಿಸೆಂದೆರಗಿದನು ಪದಯುಗಕೆ ೩೬೦

ತನುವ ಸೈಗೆಡೆದಿಹನನೆಬ್ಬಿಸಿ
ಜನಪನೆಂದನು ಪೂರ್ವಫಲ ಸಂ
ಜನಿಸಿತಿದಕಿನ್ನಾರು ಮಾಡುವುದೇನು ಎನುತವನ
ವಿನಯವಚನಕೆ ಮೆಚ್ಚಿಕೊಟ್ಟನು
ಕನಕ ಮಣಿ ಭೂಷಣಗಳನು ಕಾಂ
ಚನವರೂಥವನಿತ್ತು ಮನ್ನಿಸಿ ಕಳುಹಿದನು ಮನೆಗೆ ೩೬೧

ಚಿಂತೆ ಬಲಿದು ವಿದರ್ಭದಲಿ ದಮ
ಯಂತಿ ಕೆಳದಿಯರೊಡನೆ ನುಡಿದಳು
ಪಂತದಲಿ ಪುಷ್ಕರನ ಗೆಲಿದನೋ ಸೋತನೊ ನೃಪತಿ
ಕಂತುಪಿತನ ಕೃಪಾವಲೋಕನ
ವೆಂತಹುದೊ ತನಗೆಂಬ ಸಮಯದ
ಲಂದು ಕಾತರದಲ್ಲೈತಂದರಲ್ಲಿಗೆ ನಳನ ಮಂತ್ರಿಗಳು ೩೬೨

ತಾಯೆ ಬಿನ್ನಹವಿಂದು ನಮ್ಮನು
ರಾಯನಟ್ಟಿದ ನಿಮ್ಮ ಬಳಿಗೆ ನಿ
ರಾಯಸದಿ ಪುಷ್ಕರನ ಗೆಲಿದನು ಸಕಲ ರಾಜ್ಯವನು
ನ್ಯಾಯದಲಿ ಕೈಗೊಂಡು ನಿಮ್ಮನು
ಪ್ರೀಯದಿಂ ಬರಹೇಳಿದನು ಕಮ
ಲಾಯತಾಂಬಕಿ ಬಿಜಯಮಾಡೆಂದೆರಗಿದರು ಪದಕೆ ೩೬೩

ಕೇಳಿ ಹರುಷಿತೆಯಾದಳವರಿಗೆ
ಪಾಲಿಸಿದಳಾಭರಣವಸ್ತ್ರವ
ಲೋಲಲೋಚನೆ ಬಂದು ತಂದೆಗೆ ನಮಿಸಿ ವಿನಯದಲಿ
ನಾಳೆ ಪಯಣವ ಮಾಡಿ ನಿಷಧನೃ
ಪಾಲನಲ್ಲಿಗೆ ತನ್ನ ಕಳುಹೆನೆ
ಬಾಲಕಿಯ ನುಡಿಗೇಳಿ ತೆಗೆದಪ್ಪಿದನು ಭೀಮನೃಪ ೪೭೪

ತೆಗೆಸಿದನು ಭಂಡಾರದಲಿ ಬಗೆ
ಬಗೆಯ ವಸ್ತ್ರುವ ಸುಭಟರಿಗೆ ಝಗ
ಝಗಿಪ ಹೊನ್ನಾಯುಧವ ನವರತ್ನಗಳ ತೊಡಿಗೆಗಳ
ಸುಗುಣೆಯರು ಮೊದಲಾದ ಪರಿವಾ
ರಗಳಿಗಿತ್ತನು ಪಯಣದಲಿ ತೇ
ರುಗಳ ಶೃಂಗರಿಸಿದರು ಬಿರುದಿನ ಸಿಂಧುಗಳ ನೆಗಹಿ ೩೭೫

ಬಂದಳಾ ದಮಯಂತಿ ದೇವ ಮು
ಕುಂದ ರಕ್ಷಿಸುಯೆನುತ ತನ್ನಯ
ನಂದನರ ಸಹಿತೇರಿದಳು ಮಣಿಮಯವರೂಥವನು
ಹಿಂದೆ ಮುಂದಿಕ್ಕೆಲದೆ ನಾರೀ
ವೃಂದ ನಡೆಯಲು ಮನದ ಹರ್ಷಾ
ನಂದದಲಿ ನಡೆತಂದು ಹೊಕ್ಕಳು ನಿಷಧಪಟ್ಟಣವ ೩೭೬

ಹರಕೆಗಳ ಕೈಗೊಳುತ ಸತಿ ಬಂ
ದರಮನೆಯ ಹೊಕ್ಕಳು ನೃಪಾಲನ
ಚರಣಕಮಲಕೆ ನಮಿಸಿ ಪಡೆದಳು ಪತಿಯ ಚಿತ್ತವನು
ಅರಸ ಕೇಳೈ ನಿಷಧಪತಿ ನಿಜ
ತರುಣಿಸುತರೊಡಗೂಡಿ ಮಂಗಳ
ಕರದೊಳೊಪ್ಪಿದ ಸಕಲ ದೇವಾಸುರರು ನಲಿದಾಡೆ ೩೭೭

ಪರಮ ಪುಣ್ಯೋದಯನು ಸದ್ಗುಣ
ಭರಿತ ಸತ್ಯಸುಭೂಷಿತನು ಸಂ
ಗರ ಸುಧೈರ್ಯವನು ನಿತ್ಯನಿರ್ಮಲ ನಿಗಮಕೋವಿದನು
ಅರಸುಕುಲ ಪಾವನನು ನಳಭೂ
ವರನು ಸಿಂಹಾಸನದಿ ರಂಜಿಸಿ
ಧರೆಯನಾಳಿದ ವರಪುರದ ಚೆನ್ನಿಗನ ಕರುಣದಲಿ ೩೬೮

ಮೇದಿನಿಯೊಳೀ ಪುಣ್ಯಚರಿತೆಯ
ನಾದರದಿ ಬರೆದೋದಿ ಕೇಳುವ
ಸಾಧುಸಜ್ಜನರಾದವರಿಗಹುದಖಿಳ ಕೈವಲ್ಯ
ವೇದಗೋಚರ ಕೃಷ್ಣ ವರಪುರ
ದಾದಿಕೇಶವನಮರವಂದಿತ
ನಾದಿನಾರಾಯಣನು ಸಲಹುವನಖಿಳ ಸಜ್ಜನರ ೩೬೯

ಶ್ರೀರಾಮ ಸಹಾಯಂ

# ರಾಮಧಾನ್ಯ ಚರಿತ್ರೆ

ಶ್ರೀ ರಮಾಪತಿ ಸಿಂಧುಶಯನ ಮು
ರಾರಿ ಮುನಿಕುಲ ಪೂಜಿತಾಂಘ್ರಿ ಸ
ರೋರುಹಾಕ್ಷ ಸುದರ್ಶನಾಂಕಿತ ದೇವ ಭವದೂರ
ಮಾರಪಿತ ಕೌಸಲಾದೇವಿ ಕು
ಮಾರ ರಘುಕುಲ ರಾಮನೃಪ ವರ
ಪೌರ ಚನ್ನಿಗರಾಯ ಪಾಲಿಸು ಸಕಲ ಸಜ್ಜನರ ೧

ಗಿರಿಜೆಯರಸನ ಭಜಿಸಿ ಲಕ್ಷ್ಮೀ
ವರನ ಪಾದಾಂಬುಜಕೆ ವಂದಿಸಿ
ಕರಿಮುಖನ ಬಲಗೊಂಡು ಗೀರ್ವಾಣಿಗೆ ನಮಸ್ಕರಿಸಿ
ಗುರುವಿನಂಘ್ರಿಗೆ ನಮಿಸಿ ಸತ್ಕವಿ
ವರರ ಮನದಲಿ ನೆನೆದು ವರಪುರ
ದರಸನನು ಕೊಂಡಾಡಿ ಪೇಳುವೆನೀ ಮಹಾಕಥೆಯ ೨

ರಾಮಧಾನ್ಯದ ಕೃತಿಯನೀ ಜನ
ಸ್ತೋಮವೆಲ್ಲಾದರಿಸುವುದಂದದಿ
ಭೂಮಿಗಚ್ಚರಿಯಾಗಿ ಪೇಳುವೆನೀ ಮಹಾಕಥೆಯ
ಪ್ರೇಮದಿಂದಾದರಿಸಿ ಕೇಳ್ದ ಸ
ನಾಮರಿಗೆ ಸತ್ಕರುಣದಲಿ ರಘು
ರಾಮ ಪಾಲಿಸಿಕೊಡುವ ಮನದಲಿ ಇಷ್ಟಸಂಪದವ ೩

ಧರೆಯನೆಲ್ಲವ ಸೋತು ಜೂಜಲಿ
ಕುರುಪತಿಗೆ ಕೈದಳಿಸಿ ತಮ್ಮಂ
ದಿರು ಸಹಿತ ಧರ್ಮಜನು ಕಾಮ್ಯಕವನದೊಳಿರುತಿರಲು
ಪರಮಋಷಿ ಶಾಂಡಿಲ್ಯಮುನಿ ಸ
ತ್ಕರುಣದಲಿ ನಡೆತಂದನಲ್ಲಿಗೆ
ವರ ತಪೋಧನರೊಡನೆ ಕಾಣಿಸಿಕೊಂಡನು ಚಿತದಲಿ ೪

ಧರಣಿಪತಿ ಯಮಸೂನು ತಮ್ಮಂ
ದಿರು ಸಹಿತಲಿದಿರೆದ್ದು ಮುನಿಪನ
ಚರಣಕಾನತನಾಗಿ ಕೈಮುಗಿದಿರಲು ಧರ್ಮಜನ
ಕರೆದು ಲಾಲಿಸಿ ಕುಳ್ಳಿರಿಸಿ ಸ
ತ್ಕರುಣದಲಿ ಮುನಿ ನುಡಿದನೆಲೆ ನೃಪ
ಸಿರಿ ದರಿದ್ರತೆ ನಿಲದು ಪರಿಹಾರವಹುದು ಕೇಳೆಂದ ೫

ದೇವಋಷಿಗಳು ನಿಮ್ಮ ಕರುಣಾ
ಭಾವವೆಮ್ಮಲ್ಲಿರಲು ನಮಗಿ
ನ್ನಾವ ಕಷ್ಟದ ಬಳಕೆದೋರದು ನಿಮ್ಮ ದರುಶನದಿ
ಪಾವನರು ನಾವಾದೆವೆಮಗಿ
ನ್ನಾವ ಬುದ್ಧಿಯನರುಹುವಿರಿಯದ
ನೀವು ಪೇಳೆನೆ ನಸುನಗುತ ಮುನಿನಾಥನಿಂತೆಂದ ೬

ಧಾರುಣಿಯೊಳರಸುಗಳು ನಾಲ್ವರು
ಭೂರಿ ಸತ್ಯವ್ರತರು ನಳನೃಪ
ಧೀರರಾಮ ಯುಧಿಷ್ಠಿರ ಹರಿಶ್ಚಂದ್ರರಿವರೆಂದು
ದೂರುತಿದೆ ಜಗವೆಲ್ಲ ನಿಮ್ಮನು
ದಾರನಿದರೊಳು ರಘುಪತಿಯ ಗುಣ
ಹಾರ ಧರ್ಮವ ಪಾಲಿಸಿದ ನರೆದಲೆಗ ವ್ರೀಹಿಯರಿಗೆ ೭

ಎನಲು ರಾಮಚರಿತ್ರೆಯನು ನೀ
ನೆನಗೆ ಪೇಳಿದಡಾಲಿಸುವೆನೆನೆ
ಮನದೊಳಗೆ ತಾ ನಸುನಗುತ ಶಾಂಡಿಲ್ಯನು ಯುಧಿಷ್ಠಿರಗೆ
ಅನುನಯದೊಳಾದರಿಸಿ ರಘುನಂ
ದನನ ಚರಿತೆಯನರುಹಿ ಭೂಪನ
ಮನಸಿನಲ್ಲಿರುವಂತೆ ವಿಸ್ತರಿಸಿದ ಮಹಾಕಥೆಯ ೮

ಕೇಳು ಕುಂತೀತನಯ ಗಂಗಾ
ಕೂಲದುತ್ತರಭಾಗದಲಿ ವಿ
ಶಾಲ ವಿಭವದೊಳೆಸೆವಯೋಧ್ಯಾನಗರವಾ ಪುರವ
ಪಾಲಿಸುವ ದಿನಕರ ಕುಲಾನ್ವಯ
ಶೀಲ ದಶರಥನಾ ಮಹೀಲೋ
ಲಲೋಚನೆ ಕೌಸಲ್ಯದೇವಿಯ ಸೀಮೆಸ್ಥಳದಲ್ಲಿ ೯

ದಶರಥಗೆ ಕೌಸಲೆಗೆ ಜನಿಸಿದ
ರಸಿಕ ಗುಣನಿಧಿ ರಾಮನೃಪನಾ
ಅಸುರೆ ತಾಟಕಿಯೊರಸಿ ಮಾರೀಚನ ಸುಬಾಹುವನು
ಕುಸುರಿದರಿದಾ ಮುನಿಮುಖವ ರ
ಕ್ಷಿಸಿಯಹಲ್ಯಾ ಶಾಪವನು ಖಂ
ಡ್ರಿಸಿ ನಿಜಾನುಜ ಮುನಿಪ ಸಹಿತಾ ಮಿಥಿಲೆಗೈದಿದನು ೧೦

ಹರನ ಧನುವೇರಿಸಿದ ಸೀತೆಯ
ವರಮುಹೂರ್ತದ ವರಿಸಿ ತಮ್ಮಂ
ದಿರು ನಿಜಾಂಗನೆ ಸಹಿತ ಮಿಥಿಲಾಪುರದ ಹೊರವಂಟ
ಬರುತ ಮಾರ್ಗಾಂತರದಿ ಕಂಡನು
ಪರಶುರಾಮನ ಗೆಲಿದಯೋಧ್ಯಾ
ಪುರವ ಹೊಕ್ಕನು ರಾಜತೇಜದಿ ಸುರರು ನಲಿದಾಡೆ ೧೧

ಕೇಳು ಧರ್ಮಜ ನಿಮ್ಮವೋಲ್ ವಿಪಿ
ನಾಲಯದ ಸಿರಿ ಸಂಭವಿಸೆ ಜನ
ಪಾಲ ರಾಮನು ಪಿತೃವಚನ ಪಾಲನೆಯ ನೇಮದಲಿ
ಜಾನಕಿಯನೊಡಗೊಂಡು ಸತ್ಯವ
ಪಾಲಿಸುತ ಲಕ್ಷ್ಮಣನ ಕೂಡೆ ನಿ
ಜಾಲಯವ ಹೊರವಂಟು ಹೊಕ್ಕನು ಘೋರಕಾನನವ ೧೨

ಭರತನನು ಸಂತೈಸಿ ಕಾಕಾ
ಸುರನ ಪ್ರಾಣವ ಕಾಯ್ದು ದಾನವ
ತರುಣಿ ನಾಸಿಕವರಿದು ಮಾಯಾಮೃಗವ ಸಂಹರಿಸಿ
ಸರಸಿಜಾಕ್ಷಿಯನಗಲಿ ಮಾರ್ಗಾಂ
ತರದಿ ಕಂಡ ಜಟಾಯುವನು ಮನ
ಮರುಗಿ ವೃತ್ತಾಂತವನು ತಿಳಿದವನಲ್ಲಿ ಗತಿಗೊಳಿಸಿ ೧೩

ಅಲ್ಲಿ ಶೋಕೋದ್ರೇಕದಲಿ ಕರ
ಪಲ್ಲವದ ಕದಪಿನಲಿ ಊರ್ಮಿಳೆ
ವಲ್ಲಭನನೊಡಗೊಂಡು ಕಿಷ್ಕಿಂಧಾದ್ರಿಗೈತಂದು
ಅಲ್ಲಿ ಸಂಭಾಷಿಸಿದ ರವಿಸುತ
ನಲ್ಲಿ ವಾಲಿಯ ಮಡುಹಿ ವಾನರ
ರೆಲ್ಲರನು ಕೈಕೊಂಡು ನಡೆದನು ಮುಂದೆ ದಕ್ಷಿಣಕೆ ೧೪

ವಾರುಧಿಯ ಬಂಧಿಸಿದ ಸೇನಾ
ಭಾರದಲಿ ನಡೆತಂದು ಲಂಕೆಯು
ಸೇರಿ ಮುತ್ತಿಗೆವಿಡಿದು ರಾವಣ ಕುಂಭಕರ್ಣರನು
ಭೂರಿಬಾಣವಳೊರಸಿ ದಾನವ
ವೀರರನು ಪರಿಹರಿಸಿ ರಘುನೃಪ
ವಾರಣಾಧಿ ಪಟ್ಟವನು ಕಟ್ಟಿದನಾ ವಿಭೀಷಣಗೆ ೧೫

ಧರಣಿಸುತೆಯನು ಕರೆಸಿ ದೇವಾ
ಸುರರುಲಿಯಲು ವಿಭೀಷಣಗೆ ವಿ
ಸ್ತರಿಸಿ ಪೇಳಿದ ಪುರಕೆ ಪಯಣವ ಮಾಡು ನೀನೆನಲು
ಕರೆಸಿದನು ನಿಜಮಂತ್ರಿ ಕರಿ ರಥ
ತುರಗ ಪಾಯ್ದಳವಾಕ್ಷಣವೆ
ನೆರೆದುದಗಣಿತ ವೀರದಾನವ ಸೇನೆ ನಿಮಿಷದಲಿ ೧೬

ಹರುಷದಲಿ ತರಿಸಿದ ಕುಬೇರನ
ವರ ರಥವ ಮೇಳೈಸಿ ದೇವರ
ಸಿರಿ ಪದಾಂಬುಜಕರ್ಪಿಸಲು ಶ್ರೀರಾಮ ನಸುನಗುತ
ಕರೆಸಿ ಲಕ್ಷ್ಮಣದೇವನನು ನಿಜ
ತರುಣಿ ಸಹಿತೇರಿದ ವರೂಥವ
ತರಣಿಸುತ ಹನುಮಂತ ಜಾಂಬವರೈದಿತೊಗ್ಗಿನಲಿ ೧೭

ಅಂಗದನು ನಳ ನೀಲ ಶತಬಲಿ
ತುಂಗ ವಿಕ್ರಮ ಸುಷೇಣನಾ ಪ್ಲ
ವಂಗ ಗವಯ ಗವಾಕ್ಷ ಮೊದಲಾದಖಿಳ ವಾನರರು
ಸಂಗಡಿಸಿ ನೆರೆದುದು ಮಹಾ ಸಮ
ರಂಗ ವೀರರು ಮೋಹಿಸಿದ ರಘು
ಪುಂಗವನ ರಥದೊಡನೆ ನಡೆದುದು ಮುಂದೆ ಸಂದಣಿಸಿ ೧೮

ಧಾರುಣೀಪತಿ ಕೇಳು ಲಂಕೆಯ
ವೀರದಾನವ ಭಟರು ಪುರಜನ
ಪೌರಜನ ಸಹಿತಾ ವಿಭೀಷಣನೊಡನೆ ಮೇಳೈಸಿ
ಭೂರಿ ಬಲವೈತರುತಲಿರೆ ರಣ
ಭೇರಿ ದಂಧಣ ಧಣರೆನಲು ಮಿಗೆ
ಚೀರಿದವು ಕಹಳೆಗಳು ದಿಕ್ಪಾಲಕರ ಬೆದರಿಸಿತು ೧೯

ತಡೆಯದೈತಂದುಭಯ ಬಲ ಸಂ
ಗಡಿಸಿ ಬರುತಿರೆ ಮುಂದೆ ಸೇತುವ
ಮಡದಿಗೆಲ್ಲವ ತೋರಿಸುತ ನೆರೆಕಡಲ ದಾಂಟಿವರು
ನಡೆದು ರಾಮೇಶ್ವರದ ಬಳಿಯಲಿ
ಮೃಡನ ಪೂಜಿಸಿ ಭಕ್ತಿಭಾವದ
ಸಡಗರದಿ ವಾಲ್ಮೀಕಿಯಾಶ್ರಮಕೈದಿದನು ನೃಪತಿ ೨೦

ಅಲ್ಲಿ ನೆರೆದ ಮಹಾಮುನೀಶ್ವರ
ರೆಲ್ಲರನು ಸತ್ಕರಿಸಿ ಜಾನಕಿ
ವಲ್ಲಭನು ನಡೆತಂದನಾ ಮುಚುಕುಂದನಾಶ್ರಮಕೆ
ಸಡಿಲದುನ್ನತ ಬಲಸಮೇತದಿ
ಕಡಲಕಂಡನು ಪಂಚನದಿಯೋಳ್
ಬಿಡದೆ ಪಲ್ಲೈಸಿರುವ ಫಲವಸ್ತುಗಳ ಸಂಭ್ರಮದಿ ೨೧

ಆ ಮಹಾವನದೊಳಗೆ ಸುಭಟ
ಸ್ತೋಮವಳಿದುದು ಪಾಳಯದ ಸಂ
ಗ್ರಾಮದಿದಿರಲಿ ಗುಡಿಗುಡಾರಂಗಳು ವಿರಾಜಿಸಿತು
ರಾಮಣೀಯಕ ರಚನೆಯಲಿ ಸು
ತ್ರಾಮನೋಲಗದಂತೆ ರಘುಕುಲ
ರಾಮನೈದಿರೆ ಬಂದು ಕಂಡರು ಸಕಲ ಮುನಿವರರು ೨೨

ಕೌಶಿಕನು ಜಮದಗ್ನಿ ಜನ್ಹು ಪ
ರಾಶರನು ಜಾಬಾಲಿ ಭೃಗು ದೂ
ರ್ವಾಸ ಗೌತಮನಾದಿಯಾದ ಸಮಸ್ತ ಮುನಿವರರು
ಭಾಸುರದ ತೇಜದಲಿ ತಮ್ಮ ನಿ
ವೇಶನವ ಹೊರವಂಟು ಬಂದರು
ದಾಶರಥಿಯನು ಕಂಡು ಹರಸಿದರಕ್ಷತೆಯ ತಳಿದು ೨೩

ರಾಮ ದಶರಥತನಯ ರಘುಕುಲ
ಸೋಮ ಸನ್ನುತ ಸನಾಮನಾಹವ
ಭೀಮ ಸುಜನ ಪ್ರೇಮ ಜಗದಭಿರಾಮ ನಿಸ್ಸೀಮ
ತಾಮರಸದಳ ನಯನ ದೇವ
ಪ್ರೇಮ ಸುರಕುಲಮೌಳಿವಂದಿತ
ಪ್ರೇಮದಿಂದಲಿ ಪಾಲಿಸೆನ್ನು ತಲವರು ಪೊಗಳಿದರು ೨೪

ದೇವಿ ಜಾನಕಿ ಸಹಿತ ವನದಲಿ
ನೀವು ಕಷ್ಟವ ಬಳಸಿ ಭಕ್ತರ
ಕಾವ ಹದನನು ನೆನೆದು ವಾನರ ಬಲಸಮೇತದಲಿ
ರಾವಣನ ಸಂಹರಿಸಿ ಲಂಕೆಯ
ನಾ ವಿಭೀಷಣಗಿತ್ತು ನಮ್ಮನು
ದೇವ ಪಾಲಿಸೆ ಬಂದೆಯೆಂದುಪಚರಿಸಿದರು ನೃಪನ ೨೫

ಸಾರಹೃದಯರು ನೀವು ನಮಗುಪ
ಚಾರವೇಕಿದು ನಿಮ್ಮಡಿಯ ಕರು
ಣಾರಸವೆ ಸಲಹುವುದು ನಮ್ಮನು ಸಾಕದಂತಿರಲಿ
ಆರಿಗುಂಟಿದು ನಿಮ್ಮ ದರುಶನ
ಸೇರಿತೆಮಗಿಂದಿನಲಿ ಎಂದುಪ
ಚಾರದಿಂ ಸತ್ಕರಿಸಿ ಕುಳ್ಳಿರಿಸಿದನು ಮುನಿವರರ ೨೬

ಎಡದ ಕಡೆಯಲಿ ಕಪಿಕುಲೇಂದ್ರನ
ಗಡಣ ಬಲದಲಿ ರಾವಣಾನುಜ
ಸಡಗರದಿ ಮುನಿನಿಕರವಿದಿರಲಿ ಹಿಂದೆ ವಾನರರು
ಮಡದಿ ಲಕ್ಷ್ಮಣದೇವರೀರ್ವರು
ಬಿಡದೆ ಚಿಮ್ಮಲು ಚಾಮರಂಗಳ
ಪೊಡವಿಪತಿ ಶ್ರೀರಾಮ ಸಿಂಹಾಸನದಿ ರಂಜಿಸಿದ ೨೭

ಅಲ್ಲಿ ನೆರೆದ ಮಹಾ ಮುನೀಶ್ವರ
ರೆಲ್ಲ ತರಿಸಿದರಖಿಳ ವಸ್ತುವ
ಬೆಲ್ಲ ಸಕ್ಕರೆ ಜೇನುತುಪ್ಪ ರಸಾಯನಂಗಳಲಿ
ಭುಲ್ಲವಿಸಿ ರಚಿಸಿದ ಸುಭಕ್ಷ್ಯಗ
ಳೆಲ್ಲವನು ತುಂಬಿದರು ಹೆಡಗೆಗ
ಳಲ್ಲಿ ಜೋಡಿಸಿ ಹೊರಿಸಿ ತಂದರು ರಾಮನೋಲಗಕೆ ೨೮

ತಂದು ಶಿಷ್ಯರು ಭಕ್ಷ್ಯಗಳ ಮುದ
ದಿಂದ ಸುರಿಯಲು ನೋಡಿ ನಸುನಗೆ
ಯಿಂದ ರಘುಕುಲ ಸಾರ್ವಭೌಮನು ಕರೆಸಿ ನಿಜಬಲಕೆ
ಅಂದು ಕೊಡಿಸಲು ನೋಡಿದರು ರುಚಿ
ಯಿಂದ ಸವಿದರು ಪೂಜೆಗಳನಾ
ನಂದದಲಿ ಕೊಂಡಾಡಿದರು ವಾನರರು ಮುನಿವರರ ೨೯

ಅನಿಲಸುತ ಬಾರೆಂದು ರಘುನಂ
ದನನು ಕರುಣದೊಳಿದರ ರುಚಿಯೆಂ
ತೆನಲು ಕರಗಳ ಮುಗಿದು ಬಿನ್ನೈಸಿದನು ರಘುಪತಿಗೆ
ಇನಕುಲಾನ್ವಯ ತಿಲಕ ಚಿತ್ತೈ
ಸೆನಗೆ ಸವಿಯಹುದಿನ್ನು ಧಾನ್ಯದ
ತನುವನೀಕ್ಷಿಸಬೇಕು ದೇವರು ತರಿಸಿ ನೀವೆಂದ ೩೦

ಎನಲು ರಾಮನೃಪಾಲ ಗೌತಮ
ಮುನಿಯನೀಕ್ಷಿಸಬೇಕು ಸಲೆ ತರಿ
ಸೆನಲು ಧಾನ್ಯವನೊಡನೆಯಾಲೋಚಿಸಿದರೀ ಹದನ
ಮನ ನಲಿದು ತಂತಮ್ಮ ಶಿಷ್ಯರ
ವಿನಯದಿಂದಲಿ ಕರೆಸಿ ತಾರೆಂ
ದೆನಲು ಮೆರೆದರು ತಳುವದವರನು ತಂದು ಸಭೆಯೊಳಗೆ ೩೧

ನರೆದಲೆಗನಿದು ನೆಲ್ಲು ಹಾರಕ
ಬರಗು ಜೋಳವು ಕಂಬು ಸಾಮೆಯು
ಉರುತರದ ನವಣೆಯಿದು ನವಧಾನ್ಯವೆಂದೆನಲು
ಮೆರೆವ ರಾಶಿಯ ಕಂಡು ಇದರೊಳು
ಪರಮಸಾರದ ಹೃದಯನಾರೆಂ
ದರಸಿ ಕೇಳಿದನಲ್ಲಿರುತಿಹ ಮಹಾಮುನೀಶ್ವರರ ೩೨

ಕೆಲರು ಗೋಧಿಯು ಸಾಮೆಯನು ಕೆಲ
ಕೆಲರು ನವಣೆಯು ಕಂಬು ಜೋಳವ
ಕೆಲರು ಹಾರಕನೆಂದು ಕೆಲರು ನೆಲ್ಲನತಿಶಯವ
ಕೆಲರು ನರೆದಲೆಗನನು ಪತಿಕರಿ
ಸಲದ ನೋಡಿದ ನೃಪತಿಯಿದರೊಳು
ಹಲವು ಮತವೇಕೊಂದನೇ ಪೇಳೆಂವ ಗೌತಮನು ೩೩

ದಾಶರಥಿ ಚಿತ್ತೈಸು ನಮ್ಮ
ದೇಶಕತಿಶಯ ನರೆದಲೆಗನೇ
ವಾಸಿಯುಳ್ಳವನೀತ ಮಿಕ್ಕಿನ ಧಾನ್ಯವೇಕೆನಲು
ಲೇಸನಾಡಿದ ಮುನಿಪ ಗೌತಮ
ದೋಷರಹಿತನು ಪಕ್ಷಪಾತವ
ನೀಸುಪರಿಯಲಿ ಮಾಡುವರ ಶಿವಯೆಂದನಾ ವ್ರೀಹಿಗ ೩೪

ಎಲ್ಲ ಧರ್ಮದ ಸಾರವನು ನೀವ್
ಬಲ್ಲಿರರಿಯದೆ ಎಲ್ಲರನು ನೀ
ವಿಲ್ಲಿ ನುಡಿವಯುಪೇಕ್ಷೆಯುಂಟೇ ಸಾಕದಂತಿರಲಿ
ನೆಲ್ಲು ನಾನಿರೆ ಗೋಧಿ ಮೊದಲಾ
ದೆಲ್ಲ ಧಾನ್ಯಗಳಿರಲು ಇದರಲಿ
ಬಲ್ಲಿದನು ನರೆದಲೆಗನೆಂಬುದಿದಾವ ಮತವೆಂದ ೩೫

ಏನೆಲವೊ ನರೆದಲೆಗ ನೀನು ಸ
ಮಾನನೆ ಎನಗಿಲ್ಲಿ ನಮ್ಮನು
ದಾನವಾಂತಕ ಬಲ್ಲನಿಬ್ಬರ ಹೆಚ್ಚು ಕುಂದುಗಳ
ಜಾನಕೀಪತಿಯ ಸನಿಹದಲಿ ಕುಲ
ಹೀನ ನೀನು ಪ್ರತಿಷ್ಠೆ ಸುಡು ಮತಿ
ಹೀನ ನೀನೆಂದೆನುತ ಖತಿಯಲಿ ಬೈದು ಬಂಗಿಸಿದ ೩೬

ಲೋಕದಲಧಿಕ ಭೋಜನವಿದೆಂ
ದಾಕೆವಾಳರು ಬುಧರು ಜರಿದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ
ನಾಕನಿಳೆಯರು ಸಾಕ್ಷಿ ನಿನ್ನ ವಿ
ವೇಕಿಗಳು ಮೆಚ್ಚುವರೆ ಬಾಹಿರ
ಸಾಕು ನಡೆ ನೀನಾವ ಮಾನ್ಯನು ಕಡೆಗೆ ತೊಲಗೆಂದ ೩೭

ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನ ಪರಮ ಮಂತ್ರಾ
ಕ್ಷತೆಗಳಲಿ ಶುಭ ಶೋಭನದಲಾರತಿಗೆ ಹಿರಿಯರಲಿ
ಕ್ರತುಗಳೆಡೆಯೊಳಗರಮನೆಯಲ್ಲಿ
ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನಹೆನೆಂದನಾ ವ್ರೀಹಿಗ ೩೮

ಜನಪರಿಗೆ ಶಿಶುಗಳಿಗೆ ಬಾಂಧವ
ಜನರೆಡೆಗೆ ಬ್ರಹ್ಮರ ಸಮಾರಾ
ಧನೆಗೆ ವಿದ್ಯಾರಂಭ ಕಾಲಕೆ ಸಕಲ ಭೂಸುರರ
ಮನೆಗಳಲಿ ಹರಿದಿವಸದೌಪಾ
ಸನೆಗಳಲಿ ತಾ ಯೋಗ್ಯನಹುದೆಂ
ದೆನಿಸಿಕೊಂಬೆನು ನೀನಯೋಗ್ಯನು ಭ್ರಷ್ಟ ತೊಲಗೆಂದ ೩೯

ಹೊಸಮನೆಯ ಪುಣ್ಯಾರ್ಚನೆಗೆ ಮಿಗೆ
ಯಿಸೆವ ಮದುಮಕ್ಕಳಿಗೆ ಸೇನೆಗೆ
ವಸುಮತೀಶರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ
ಎಸೆವ ವಿಪ್ರರ ಫಾಲದಲಿ ರಂ
ಜಿಸುವ ಗಂಧಾಕ್ಷತೆಯಹೆನು ಭಾ
ವಿಸಲು ಲೋಕದೊಳಾರು ಸರಿಯಂತೆಂದನಾ ವ್ರೀಹಿಗ ೪೦

ಧರಣಿಯಮರರು ಮಂತ್ರ ತಂತ್ರೋ
ಚ್ಚರಣಯಲಿ ಹಸ್ತಾಂಬುಜದಿ ಮಿಗೆ
ಹರಸಿ ಕೊಡಲಕ್ಷತೆಯ ಮಂಡೆಯೊಳಾಂತ ಮಹಿಮರಿಗೆ
ದುರಿತ ದುಃಖ ವಿನಾಶ ಮಂಗಳ
ಕರವಹುದು ತಾನೀನೆ ಸಂತತ
ಸಿರಿಯು ಸಂಪತ್ತಾಯುವನು ಕೇಳೆಂಗನಾ ವ್ರೀಹಿಗ ೪೧

ಪರಿಮಳದ ಚಂದನದ ತರುವಿಗೆ
ಸರಿಯೆ ಒಣಗಿದ ಕಾಷ್ಠ ಗೋವದು
ಕರೆದ ಹಾಲಿಗೆ ಕುರಿಯ ಹಾಲಂತರವೆ ಭಾವಿಸಲು
ಪುರಮ ಸಾಹಸಿ ವೀರ ಹನುಮಗೆ
ಮರದ ಮೇಳಣ ಕಪಿಯು ತಾನಂ
ತರವೆ ಫಡ ನೀನೆನಗೆ ಸರಿಯೇ ಭ್ರಷ್ಠ ತೊಲಗೆಂದ ೪೨

ಸುರನದಿಗೆ ತಾ ಸರಿಯೆ ಕಾಡೊಳು
ಹರಿವ ಹಳ್ಳದ ನೀರು ಗರುಡನ
ಮರಿಗೆ ಹದ್ದಂತರವೆ ಹಂಸೆಗೆ ಬಕನು ಹೋಲುವುದೆ
ಸರಸ ಮರಿಕೋಗಿಲೆಗೆ ವಾಯಸ
ನಣಕಿಸುವ ತೆರನಾಯ್ತು ಸಾಕಿ
ನರೆದಲೆಗ ನೀನಾವ ಮಾನ್ಯನು ಕಡೆಗೆ ತೊಲಗೆಂದ ೪೩

ನುಡಿಯ ಕೇಳುತ ಕನಲಿ ಕಂಗಳು
ಕಿಡಿಮಸಗಿ ಖತಿಗೊಂಡು ನುಡಿದನು
ಸಿಡಿಲ ಘರ್ಜನೆಯಂತೆ ಸಭೆಯಲಿ ಜರೆದನಾ ವ್ರೀಹಿಯು
ನುಡಿಗೆ ಹೇಸದ ಭಂಡ ನಿನ್ನೊಳು
ಕೊಡುವರೇ ಮಾರುತ್ತರವ ಕಡು
ಜಡನಲಾ ನಿನ್ನೊಡನೆ ಮಾತೇಕೆಂದ ನರೆದಲೆಗ ೪೪

ಸತ್ವಹೀನನು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರು ರೋಗಿಗೆ
ಪಥ್ಯ ನೀನಹೆ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ ೪೫

ಸತ್ತದಿನದಾರಭ್ಯ ಮನುಜರು
ಮತ್ತೆ ಕರ್ಮವ ಹೊತ್ತು ಪಿಂಡವ
ನಿತ್ತು ತಪ್ಪದೆ ಮತ್ತೆ ವಾಯಸಕುಲವ ಕರೆಕರೆದು
ತುತ್ತ ನೀಡುವರು ಎಳ್ಳು ದರ್ಭೆಗೆ
ತೆತ್ತಿಗನು ನೀನಾದೆ ಕೀರ್ತಿಯ
ಹೊತ್ತುಕೊಂಡೆ ದುರಾತ್ಮ ನಿನ್ನೊಳು ಮಾತದೇಕೆಂದ ೪೬

ಮಳೆದೆಗೆದು ಬೆಳೆಯಡಗಿ ಕ್ಷಾಮದ
ವಿಲಯಕಾಲದೊಳನ್ನವಿಲ್ಲದೆ
ಅಳಿವ ಪ್ರಾಣಿಗಳನಾದರಿಸಿ ಸಲಹುವೆನು ಜಗವರಿಯೆ
ಎಲವೊ ನೀನೆಲ್ಲಿಹೆಯೋ ನಿನ್ನಯ
ಬಳಗವದು ತಾನೆಲ್ಲಿಹುದು ಈ
ಹಲವು ಹುಲುಧಾನ್ಯಗಳಿನಗೆ ಸರಿದೊರೆಯೆ ಕೇಳೆಂದ ೪೭

ಬಲ್ಲಿದರು ಬರೆ ಬಡವರಲಿ ನಿ
ನ್ನಲ್ಲಿಯುಂಟು ಉಪೇಕ್ಷ ನಮ್ಮಲಿ
ಸಲ್ಲದೀಪರಿ ಪಕ್ಷಪಾತವದಿಲ್ಲ ಭಾವಿಸಲು
ಬಲ್ಲಿದರು ಬಡವರುಗಳೆನ್ನದೆ
ಎಲ್ಲರನು ರಕ್ಷಿಸುವೆ ನಿರ್ದಯ
ನಲ್ಲ ತಾ ನಿನ್ನಂತೆ ಎಲ ಕುಟಿಲಾತ್ಮ ಹೋಗೆಂದ ೪೮

ನಾನೆಲ್ಲೈ ಲೋಕದಲಿ ನಿರ್ದಯನು ಬಳಿ
ಕೇನಲ್ಲೈ ಸದ್ಧರ್ಮದಲಿ ಮಧು
ಪಾನವಾದೆಯಲಾ ದುರಾತ್ಮಕ ನಿನ್ನ ಸೇವಿಸಿದ
ದಾನವರು ಮಾನವ ಕಿರಾತರು
ಜ್ಞಾನವಳಿದು ವಿಕಾರದಲಿ ಮತಿ
ಹೀನರಾದರು ನಿನ್ನ ಗುಣವೇನೆಂದನಾ ವ್ರೀಹಿಗ ೪೯

ಆಡಬಹುದತಿಶಯ ನೀ ಕೊಂ
ಡಾಡಿಕೊಂಬರೆ ಸಾಕು ಸಜ್ಜನ
ರಾಡಿದರೆ ಪತಿಕರಿಸಿ ಲಜ್ಜೆಗೆ ಶಿರವ ಬಾಗುವರು
ನೋಡಿರೈ ಸಭೆಯವರು ದುರ್ಮತಿ
ಗೇಡಿ ಇವನಾಡುವುದ ನಾವಿ
ನ್ನಾಡಿದರೆ ಹುರುಳಿಲ್ಲ ಶಿವಶಿವಯೆಂದ ನರೆದಲೆಗ ೫೦

ಸತ್ತವರ ಪ್ರತಿಬಿಂಬರೂಪನು
ಬಿತ್ತರಿಸಿ ಪಿತೃನಾಮಗಳ ನಿನ
ಗಿತ್ತು ಮೂವರ ಪೆಸರಿನಲಿ ಕರೆಕರೆಗು ದರ್ಭೆಯಲಿ
ನೆತ್ತಿಯನು ಬಡಿಬಡಿದು ಕಡೆಯಲಿ
ತುತ್ತ ನೀಡುವರು ಪಶುಗಳಿಗೆ ನೀ
ನೆತ್ತಿಯದೆಲಾ ತನುವ ಸುಡಬೇಕೆಂದ ನರೆದಲೆಗ ೫೧

ಎನಿಸಿರಿ ಹಿರಿಕಿರಿದ ನುಡಿಯದೆ
ಮೌನದೀಕ್ಷಿತರಾದಿರಲ ಕಂ
ಡೇನು ಮುಂದಾಡುವರಸಾಧ್ಯವೋ ಸಾಧ್ಯವೋ ನಿಮಗೆ
ಈ ನಪುಂಸಕನಲಿ ನಿರಂತರ
ವೇನು ಕಾರಣ ವಾದವಿದು ನಮ
ಗೇನು ಬುದ್ಧಿಯನರುಹುವಿರಿ ಪೇಳೆಂದ ನರೆದಲೆಗ ೫೨

ಮಸೆದುದಿತ್ತಂಡಕ್ಕೆ ಮತ್ಸರ
ಪಿಸುಣ ಬಲರತಿ ನಿಷ್ಠುರರು ವಾ
ದಿಸಲು ಕಂಡನು ನೃಪತಿ ಮನದಲಿ ನೋಡಿ ನಸುನಗುತ
ಹಿಸುಣರಿವದಿರ ಮತ್ಸರವ ಮಾ
ಣಿಸುವ ಹದನೇನುತ ಯೋಚಿಸಿ
ದಸುರ ಮುನಿಪರ ನೋಡೆ ಗೌತಮ ಮುನಿಪನಿಂತೆಂದ ೫೩

ಅರಸುಗಳು ನಾವೆಲ್ಲ ಭೂಮೀ
ಸುರರು ನೆರೆದಿಹ ದಾನವರು ವಾ
ನರರು ನಮಗೀ ನ್ಯಾಯವನು ಪರಿಹರಿಸಲಳವಲ್ಲ
ಕರೆಸುವೆವು ಹರಿಹರ ವಿರಿಂಚಾ
ದ್ಯರನಯೋಧ್ಯೆಗೆ ಇವರ ಗುಣವಾ
ಧರಿಸಿ ಪೇಳ್ವರು ನಯದೊಳೆಂದನು ರಾಮ ನಸುನಗುತ ೫೪

ಪರಮ ಧಾನ್ಯದೊಳಿಬ್ಬರೇ ಇವ
ರಿರಲಿ ಸೆರೆಯೊಳಗಾರು ತಿಂಗಳು
ಹಿರಿದು ಕಿರಿದೆಂಬಿವರ ಪೌರುಷವರಿಯಬಹುದಿನ್ನು
ಪುರಕೆ ಗಮನಿಸಿ ನಾವು ನಿಮ್ಮನು
ಕರೆಸುವೆವು ಕೇಳೆನುತಯೋಧ್ಯಾ
ಪುರಿಗೆ ಪಯಣವ ಮಾಡಹೇಳಿದನಾ ವಿಭೀಷಣಗೆ ೫೫

ಸೆರೆಗೆ ನಮ್ಮನು ನೂಕಿ ದೇವರು
ಸಿರಿಯ ಮದದಲಿ ಕಳೆದರೆಮ್ಮನು
ಮರೆದು ಸಲಹುವರಾರು ನಿಮ್ಮಯ ಕರುಣ ಹೊರತಾಗಿ
ಧರೆಯೊಳಿನ್ನಪಕೀರ್ತಿ ನಾರಿಯ
ಸೆರಗ ಹಿಡಿವುದೇ ಲೇಸೆನುತ ತವೆ
ಕರ ಮುಗಿದು ತಲೆಗುತ್ತಿ ಪೇಳದನಾಗ ನರದಲೆಗ ೫೬

ಆಗಲದಕೇನೆಂದು ಕರುಣಾ
ಸಾಗರನು ಬೀಳ್ಕೊಟ್ಟನವರನು
ಯೋಗಿಗಳ ವಶಮಾಡಿ ಗೌತಮಮುನಿಯನುಪಚರಿಸಿ
ರಾಗ ಮಿಗೆ ಮುನಿವರರನಲ್ಲಿ ಸ
ರಾಗದಿಂದಲೆ ಕಳುಹಿ ಬಳಿಕಾ
ಯಾಗ ಸಂರಕ್ಷಕನು ವೀಳಯವಿತ್ತನಸಿಬರಿಗೆ ೫೭

ಹರಿದುದಾಕ್ಷಣದಲ್ಲಿ ವ್ಯೋಮದಿ
ಸುರರು ಮಿಗೆ ಕೊಂಡಾಡಿ ಭೂಸುರ
ವರರು ಕಳುಹಿಸಿಕೊಂಡು ಹೊಕ್ಕರು ತಮ್ಮ ಮಂದಿರವ
ಹರುಷ ತಗ್ಗಿತು ತಾವರೆಗೆ ಮುಖ
ವರಳಿದವು ನೈದಿಲೆಗೆ ತಾರಕೆ
ನೆರೆದುವಾಕಾಶದಲಿ ಅಸ್ತಾಂಬುಧಿಗೆ ಇನನಿಳಿದ ೫೮

ನೆಗಳಿದವು ಬೊಂಬಾಳ ದೀವಿಗೆ
ಝಗಝಗಿವ ನವರತ್ನದೊಡುಗೆಯ
ಹೊಗರೊಗುವ ಕೈದುಗಳ ಸುಭಟರು ಮುಂದೆ ಸಂದಣಿಸೆ
ನೆಗಹಿ ಕರಗಳ ಪಾಠಕರು ಬಿರು
ದುಗಳ ಹೊಗಳಲು ಚೀರಿದವು ಕಹ
ಳೆಗಳು ರಭಸದಿ ಬಂದು ಹೊಕ್ಕನು ನೃಪತಿಯರಮನೆಯ ೫೯

ಗಗನಮಣಿ ದಿಗುತಟವ ಸಾರಲು
ಹೊಗರೊಗುವ ಬಲು ಕಾಗಳದಿ ಸಲೆ
ಜಗವ ಮುಸುಕಲು ಜನರು ನಿದ್ರಾಂಗನೆಯ ಕೇಳಿಯಲಿ
ದೃಗುಯುಗಳನೆವೆ ಬಿಗಿದಿರಲು ಮನ
ವಿಗತಿವಡೆದಿರೆ ಧರೆಗೆ ದಿನಮಣಿ
ಮೊಗವ ತೋರುವೆನೆನುತ ಪೂರ್ವಾಚಲಕೆ ನಡೆತಂದ ೬೦

ಅರಸನುಪ್ಪವಡಿಸಿದ ಪೂರ್ವದ
ತರಣಿಗರ್ಘ್ಯವ ಕೊಟ್ಟು ಭೂಸುರ
ವರರ ಮಂತ್ರಾಕ್ಷತೆಯ ಕೈಕೊಂಡನುಜನೊಡಗೂಡಿ
ಹರುಷ ಮಿಗೆ ಪಾರಕರ ಸಂದಣಿ
ನೆರೆಯೆ ಮುನಿಕುಲದೊಡನೆ ನಿಜಮಂ
ದಿರವ ಹೊರವಂಟವನಿಪತಿಯೋಲಗಕೆ ನಡೆತಂದ ೬೧

ಕರೆಸಿದನು ರಾವಣನ ತಮ್ಮನ
ತರಣಿಸುತ ನಳ ನೀಲ ಜಾಂಬವ
ಶರಭ ಶತಬಲಿಯಾದ ಮುಖ್ಯ ಸಮಸ್ತ ವಾನರರ
ಹರುಷಮಿಗೆ ಸತ್ಕರಿಸಿ ಮುಂದಕೆ
ತೆರಳಬೇಕೆನೆ ವೀರ ಸುಭಟರು
ನೆರೆದುರುಬಿ ಕೈದುಗಳ ಜಡಿದಗ್ಗಳಿಯರೈದಿದರು ೬೨

ಹೊಡೆವ ತಮ್ಮಟೆ ಭೇರಿ ಡಮರುಗ
ಗಿಡಿಬಿಡಿ ಡೌಡೆ ಡಿಂಡಿಮ ಢಕ್ಕೆ
ನುಡಿವ ಶಂಖ ಮೃದಂಗ ಘನ ನಿಸ್ಸಾಳ ಮೊದಲಾದ
ಬಡಿವ ನಾನಾ ವಾದ್ಯರವ ಭೋ
ರಿಡಲು ಜಯರವದೊಡನೆ ರಘುನೃಪ
ಮಡದಿ ಸಹಿತೇರಿದನು ಧನಪನ ದಿವ್ಯಮಣಿರಥವ ೬೩

ಒಡನೆ ಏರಿದನೂರ್ವಿಳಾಪತಿ
ಬಿಡದೆ ಚಿಮ್ಮುವ ಚಾಮರವ ಸಾ
ಲಿಡುತ ನಡೆದುದು ಸಕಲದಳ ಸುಗ್ರೀವನಾಜ್ಞೆಯಲಿ
ಕಡುಮನದ ರಕ್ಕಸರು ಏರಿದ
ರೊಡನೆ ಕರಿ ರಥ ತುರಗವನು ಪಡೆ
ಕಡಲ ಜಲ ಮೊರೆವಂತೆ ಮೊರೆದುದು ನೃಪನ ಬಲಜಲಧಿ ೬೪

ಕಳೆದು ಬಂದರು ಪಂಚನಂದಿಯ
ಬಳಿಯಲೊಪ್ಪುವ ಪಂಚನದಿಗಳ
ಹೊಳೆಯ ದಾಂಟುತ ಕಂಡು ಕಿಷ್ಕಿಂಧಾದ್ರಿಗೈತಂದು
ಲಲನೆ ಸೀತಾದೇವಿ ರವಿಜನ
ಲಲನೆಯರ ತಾ ಕರೆಸಿ ತನ್ನೊಡ
ನೊಲಿದು ಬರಬೇಕೆನಲು ಬಂದರು ದೇವಿಯರನೈದಿ ೬೫

ಹೊಲಬುದಪ್ಪದೆ ಸಕಲ ನಾಯಕ
ದಳಸಹಿತ ಮುಂಬಟ್ಟೆಯಲಿ ಮುನಿ
ಕುಲದ ದರುಶನವಾಗಲಾಶೀರ್ವಾದವನು ಕೊಂಡು
ಬಳಿವಿಡಿದು ಬರೆ ಜನರ ಪಾಪವ
ಕಳೆದು ಸಲಹುವ ತುಂಗಭದ್ರೆಯ
ಕಳೆದು ಬಂದರು ಮುಂದೆ ಭಾರದ್ವಾಜನಾಶ್ರಮಕೆ ೬೬

ಇಳಿದುದಾ ಬನದೊಳಗೆ ಪಾಳೆಯ
ಬಳಸಿಬಿಟ್ಟುದು ಮೂರು ಯೋಜನ
ದಳತೆಯಲಿ ಕಪಿಸೇನೆಯಾ ಮಧ್ಯದಲಿ ನೃಪಭವನ
ಹಳದಿ ಕೆಂಪಿನ ನೀಲವರ್ಣದ
ಥಳಿಯ ಪಟ್ಟೆಯ ಗುಡಿಗುಡಾರದಿ
ಹೊಳೆವ ರತ್ನಗಳಿಂದ ಕಲಶದ ಸಾಲು ರಂಜಿಸಿತು ೬೭

ಅರಮನೆಯ ಬಲವಂಕದಲಿ ನಿಜ
ಶರಣನರಮನೆ ವಾಮಭಾಗದಿ
ತರಣಿಸುತ ಸುಗ್ರೀವನಂಗದ ಜಾಂಬವಾದಿಗಳ
ವರ ಭವನವೆಸೆದಿರಲು ಮೇಲು
ಪ್ಪರಿಗೆಗಳ ರಂಜಿಸಿ ಕವಾಟದಿ
ಮೆರೆದುದಗ್ಗದ ವೀರ ರಾಮನ ಪಾಳ್ಯ ಒನದೊಳಗೆ ೬೮

ಹೊರವಳಯದಲಿ ದಾನವರ ಒಲ
ಶರಧಿ ಬಿಟ್ಟುದು ೭ ಳಸಿ ಸುತ್ತಲು
ಕರಿ ತುರಗ ರಥ ಪಾಯ್ದಳವು ಸಂದಣಿಸಿ ನಿಂದಿರಲು
ಮೊರೆವ ರಭಸವ ಕಂಡು ಸುರಮುನಿ
ವರರಿದೇನೋ ಎನುತ ನಿಜಮಂ
ದಿರವ ಹೊರವಂಟಲ್ಲಿ ಕೇಳ್ದರು ರಾಮನತಿಶಯವ ೬೯

ಉರಗ ಮಾಲಿ ಮತಂಗ ಗಾರ್ಗ್ಯಾಂ
ಗೀರಸ ಗಾಲವ ಕಣ್ವ ಜಯಮುನಿ
ಪರಶುರಾಮ ಪರುಶ ಕೌಶಿಕ ದಾಲ್ಭ್ಯ ಮೊದಲಾದ
ವರಮುನಿಗಳೊಡನೈದಿ ಬಂದನು
ಭರದಿ ಭಾರದ್ವಾಜ ಮುನಿ ರಘು
ವರನ ಕಾಣಿಸಿಕೊಂಡು ಹರಸಿದರತುಳ ವಿಭವದಲಿ ೭೦

ಬಂದ ಮುನಿಗವನೀಶ ವಂದಿಸಿ
ನಿಂದು ಕರಗಳ ಮುಗಿದು ವಿನಯದೊ
ಳೆಂದ ನಿಮ್ಮ ಸದಾಗ್ನಿಹೋತ್ರ ಸುಯಾಗ ಕರ್ಮಗಳು
ಸಂದ ಜಪತಪಗಳು ಸುರಕ್ಷಿತ
ದಿಂದ ಮೆರೆವುದೆ ದಾನವರ ಭಯ
ದಿಂದ ದುರ್ಘಟವಿಲ್ಲಲಾ ಮುನಿನಾಥ ಕೇಳೆಂದ ೭೧

ದಶರಥಾತ್ಮಜ ನೀನು ಲಂಕೆಯೊ
ಳಸುರ ವೀರರು ಕುಂಭಕರ್ಣನು
ದಶಶಿರನು ಮೊದಲಾದ ದುರ್ಜನರೆಲ್ಲರನು ಮಡುಹಿ
ಅಸುರನನುಜಗೆ ಅಚಲ ಪದವಿಯ
ನೊಸೆದು ಸಲಹಿದೆ ನಮ್ಮ ಕರುಣಾ
ರಸದಿ ಪಾಲಿಸ ಬಂದೆಯೆಂದುಪಚರಿಸಿದನು ನೃಪನ ೭೨

ಕಮಲಸಂಭವನಿತ್ತ ವರದಲಿ
ಕುಮತಿ ದಾನವರತುಳ ಬಲದಿಂ
ದುರುಳ ಕಂಟಕರಾಗಿ ಮಡಿದರು ನಿನ್ನ ಬಾಣದಲಿ
ತಮದ ಗಂಟಲನೊಡೆದು ಮೂಡುವ
ದ್ಯುಮಣಿಯಂದದಿ ನೀವು ಜನಿಸಿರ
ಲೆಮಗೆ ದನುಜಾಧಮರ ಭಯವೇನೆಂದನಾ ಮುನಿಪ ೭೩

ಅರಸ ಕೇಳ್ದಾ ಮುನಿಯ ವಚನದ
ಕರುಣ ರಸಧಾರೆಯಲಿ ಅಂತಃ
ಕರುಣ ನೆನೆದುಪಚರಿಸಿ ಕುಳ್ಳಿರಿಸಿದನು ಮುನಿವರರ
ಮರುತಸುತನನು ಕರೆದು ತವಕದಿ
ಭರತನನು ಸಂತೈಸು ಹೋಗೆಂ
ದುರುತರದ ಪ್ರೇಮದಲಿ ಕಳುಹಿಸಲೆರಗಿ ಹೊರವಂಟ ೭೪

ಹರಿವ ಗಂಗಾನದಿಯ ದಾಂಟುತ
ಭರದಿ ಕಂಡನು ಶೃಂಗಬೇರೀ
ಪುರವ ಹೊಕ್ಕನು ಗುಹನ ಕಾಣಿಸಿಕೊಂಡನು ಚಿತದಲಿ
ಮರುತ ಬಿನ್ನೈಸಿದನು ರಘುನೃಪ
ವರನು ಪೇಳಿದ ಬುದ್ಧಿಯನು ವಿ
ಸ್ತರಿಸೆ ನಿಷಧಾಧಿಪತಿ ಕೇಳ್ದತಿಶಯಾದ ಹರುಷದಲಿ ೭೫

ಅನಿಲಸುತ ಬಾ ಮಗನೆ ರಘುನಂ
ದನಿಗೆ ನಿನ್ನವೊಲಾಪ್ತರಾರೀ
ದನುಜ ಮನುಜ ಭುಜಂಗರೊಳುಂಟೆ ನಿನ್ನ ಹೋಲುವರು
ಹನುಮ ನಂದೀಗ್ರಾಮದಲಿ ಭರ
ತನಿಹನಗ್ರಜನಗಲ್ದ ಖೇದದ
ಮನದ ಪರಿತಾಪವನು ಮಾಣಿಸು ಬೇಗ ಹೋಗೆಂದ ೭೬

ಹರುಷಮಿಗೆ ಜನಪದದ ಪರಿಯಂ
ತರದಿ ಬಂದನಿಲಜನ ಕಳುಹಿಸಿ
ಮರಳಿದನು ಗುಹನಿತ್ತ ಮಾರುತಿ ಮುಂದೆ ಪಥವಿಡಿದು
ಬರುತ ಮಾರ್ಗಾಂತರದಿ ಕಾನನ
ಗಿರಿ ಶಿಖರಗಳ ಕಳೆದು ಬರೆ ವಿ
ಸ್ತರದ ನಂದೀಗ್ರಾಮವನು ಕಂಡಲ್ಲಿ ಮನನಲಿದು ೭೭

ಬಂದು ಭರತನ ಕಂಡು ನಮಿಸಿದ
ಡೆಂದ ನೀನಾರಿಲ್ಲಿಗೈ
ತಂದ ಕಾರಣವೇನು ನಿನ್ನಭಿದಾನವೇನೆನಲು
ನಿಂದು ಕೈಗಳ ಮುಗಿದು ನಸುನಗೆ
ಯಿಂದ ನುಡಿದನು ಹನುಮ ತಾ ರಘು
ನಂದನನ ಸೇವಕನು ಕಳುಹಿದ ದೇವ ನಿಮ್ಮಡಿಗೆ ೭೮

ರಾವಣನ ಸಂಹರಿಸಿ ಲಂಕೆಯ
ನಾ ವಿಭೀಷಣಗಿತ್ತು ಸೀತಾ
ದೇವಿ ಲಕ್ಷ್ಮಣಸಹಿತ ಭಾರದ್ವಾಜನಾಶ್ರಮಕೆ
ದೇವ ಬಂದನು ಸಕಲ ವಿಭವದಿ
ನೀವು ಚಿತ್ತದೊಳವಧರಿಸಿಯೆನೆ
ಪಾವಮಾನಿಯ ನುತಿಸಿ ತಕ್ಕೈಸಿದನು ಭರತೇಂದ್ರ ೭೯

ಹರುಷ ಹೆಚ್ಚಿದ ಮನದಿ ತಮ್ಮನ
ಕರೆದು ಶತೃಘ್ನನನಯೋಧ್ಯಾ
ಪುರಿಗೆ ಕಳುಹಿದ ಜನನಿಯರಿಗೀ ವಾರ್ತೆಯೆಲ್ಲವನು
ಅರುಹಿ ಬಾಯೆನಲಗ್ರಜನ ಸಿರಿ
ಚರಣಕಭಿಮುಖನಾಗಿ ವಂದಿಸಿ
ಹರುಷಮಿಗೆ ಹೊರವಂಟು ಹೊಕ್ಕನಯೋಧ್ಯಾ ಪುರವರವ ೮೦

ಚೀರಿದವು ಕಹಳೆಗಳು ತಮ್ಮಟೆ
ಭೇರಿ ಶಂಖ ನಿನಾದ ಹಬ್ಬಿತು
ಸಾರಿತಂದಿನ ದಿವಸದಲಿ ಶತೃಘ್ನ ಬಂದನೆನೆ
ಆರತಿಯ ತಳಿಗೆಗಳ ಸಂದಣಿ
ಕೇರಿಕೇರಿಯೊಳೈದಿದವು ಕೈ
ವಾರಿಗಳ ಗಡಣದಲಿ ಹೊಕ್ಕನು ರಾಜಮಂದಿರವ ೮೧

ಜನನಿಯರು ಮೂವರಿಗೆ ನಮಿಸಿದ
ತನುಜನನು ತಕ್ಕೈಸಿ ಪೇಳಿದ
ನಿನಕುಲಾನ್ವಯ ಬಂದ ಭಾರದ್ವಾಜನಾಶ್ರಮಕೆ
ಎನಲು ಹರುಷಾನಂದಮಯರಸ
ಹೊನಲಿನೊಳಗೋಲಾಡಿದರು ಮುಖ
ವನಜವರಳಿತು ಜನನಿಯರಿಗವನೀಶ ಕೇಳೆಂದ ೮೨

ಕರೆಸಿದನು ಶತ್ರುಘ್ನ ಮಂತ್ರೀ
ಶ್ವರ ಸುಮಂತನ ಕೂಡೆ ನುಡಿದನು
ತರಣಿಕುಲ ರಾಜೇಂದ್ರನಣ್ಣನ ಬರವ ಕೇಳಿದೆವು
ಪುರವ ಶೃಂಗರಿಸಲ್ಲಿ ಕರಿ ರಥ
ತುರಗ ಮೇಳೈಸಿರಲಿ ಮೋದದ
ತರುಣಿಯರು ಸಂದಣಿಸಿ ನಡೆಯಲಿ ನೃಪನ ದರುಶನಕೆ ೮೩

ಎಂದು ಮಂತ್ರಿಯೊಳರುಹಿ ತಾ ನಿಜ
ಮಂದಿರಕೆ ನಡೆತಂದು ಪಯಣವ
ನಂದು ಮಾಡಿದ ಜನನಿ ಕೌಸಲದೇವಿ ಮೊದಲಾದ
ಇಂದುವದನೆಯರೇರುತಿರ್ದರು
ಅಂದಣವ ಸೊಸೆಯರು ವರೂಥದಿ
ಹಿಂದು ಮುಂದಿಟ್ಟಣಿಸಿ ನಡೆದ ದು ಸತಿಯರೊಗ್ಗಿನಲಿ ೮೪

ಪುರಜನವ ಸಂತೈಸಿ ಭೂಸುರ
ವರರ ಮಂತ್ರಾಕ್ಷತೆಯ ಕೈಕೊಂ
ಡರಸ ರಾಮ ಶ್ರೀಪದಾಬ್ಜವ ನೆನೆವ ಮನದೊಳಗೆ
ತರಿಸಿ ಮಾಲ್ಯಾಂಬರ ಸುಗಂಧವ
ಕರೆಸಿಕೊಟ್ಟನು ರಾಜವರ್ಗಕೆ
ಹರುಷದಲಿ ಶತ್ರುಘ್ನನೇರಿದ ದಿವ್ಯಮಣಿ ರಥವ ೮೫

ವಿವಿಧ ವಾದ್ಯ ಧ್ವನಿಯ ಕಹಳಾ
ರವದ ಸನ್ನೆಯೊಳೈದಿ ಬಹ ನೃಪ
ನಿವಹದಲಿ ಚತುರಂಗ ಸೇನೆಯ ಪದದ ಕೆಂಧೂಳಿ
ಭುವನವಾಕಾಶವನು ಮುಸುಕಿದ
ಡವನಿ ನೆಗ್ಗಲು ಬಲವು ಬಲು ಭಾ
ರವಣೆಯಲಿ ಹೊರವಂಟನಾ ಶತ್ರುಘ್ನನೊಲವಿನಲಿ ೮೬

ಸತ್ತಿಗೆಯ ಸಾಲುಗಳ ಬೀಸುವ
ಚಿತ್ತರದ ಚೌರಿಗಳ ರಥದಲಿ
ತೆತ್ತಿಸಿದ ಸೂನಗಿಯ ಸೀಗುರಿ ಗುಡಿ ಪತಾಕೆಗಳ
ಮತ್ತೆ ಗಜಘಟೆ ತುರಗ ಕಾಲಾ
ಳೊತ್ತರಿಸಿ ಬರೆ ಕಮಠ ಕೂರ್ಮರ
ನೆತ್ತಿ ನೆಗ್ಗಲು ನಡೆದುದಗಣಿತ ಸೇನೆ ವಹಿಲದಲಿ ೮೭

ಪುರವ ಕಳೆದರು ಮುಂದೆ ಯಮುನಾ
ವರನದಿಯನುತ್ತರಿಸೆ ಪಯಣದಿ
ಮೆರೆವ ನಂದೀಗ್ರಾಮವನು ಕಂಡಲ್ಲಿಗೈತಂದು
ಭರತನೊಡಗೊಂಡಲ್ಲಿ ಹನುಮನ
ಕರುಣದಲಿ ಸತ್ಕರಿಸಿ ಮುಂದಕೆ
ತೆರಳಿದರು ಕೌಸಲ್ಯ ರಾಮನ ಕಾಣ್ಬ ತವಕದಲಿ ೮೮

ಇತ್ತ ಕೇಳೈ ಪಾಂಡವಾಗ್ರಜ
ಸತ್ವಗುಣನಿಧಿ ರಾಮಚಂದ್ರನು
ವತ್ತರಿಸಿ ಬರೆ ಕಂಡು ನಲಿಯುತ ಜಾನಕಿಯ ಕರೆದು
ಇತ್ತ ನೋಡೆಲೆ ದೇವಿ ಭರತನ
ಶತ್ರುಹರ ಶತ್ರುಘ್ನರಿವರು ಸ
ಮಸ್ತ ಬಲಸಹಿತಿದಿರು ಬರುತಿದೆ ನೋಡು ನೀನೆಂದ ೮೯

ಎಂದು ತೋರಿಸಿ ಮನದ ಹರುಷದಿ
ಮಿಂದು ಲಕ್ಷ್ಮಣನೊಡನೆ ಸತಿ ಸಹಿ
ತಂದು ರಥವೇರಿದನು ರಾಮನೃಪಾಲನಾಕ್ಷಣಕೆ
ಮುಂದೆ ನೆರೆದುದು ಬನದೊಳಗೆ ಮುದ
ದಿಂದ ಪಾರಕರುಗ್ರಡಿಸೆ ನಲ
ವಿಂದ ಮುನಿಕುಲದೊಡನೆ ತೆರಳಿದನಾ ಮಹೀಪಾಲ ೯೦

ತಲ್ಲಣಿಸಿ ದಶದಿಕ್ಕುಗಳ ಬಲ
ವೆಲ್ಲ ನೆರೆದುದು ವಾನರಾಧಿಪ
ರಲ್ಲಿ ಸುಗ್ರೀವನ ವರೂಥದ ಬಳಿಯೊ ಸಂದಣಿಸೆ
ನಿಲ್ಲದೈದಿದರಾ ವಿಭೀಷಣ
ನಲ್ಲಿ ದಾನವಸೇನೆ ಕೈದುಗ
ಳಲ್ಲಿ ಹೊರವಂಟನು ವನಾಲಯದಿಂದಲಿದಿರಾಗಿ ೯೧

ದೂರದಲಿ ಮಣಿರಥದೊಳಗೆ ರಘು
ವೀರರಿಬ್ಬರು ಕಂಡುಬರೆ ಹೊಂ
ದೇರನಿಳಿದರು ಭರತ ಶತ್ರುಘ್ನರು ಸರಾಗದಲಿ
ಧಾರುಣಿಗೆ ಮೈಯಿಕ್ಕಿದರು ಪರಿ
ವಾರವೆಲ್ಲವು ನೊಸಲಕೈಗಳ
ಭೂರಿ ಸಂತೋಷದ ಸಮುದ್ರದೊಳಾಳಿತಿಂದಿನಲಿ ೯೨

ಇಳಿದು ರಥವನು ನೃಪತಿ ಸೀತಾ
ಲಲನೆ ಲಕ್ಷ್ಮಣ ಸಹಿತ ತಾ ಕೌ
ಸಲೆ ಸುಮಿತ್ರಾದೇವಿ ಕೈಕೆಯ ಚರಣಕಭಿನಮಿಸಿ
ತೊಲಗಿವನು ಬಂದಂತೆ ತನಯರ
ಚೆಲುವನೀಕ್ಷಿಸಿ ಜನನಿಯರು ಕಂ
ಗಳಲಿ ಜಲತುಂಬಿ ನೆರೆ ಬಿಗಿದಪ್ಪಿದರು ನಂದನರ ೯೩

ವಿಮಲಮತಿ ಶತ್ರುಘ್ನ ಭರತರು
ನಮಿಸಿದರು ರಘುಪತಿಗೆ ಲಕ್ಷ್ಮಣ
ನಮಿಸಿದನು ಭರತಂಗೆ ಭರತಾನುಜನೆ ಸಂತೈಸಿ
ಸಮತೆಯಲಿ ಸುಗ್ರೀವ ಜಾಂಬವ
ರಮಿತ ಬಲವನು ಜನನಿಯ ಚರಣ
ಕಮಲವನು ಕಾಣಿಸಿದ ಸುಕರದೊಳೂರ್ಮಿಳಾರಮಣ ೯೪

ವರ ವಿಭೀಷಣದೇವ ಬಂದನು
ಭರತ ಶತ್ರುಘ್ನರಿಗೆ ವಂದಿಸಿ
ಕರದ ಪುಷ್ಪಾಂಜಲಿಯ ಬಿನ್ನೈಸಿದನು ವಿನಯದಲಿ
ಅರಸನನುಜರು ನೀವು ನಿಮ್ಮಯ
ಚರಣ ದರುಶನವಾಯ್ತು ನಮಗೇ
ನರಿದು ಲೋಕದೊಳೆಂದು ಕೊಂಡಾಡಿದನು ಮನದಣಿಯೆ ೯೫

ಜನಕಸುತೆ ಹರುಷದಲಿ ಸುಗ್ರೀ
ವನ ಸತಿಯರೊಡನಿರ್ದು ಮಾವನ
ವನಿತೆಯರಿಗಭಿನಮಿಸೆ ಸೊಸೆಯಳ ತೆಗೆದು ತಕ್ಕೈಸಿ
ಬನದೊಳಗೆ ಒಲು ನೊಂದಲಾ ಮಾ
ನಿನಿಯೆ ಬಾರಾ ತಾಯೆ ಬಾರೆಂ
ದೆನುತ ಕಂಬನಿದೊಡೆದು ಲಾಲಿಸಿದರು ಮಹಾಸತಿಯ ೯೬

ತರಿಸಿ ಮಣಿಭೂಷಣ ದುಕೂಲವ
ಧರಣಿ ತನುಜಗೆ ತೊಡಿಸಿ ಭರತನು
ತರಣಿಸುತ ಜಾಂಬವ ವಿಭೀಷಣರುಗಳ ಸತ್ಕರಿಸಿ
ಪುರಕೆ ಪಯಣವ ಮಾಡಿದನು ಡಂ
ಗುರದ ಸನ್ನೆಯೊಳಂದು ಹೊರವಂ
ಟರು ಮಹಾಂಬುಧಿ ತೆರಳುವಂತೆ ಸಮುದ್ರ ಘೋಷದಲಿ ೯೭

ಮುಸಗಿದುದು ಕೆಂಧೂಳಿ ಗಗನವ
ಮುಸುಕಿದರೆ ರವಿ ಧಾತುಗುಂದಿದ
ಪಸರಿಸಿತುದೆಣ್ದಿಸೆಯ ನೀಂಟಿತು ಸಪ್ತ ಸಾಗರವ
ಉಸುರು ತೆಗೆಬಗೆಯಾಯ್ತು ಕೂರುಮ
ನಸಿದನಹಿಪತಿ ಬಲದ ಭಾರದಿ
ಬೆಸಗುಬಿಡೆ ಗಿರಿ ವಾದ್ಯ ತತಿ ಘರ್ಜಿಸಿತು ಮೂಜಗವ ೯೮

ಅರಸ ಕೇಳಿಲ್ಲಿಂದಯೋಧ್ಯಾ
ಪುರಿಗೆ ಬಂದನು ರಾಮನೃಪ ತ
ನ್ನರಸಿ ಲಕ್ಷ್ಮಣ ಭರತ ಶತ್ರುಘ್ನಾದಿ ಬಾಂಧವರ
ಪರುರವಣೆಯಲಿ ರಾಜತೇಜದಿ
ಸುರರು ದುಂದುಭಿ ಮೊಳಗೆ ನಿಜಮಂ
ದಿರದ ಬಾಗಿಲ ಬಳಿಯ ನಿಂದನು ಮುನಿಪರೊಗ್ಗಿನಲಿ ೯೯

ಅನಿಮಿಷರು ಸಂದಣಿಸೆ ಅಭ್ರದಿ
ಹನುಮನಾಕ್ಷಣ ಬಂದು ಕೈಲಾ
ಗಿನಲಿ ಪಾಯವಧಾನ ಚಿತ್ತವಧಾನವೆಚ್ಚರಿಕೆ
ಎನಲು ರಥದಿಂದಿಳಿದು ರಘು ನಂ
ದನನು ಹೊಕ್ಕನು ರಾಜಭವನವ
ತನತನಗೆ ಪುರಜನರು ಕಾಣಿಕೆಗೊಟ್ಟು ನಮಿಸಿದರು ೧೦೦

ಗುರು ವಸಿಷ್ಠನ ಮತದಿ ತಮ್ಮಂ
ದಿರು ಸಹಿತ ಮಜ್ಜನವ ಮಾಡಿದ
ನರಸ ದಿವ್ಯ ಸುಗಂಧ ಮಾಲ್ಯಾಂಬರ ಸುಭೂಷಣವ
ಧರಿಸಿದರು ನಾಲ್ವರು ಕುಮಾರರು
ಹರುಷಮಿಗೆ ನಿಜಜನನಿಯರು ಮೂ
ವರಿಗೆ ವಂದಿಸಿ ಮೆರೆದರಗ್ಗದ ರಾಜತೇಜದಲಿ ೧೦೧

ಒಲಗಕೆ ನಡೆತಂದು ರಾಮನೃ
ಪಾಲನನುಜರು ಸಹಿತ ಮಂತ್ರೀ
ಜಾಲ ಬಾಂಧವ ಸಹಿತ ತಿರೆಯ ಸಮಸ್ತ ಧರಣಿಪರು
ಒಲಗದಿ ಮುನಿಮುಖ್ಯರೆಲ್ಲರು
ಲೀಲೆಯಿಂದ ಕುಳ್ಳಿರೆ ಸುಮಂತ್ರನು
ಕೋಲ ಗುರುವಿಗೆ ನಮಿಸಿಯಾಲೋಚಿಸಿದನೀ ಹದನ ೧೦೨

ವರನೃಪಾಲಗೆ ರಾಜಪಟ್ಟವ
ಧರಿಸಬಹುದೆ ಜೀಯಯೆನೆ ಭೂ
ಸುರರ ಬರಹೇಳೆನುತ ತರಿಸಿದರಖಿಳ ವಸ್ತುಗಳ
ತರಿಸಿ ಕವಳವನುಭಯರಿಗೆ ಕರೆ
ಕರೆಸಿ ಕೊಡಿಸಿದನಾ ಸುಮಂತನು
ಪುರವ ಸಲೆ ಶೃಂಗರಿಸೆ ಪರಿಚಾರರಿಗೆ ನೇಮಿಸಿದ ೧೦೩

ವಾರಣದ ಬೀದಿಗಳ ಘನ ಶೃಂ
ಗಾರದಿಂ ನವರತ್ನ ಜಲ್ಲಿಯ
ತೋರಣದ ಮಂಟಪದ ಸಿರಿಯಲಿ ಮೇಲುಕಟ್ಟುಗಳ
ಕಾರಳಿಯ ಕುಂಕುಮದ ನವ ಪ
ನ್ನೀರ ಚಳೆಯದ ಕಸ್ತುರಿಯ ಮತ
ಸಾರಳಿಯ ರಚನೆಯಲಿ ಶೃಂಗರಿಸಿದರು ಪಟ್ಟಣವ ೧೦೪

ಬರೆಸಿದರು ಓಲೆಗಳ ದಿಕ್ಕಿನ
ಅರಸುಗಳ ಬರಹೇಳಿ ಮುನಿ ಮು
ಖ್ಯರನು ಬಂದರು ಅವನಿಪಾಲಕರತುಳ ಬಲಸಹಿತ
ತರುಣಿಯರು ಶೃಂಗರಿಸಿದರು ಪರಿ
ಪರಿಯ ದಿವ್ಯದುಕೂಲ ವಸ್ತ್ರಾ
ಭರಣ ಭೂಷಿತರಾಗಿ ಪಿಡಿದರು ಕಲಶಕನ್ನಡಿಯ ೧೦೫

ಹರುಷದಲಿ ತಂತಮ್ಮ ಕೈಯಲಿ
ಪರಮ ಪುಣ್ಯ ಸುವಸ್ತುಗಳ ತಂ
ದಿರಿಸಿದರು ಹರುಷದಲಿ ನೆರೆದುದು ಬಹುಳ ಸಂಖ್ಯೆಯಲಿ
ಶರಧಿ ಮೇರು ದಿಗಂತದವನೀ
ಶ್ವರರು ಯಾಚಕ ಪಂಡಿತರು ಕವಿ
ವರರು ಗಾಯಕ ಮಲ್ಲ ದೈವಜ್ಞರು ಸುನರ್ತಕರು ೧೦೬

ಬಂದರತಿ ಬೇಗದಲಿ ವರ ತೃಣ
ಬಿಂದು ಮುನಿ ದಮನಾಖ್ಯ ಸನಕ ಸ
ನಂದ ಶೌನಕ ಸೂತ ಶತಮುಖ ಸುಮತಿ ಜಾಬಾಲಿ
ನಂದ ದಾಲ್ಭ್ಯ ಮರೀಚಿ ಲೋಗಾ
ನಂದ ಸುರಗುರು ರೋಮಜನು ಮುಚು
ಕುಂದ ನಾರದರಖಿಳ ತಪಸಿಗಳೈದಿ ತೊಗ್ಗಿನಲಿ ೧೦೭

ಅತ್ರಿ ಭಾರದ್ವಾಜ ವಿಶ್ವಾ
ಮಿತ್ರ ಗೌತಮ ವಾಮದೇವನ
ಗಸ್ತ್ಯ ಕಣ್ವಾಂಗೀರಸ ಮಾರ್ಕಂಡೇಯ ಮೈತ್ರೇಯ
ಸತ್ಯತಪ ಕೌಂಡಿನ್ಯ ಕೌಶಿಕ
ಪುತ್ರ ಶುಕ ವಾಲ್ಮೀಕಿಯಾ ಮುನಿ
ಪೋತ್ತಮರು ಸಂದಣಿಸಿದರು ರಘುನೃಪನ ಸಭೆಯೊಳಗೆ ೧೦೮

ಚ್ಯವನ ಜನ್ಹು ಮೃಕಂಡುಮುನಿ ಗಾ
ಲವ ಶತಾನಂದೈಕ ನಾರದ
ಶ್ರವತಿ ಕಶ್ಯಪ ಕಪಿಲ ಶೌನಕ ಸನಕ ಜಮದಗ್ನಿ
ಪವನ ಭಕ್ಷಣ ಗಾರ್ಗ್ಯಋಷಿ ಭಾ
ರ್ಗವ ಸನತ್ಸುತ ನಂದ ಜಯಮುನಿ
ನಿವಹದೊಡನೈತಂದನಾ ದೂರ್ವಾಸನೊಲವಿನಲಿ ೧೦೯

ಚೋಳ ಗುರ್ಜರ ದ್ರವಿಡ ವಂಗ ಕ
ರಾಳ ಬೋಟಕ ಸಿಂಧು ಶಿಬಿ ನೇ
ಪಾಳ ಪಾಂಡ್ಯ ಮರಾಟ ಸಿಂಹಳ ಹೂಣ ಸವ್ವೀರ
ಲಾಳ ಮಗಧ ವಿದರ್ಭ ರುತು ಪುಲಿ
ಯಾಳ ನಿಷಧ ಕಳಿಂಗವರ ಪಾಂ
ಚಾಳ ಬಹುದೇಶಾಧಿಪತಿಗಳು ಬಂದರೊಗ್ಗಿನಲಿ ೧೧೦

ಮಾಳವಾಂಧ್ರಾ ಕರುಷವರ ನೇ
ಪಾಳ ಬರ್ಬರ ಮತ್ಸ್ಯನೃಪ ಬಂ
ಗಾಳಮಾಂಧ್ರ ಮರಾಟ ಕೋಸಲ ಕೊಡಗ ಕರ್ನಾಟ
ಗೌಳ ಕುಂತಳ ಕೃಕರಪತಿ ಬ
ಲ್ಲಾಳ ಕೊಂಕಣ ಚೀನ ಕೈಕೆಯ
ರಾಳ ಮೇಳದಿ ಬಂದು ಹೊಕ್ಕರು ನೃಪನ ವರಸಭೆಯ ೧೧೧

ಕೇರಳಾಧಿಪ ಬಾಹ್ಲಿಕನು ಹ
ಮ್ಮೀರ ಚೈದ್ಯ ಕುರು ಅಶ್ವಪತಿ ಗಾಂ
ಧಾರ ಸಂಬಳ ತುಳುವನೃಪ ಕಾಶ್ಮೀರ ಸೌರಾಷ್ಟ್ರ
ಸೂರಸೇನ ನವಪ್ರಚೀನ ಸು
ಪಾರಿಯಾತ್ರ ಕರೂಷಚಿಥ
ಭೂರಮಣರ್ಕೈತಂದರತುಳ ಮನೋನುರಾಗದಲಿ ೧೧೨

ಆಕುಟಿಲನೆ ಕೇಳ್ ಪಾಂಡವಾಗ್ರಜ
ಮುಕುರವದನೆಯರುತ್ಸವದಿ ಜಾ
ನಕಿಯನಲಂಕರಿಸಿದರು ಮಾಲ್ಯಾಂಬರದಿ ಸಿರಿಮುಡಿಯ
ಸಕಲ ವೈಭವದಿಂದ ವೈಮಾ
ನಿಕರು ಕೈವಾರಿಸಲು ಗಗನ
ಸಖಿಯರ ನಡುವೆ ಮೃಗಾಕ್ಷಿ ಬಂದಳು ನೃಪನ ಗದ್ದುಗೆಗೆ ೧೧೩

ಭಾರತ ಭಾರಿಯ ಸತ್ತಿಗೆಯ ಚಾ
ಮರವ ಲಕ್ಷ್ಮಣದೇವ ಚಿಮ್ಮಲು
ಧರಿಸಿದನು ಶತ್ರುಘ್ನ ಗಿಂಡಿಯ ಹೆಗಲ ಹಡಪದಲಿ
ಮರುತಸುತ ಸೇವಿಸಲು ಚರಣದಿ
ಗುರು ವಸಿಷ್ಠನ ಸಮ್ಮುಖದಿ ರಘು
ವರನು ನಿಜಸತಿ ಸಹಿತ ಸಿಂಹಾಸನದಿ ರಂಜಿಸಿದ ೧೧೪

ವರ ವಿಭೀಷಣ ಜಾಂಬವಂತರು
ತರಣಿಸುತ ನಳ ನೀಲನಂಗದ
ಶರಭ ಶತಬಲಿ ಗವಯ ವೀರಗವಾಕ್ಷ ಮೊದಲಾದ
ಧುರವಿಜಯರೆಡವಂಕದಲಿ ನಿಂ
ದಿರಲು ಬಲದಲಿ ಸಿದ್ಧ ವಿದ್ಯಾ
ಧರರು ನೆರೆದರನೇಕ ವಿದ್ವಾಂಸರು ಕವೀಶ್ವರರು ೧೧೫

ಮೇಲುಮಣಿಗಳ ರತ್ನಕಾಂತಿಯ
ಮೌಳಿಗಳ ಮನ್ನೆಯರು ಮಂತ್ರೀ
ಜಾಲ ಸಹಿತಿದಿರಿನಲಿ ನಿಂದುದು ಮಕುಟವರ್ಧನರು
ಓಲಗದಿ ಮಿಗೆ ವಾರಸತಿಯರು
ಓಲಗಿಸೆ ರಘುನೃಪನನಾಗಳೆ
ತಾಳ ಮದ್ದಳೆ ಭೇರಿ ಡೆಂಕ ನಿನಾದ ರಂಜಿಸಿತು ೧೧೬

ಅಲ್ಲಿ ನೆರೆದ ಮುನೀಶರೆಲ್ಲರು
ಬಲ್ಲ ಭೂಸುರನಿವಹ ಮಂತ್ರಿಗ
ಳಲ್ಲಿ ಸುಮುಹೂರ್ತದಲಿ ಪಟ್ಟವ ಕಟ್ಟಿದರು ನೃಪಗೆ
ಸಲ್ಲಲಿತ ಸತ್ಕೀರ್ತಿ ವಧು ವರ
ನಲ್ಲಿ ನಿಲ್ಲದೆ ಬಂದು ಸೀತಾ
ವಲ್ಲಭನ ಪೊಂದಿದಳು ಕುಂತೀಸೂನು ಕೇಳೆಂದ ೧೧೭

ಗುರು ವಸಿಷ್ಠ ಮುನೀಂದ್ರ ಭೂಮೀ
ಸುರರೊಡನೆ ತಾ ಬಂದು ರಾಮನ
ಹರಸಿ ಮಂತ್ರಾಕ್ಷತೆಯ ತಳಿದರು ದೇವನಂಗದಲಿ
ಸುರರು ದುಂದುಭಿ ಮೊಳಗೆ ಹೂವಿನ
ಅರಳ ಸುರಿದರು ನಿರ್ಜರರು ಧರೆ
ಯರಸುಗಳು ಕೈಮುಗಿದು ಮುಯ್ಯಗಳನಿತ್ತರವನಿಪಗೆ ೧೧೮

ಮುನಿಸತಿಯರೊಡನೈದಿ ಭೂಸುರ
ವನಿತೆಯರು ಶೋಭನದ ಧವಳವ
ವಿನಯದಲಿ ಪಾಡಿದರು ಜಯಜಯರವ ನಿನಾದದಲಿ
ಕನಕರತ್ನದ ನೂಪುರದ ಕಾ
ಮಿನಿಯರೊಯ್ಯಾರದಲಿ ರಘುನಂ
ದನನ ಹರಸುತಲೆತ್ತಿದರು ನವರತ್ನದಾರತಿಯ ೧೧೯

ಆರು ಹೊಗಳುವಡರಿದು ಸಭೆಯಲಿ
ಸಾರ ಸಂಗೀತದ ವಿನೋದದಿ
ವಾರಕಾಂತಾಜನದೊಲೊಪ್ಪುವ ಕೇಳಮೇಳವದ
ಚಾರು ಗೀತ ನೃತ್ಯಗಳ ಸೇವಾ
ಗಾರಿಕೆಯನೇನೆಂಬೆನೈ ಜಂ
ಭಾರಿ ವೋಲಗದಂತೆ ಮೆರೆದುದು ನೃಪತಿಯಾಸ್ಥಾನ ೧೨೦

ಕರೆದು ಯಾಚಕ ಪಂಡಿತರ ಭೂ
ಸುರರ ಗಾಯಕ ಪಲ್ಲರನು ಕವಿ
ವರರಿಗಿತ್ತನು ಧೇನು ಕನಕಾಂಬರ ಸುವಸ್ತುಗಳ
ಅರಸುಗಳಿಗಾದರಿಸಿ ಕೊಟ್ಟನು
ಕರಿ ತುರಗ ರಥ ದಿವ್ಯ ಹೇಮಾಂ
ಬರ ಸುವಸ್ತುಗಳಿಂದ ಕಳುಹಿದನಾ ವಸಿಷ್ಠಮುನಿ ೧೨೧

ಕೊಟ್ಟ ಸುಮುಹೂರ್ತದೊಳಗಾಗ ವ
ಸಿಷ್ಠ ಗುರುವಿಂಗೆರಗಿ ರಘುವರ
ನೆಟ್ಟನೃತಂದಲ್ಲಿ ಹೊಕ್ಕನು ರಾಜಮಂದಿರವ
ಸೃಷ್ಟಿಗಧಿಪನ ಕೀರ್ತಿವಧು ಘನ
ನಿಷ್ಠೆಯಲಿ ಧಾವಳ್ಯವಸನವ
ನುಟ್ಟು ನಲಿದಾಡಿದಳು ತ್ರಿಜಗದ ಜನಹ ಜಿಹ್ವೆಯಲಿ ೧೨೨

ಅರಸ ಕೇಳ್ಮರುದಿವಸದಲಿ ರಘು
ವರನು ತನ್ನೋಲಗಕೆ ನೃಪರನು
ಕರೆಸಿದನು ನಿಜಮಂತ್ರಿ ಬಾಂಧವಜಾಲವರ್ಗವನು
ತರಣಿಸುತ ಜಾಂಬವ ವಿಭೀಷಣ
ರಿರದೆ ಬಂದರು ಕೈಮುಗಿದು ಕು
ಳ್ಳಿರಲು ಪರಿತೋಷದಲಿ ನುಡಿದನು ರಾಮ ನಸುನಗುತ ೧೨೩

ಕೇಳು ಲಕ್ಷ್ಮಣ ಕೇಳು ಜಾಂಬವ
ಕೇಳು ನಳ ನೀಲಾದಿ ಸುಭಟರು
ಕೇಳಿರೈ ನರೆದಲೆಗ ವ್ರೀಹಿಯರು ಸೆರೆಯೊಳಿರ್ದವರ
ಕಾಲ ಸವೆದುದು ದಿವಸವಿಂದಿಗೆ
ಏಳು ತಿಂಗಳು ಕಳೆದರವದಿರ
ಪಾಲಿಸಲು ಬೇಗನಿಲಸುತ ನೀ ಕರೆದು ತಾರೆಂದ ೧೨೪

ಹೈ ಹಸಾದವೆನ್ನುತ ವಂದಿಸೆ
ಬಾಹುಬಲದಗ್ಗಳಿಕೆ ಮಿಗೆ ನಿ
ರ್ವಾಹದಲಿ ಹೊರವಂಟನತಿ ವೇಗದಲಿ ಪಥವಿಡಿದು
ಸಾಹಸವನೇನೆಂಬೆ ವಜ್ರದ
ದೇಹನಲ್ಲಾ ಹನುಮ ತನ್ನ ಮ
ನೋಹರದ ಋಷಿಗಳನು ಕಂಡನು ಪಂಚನಂದಿಯಲಿ ೧೨೫

ಅವರ ಪಾದಾಂಬುಜಕೆ ವಂದಿಸಿ
ಪವನಸುತ ಬಿನ್ನೈಸಿದನು ರಾ
ಘವ ನೃಪಾಲನು ಕಳುಹೆ ಬಂದೆನು ನಿಮ್ಮ ದರುಶನಕೆ
ಅವಧಿ ಸವೆದುದು ಸೆರೆಮನೆಯೊಳಿ
ರ್ದವರನೊಡಗೊಂಡೀ ಕ್ಷಣವೆ ನೀ
ವವನಿಪನ ಸಮ್ಮುಖಕೆ ಚಿತ್ತೈಸೆಂದು ಕೈಮುಗಿದ ೧೨೬

ಹನುಮನಾಡಿದ ನುಡಿಗೆ ಗೌತಮ
ಮುನಿಪ ನಸುನಗುತೆದ್ದು ಬನದಲಿ
ಘನ ತಪೋಬಲ ಮಹಿಮರನು ಕರೆಸಿದನತುಳವೇಗದಲಿ
ಮನದಿ ಹರುಷಿತನಾಗಿ ಮುನಿ ಸೆರೆ
ಮನೆಯ ಪ್ರತಿವಾದಿಗಳನೊಡಗೊಂ
ಡನುಪಮಿತ ಗುಣನಿಲಯ ಮುನಿ ಹೊರವಂಟನಾಶ್ರಮವ ೧೨೭

ಬಂದನತಿ ಹರುಷದಲಿ ಮುನಿಕುಲ
ವೃಂದದೊಡನೈತರಲು ರಘುಕುಲ
ನಂದು ಬಿಜಯಂಗೈಸೆ ತಂದನು ರಾಜಮಂದಿರಕೆ
ಬಂದರೇ ಪ್ರತಿವಾದಿಗಳು ಕರ
ತಂದಿರೇ ನೀವೆನುತ ಮುನಿಕುಲ
ವೃಂದವನು ಸತ್ಕರಿಸಿ ಕುಳ್ಳಿರಿಸಿದನು ಗೌತಮನ ೧೨೮

ಇವರ ವ್ಯವಹಾರವನು ಪರಿಹರಿ
ಸುವ ವಿಚಾರವ ನೋಡಿ ಮನದಲಿ
ರವಿಕುಲಾನ್ವಯ ರಾಮ ನೆನೆದನು ಹೃದಯಶುದ್ಧಿಯಲಿ
ಶಿವನ ಧ್ಯಾನಿಸಲಾಕ್ಷಣವೆ ತ್ರೈ
ಭುವನಕರ್ತರು ಇಂದ್ರ ಮೊದಲಾ
ದವರು ಬಂದರಯೋಧ್ಯಾಪುರಪತಿಧಾಮನೋಲಗಕೆ ೧೨೯

ವಸುಗಳಮರರು ಭುಜಂಗಾಮರ
ರಸುರ ಕಿನ್ನರ ಯಕ್ಷ ರಾಕ್ಷಸ
ಶಶಿರವಿಗಳಾದಿತ್ಯ ವಿದ್ಯಾಧರರು ಗುಹ್ಯಕರು
ವಸುಧೆಯಮರರು ಕ್ಷತ್ರಿಯರು ಜೋ
ಯಿಸರು ವೈಶ್ಯ ಚತುರ್ಥರುನ್ನತ
ಕುಶಲ ವಿದ್ಯಾಧಿಕರು ನೆರೆದುದು ನೃಪನ ಸಭೆಯೊಳಗೆ ೧೩೦

ಇಂತೆಸೆವನಾ ಸಭೆಯೊಳಗೆ ಮತಿ
ವಂತ ನುಡಿದನು ಧಾನ್ಯವರ್ಗದ
ಸಂತತಿಯ ಬರಹೇಳಿಯೆನೆ ಸೆರೆಮನೆಯೊಳಿರ್ದವರು
ನಿಂತು ಕರಗಳ ಮುಗಿದು ಧರಣೀ
ಕಾಂತ ರಘುವರನೀ ಸುಬುದ್ಧಿಯ
ನೆಂತು ನಮಗರುಹುವಿರಿಯದ ಪೇಳೆಂದ ನರೆದಲೆಗ ೧೩೧

ಎನಲು ರಾಮನೃಪಾಲ ನೋಡಿದ
ಘನ ತಪೋಮಹಿಮರಿಗೆ ನುಡಿದನು
ಮನವ ವಂಚಿಸಲಾಗದೀ ಧರ್ಮವನು ನೆರೆತಿಳಿದು
ಅನುನಯದಿ ಪೇಳೆನೆ ಮುನೀಂದ್ರರು
ಅನಿಮಿಷರನೀಕ್ಷಿಸಿದರಲ್ಲಿಯು
ಘನಮಹಾಸಭೆಯೊಳಗೆ ಭಾರ್ಗವರಾಮನಿಂತೆಂದ ೧೩೨

ಆರು ನುಡಿಯರೆ ನೀವು ಹಿರಿಯರು
ಮೀರಿಸುವರಾರಿವರೊಳಗೆ ಗುಣ
ಸಾರನಾವನು ಪೇಳೆನಲು ಜಂಭಾರಿ ನಸುನಗುತ
ಸಾರಹೃದಯನು ನರೆದಲೆಗ ನಿ
ಸ್ಸಾರನೀ ವ್ರೀಹಿಯೆನಲು ಗುಣನಿಧಿ
ಮಾರುತಾತ್ಮಜ ನೋಡಿದನು ಸನ್ನೆಯಲಿ ನಾರದನ ೧೩೩

ಅಹುದು ಸುರಪನ ಮಾತು ನಿಶ್ಚಯ
ವಹುದು ನರೆದಲೆಗನೇ ಸಮರ್ಥನು
ಬಹಳ ಬಲಯುತ ಸೆರೆಗೆ ತಳ್ಳಲು ಕಾಂತಿಗೆಡಲಿಲ್ಲ
ಸಹಜವಿದು ಪರಪಕ್ಷವಾದಡೆ
ವ್ರೀಹಿ ಕರಗಿ ಕಂದಿದನು ಸೆರೆಯಲಿ
ವಿಹಿತವಿದು ಕೇಳೆಂದು ನಾರದ ನುಡಿದ ನಸುನಗುತ ೧೩೪

ಎಲ್ಲ ನವಧಾನ್ಯದಲಿ ಈತನೆ
ಬಲ್ಲಿದನು ಹುಸಿಯಲ್ಲ ಬಡವರ
ಬಲ್ಲಿದರನಾರೈದು ಸಲಹುವನಿವಗೆ ಸರಿಯುಂಟೆ
ನೆಲ್ಲಿನಲಿ ಗುಣವೇನು ಭಾಗ್ಯದಿ
ಬಲ್ಲಿದರ ಪತಿಕರಿಸುವನು ಅವ
ನಲ್ಲಿ ಸಾರವ ಕಾಣೆಯೆಂದನು ಕಪಿಲಮುನಿ ನಗುತ ೧೩೫

ಸುರಮುನಿಗಳಿಂತೆನಲು ಭೂಸುರ
ವರರು ಸಂತೋಷಿಸಲು ಸಭಿಕರು
ನರೆದಲೆಗ ನೀ ಬಾರೆನುತ ರಾಮನೃಪಾಲ ನೆರೆಮೆಚ್ಚಿ
ಕರೆದುಕೊಟ್ಟನು ತನ್ನ ನಾಮವ
ಧರೆಗೆ ರಾಘವನೆಂಬ ಪೆಸರಾ
ಯ್ತಿರದೆ ವ್ರೀಹಿ ನಾಚಿದನು ಸಭೆಯಲಿ ಶಿರವ ಬಾಗಿಸಿದ ೧೩೬

ಹರುಷ ತೋರಿದ ಮನದಿ ನಲಿವುತ
ನರೆದಲೆಗನೈತಂದು ರಾಮನ
ಸಿರಿಚರಣಕಭಿನಮಿಸೆ ದೇವಾಸುರರು ಕೊಂಡಾಡೆ
ಅರಸಿ ಮುತ್ತಿನ ಸೇಸೆಯನು ಭೂ
ಸುರರು ಮಂತ್ರಾಕ್ಷತೆಯನಿತ್ತು ಹ
ಚರಿಸಿದರು ರಾಗಿಯನು ಪೊಗಳಿದರಲ್ಲಿ ಮುನಿವರರು ೧೩೭

ಸರಸಿಜೋದ್ಭವ ಮೆಚ್ಚಿಕೊಟ್ಟನು
ಕರಕಮಂಡಲ ಪಾತ್ರೆಯನು ಶಂ
ಕರ ತ್ರಿಶೂಲವನಿತ್ತ ಕೊಟ್ಟನು ಕಾಲ ದಂಡವನು
ನಾರದನು ಚಕ್ರವನು ಕೊಟ್ಟನು
ಉರುತರದ ಕೂರಿಗೆಯ ವಾಸವ
ನುರಗಪತಿ ವಾಸುಕಿಗಳಿತ್ತರು ನೇಣುಪಾಶಗಳ ೧೩೮

ಧನವನಿತ್ತನು ಯಂತ್ರರಕ್ಷಯ
ಬನದೊಳಿಹ ಮೂಲಿಕೆಯ ಮಂತ್ರವ
ವಿನಯದಿಂದ ವಿಭೂತಿಯನು ವರ ಕಾಲಭೈರವನು
ಇನ ಶಶಿಗಳಾದರಿಸಿ ಕೊಟ್ಟರು
ಘನತರದ ಜಲ್ಲರಿಯ ವರುಣನು
ಕನಕಮಣಿ ನಿರ್ಮಿತದ ಕಡಗವನಿತ್ತು ಮನವೊಲಿದು ೧೩೯

ಕರೆಸಿದಳು ಶರ್ವಾಣಿ ತನ್ನಯ
ಮರುಳು ಬಳಗವನೆಲ್ಲ ನೀವೀ
ಧರಣಿಯಲಿ ಸತಿರೂಪತಾಳ್ದ ಗಣಿತದ ಮನೆಗಳಲಿ
ಹುರುಳುಗೆಡಿಸದೆ ಸರ್ವ ಭೂತಾ
ತ್ಮರಿಗೆ ಪಕ್ವಾನ್ನವನು ನೀಡೆಂ
ದುರುತರದ ಪ್ರೇಮದಲಿ ಕಳುಹಿದಳಗಜೆ ಕರುಣದಲಿ ೧೪೦

ಈ ತೆರದಿ ದೇವಾಸುರರು ನವ
ನೀತಿಮಾರ್ಗದಿ ಕರೆದು ವರಗಳ
ಪ್ರೀತಿಯಿಂದಾದರಿಸಿ ಕೊಟ್ಟರನೇಕ ವಿಭವದಲಿ
ಭೂತಳದ ಜನರೊಡನೆ ನೀ ಪ್ರ
ಖ್ಯಾತನಾಗೆನೆ ನರೆದಲಿಗ ನೆರೆ
ವಾತನಾದನು ಮರ್ತ್ಯದಲಿ ನರನಾಥ ಕೇಳೆಂದ ೧೪೧

ಇನಕುಲೇಂದ್ರನ ಪದಕೆ ವಂದಿಸಿ
ಹನುಮ ಬಿನ್ನೈಸಿದನು ನೀವಾ
ತನಿಗೆ ನಾಮಾಂಕಿತವನಿತ್ತಿರಿ ನಿಮ್ಮನಗಲುವೆನೆ
ಎನಗೆ ಹದನೆಂತೆನಲು ನಸುನಗೆ
ಮಿನುಗೆ ನುಡಿದನು ರಾಮನಿಷ್ಟವ
ನಿನಗೆ ನಿನ್ನಭಿಧಾನವಾಗಲು ಹನುಮ ಕೇಳೆಂದ ೧೪೨

ಸೇವಕನ ಹಿಂದುಳಿದು ದೇವರು
ನೀವು ಮುಂದಡಿಯಿಡಲು ನಿಮ್ಮದ
ದಾವ ಗುಣವೆನೆ ಹನುಮನಾಡಿದ ನುಡಿಗೆ ನಸುನಗುತ
ನಾವು ಜನನದಿ ಮುಂದು ಕಲಹದ
ಡಾವಿನಲಿ ನಾ ಮುಂದೆ ನಡೆಯೆಂ
ದೀ ವಿಚಾರವ ತಿಳುಹಿದನು ನರನಾಥನನಿಲಜಗೆ ೧೪೩

ಭಾನುವಂಶಜನಾ ವಿಭೀಷಣ
ಸಾನವನನೀಕ್ಷಿಸಲು ನಸುನಗು
ತಾ ನರೇಂದ್ರನ ಸನ್ನಿಯಲಿ ನಿಷ್ಕವಕನ ಕರೆದು
ದಾನವೇಶ್ವರನಾ ಸತಿಗೆ ಸು
ಮ್ಮಾನದಿಂ ಕೊಡಲೀರ್ವರು ನವ
ಧಾನ್ಯದಲಿ ವಿಖ್ಯಾತರಾದರು ನೃಪತಿ ಕೇಳೆಂದ ೧೪೪

ಹರಿಹರ ಬ್ರಹ್ಮಾದಿ ದೇವಾ
ಸುರರು ಮಹಾಮುನೀಶ್ವರರು ವಾ
ನರರು ಕೊಂಡಾಡಿದರು ರಘುಕುಲ ಸಾರ್ವಭೌಮಕನ
ಸುರರು ದುಂದುಭಿ ಮೊಳಗೆ ಮಲ್ಲಿಗೆ
ಯರಳ ಮಳೆಗರೆದುವು ವಿಮಾನದಿ
ಪುರಕೆ ತೆರಳಿದರಲ್ಲಿ ಹರದುದು ನೃಪತಿಯಾಸ್ಥಾನ ೧೪೫

ಇಂತು ಸಭೆಯಲಿ ಮಾನಭಂಗವ
ದೆಂತು ಬಂದುದು ತನಗೆನುತಲತಿ
ಚಿಂತೆಯಲಿ ಕಡುನೊಂದು ತಲೆಗುತ್ತಿದನು ನೀರೊಳಗೆ
ಇಂತು ಪರಿತಾಪದಲಿ ಲಕ್ಷ್ಮೀ
ಕಾಂತ ಶಿವಶಿವ ಎನುತಲಿರೆ ಭೂ
ಕಾಂತ ದಶರಥರಾಮನಾಥನು ಕರೆದು ಲಾಲಿಸಿದ ೧೪೬

ಮರುಳೆ ಬಾರೈ ಪ್ರೀಹಿಯೆ ಮನದಲಿ
ಕೊರಗಿ ಚಿಂತಿಸಲೇಕೆ ನಾವೀ
ನರೆದಲೆಗನತಿಶಯವ ಮಾಡಿದೆವೆಂದು ಕನಲಿದೆಯ
ಧರೆಗೆ ಹೊದ್ದಿದ ಕ್ಷಾಮಗಾಲದಿ
ಕರುಣದಿಂ ನಡೆತಂದು ಲೋಕವ
ಹೊರೆವನದು ಕಾರಣವೆ ಪತಿಕರಿಸಿದೆವು ಕೇಳೆಂದ ೧೪೭

ದೀನರಲಿ ದಾರಿದ್ರ್ಯ ಜನದಲಿ
ನೀನು ನಿರ್ದಯನೆಂದೆವಲ್ಲದೆ
ಹೀನಗಳೆದವರಲ್ಲ ನಿನ್ನನು ನಾವು ಸಭೆಯೊಳಗೆ
ಮಾನುಷನು ನಮ್ಮೆಡೆಗೆ ನೀ ಸುರ
ಧೇನುವಿಗೆ ಸಮ ನಿನ್ನ ಚಿತ್ತದಿ
ಹಾನಿ ತೋರಲದೇಕೆ ಬಿಡುಬಿಡು ಚಿಂತೆ ಯಾಕೆಂದ ೧೪೮

ದೇವರಿಂಗೆ ಪರಮಾನ್ನ ನೀ ಮನು
ಜಾವಳಿಗೆ ಪಕ್ವಾನ್ನಮೀತನು
ನೀವು ಧರೆಯೊಳಗಿಬ್ಬರತಿ ಹಿತದಲ್ಲಿ ನೀವಿಹುದು
ನಾವು ಕೊಟ್ಟೆವು ವರವ ಸಲ್ಲುವು
ದಾವ ಕಾಲದಲಿನ್ನು ನೀವೇ
ಪಾವನರು ಪರಮಸುಖಿಯೆಂದುಪಚರಿಸಿದನು ನೃಪತಿ ೧೪೯

ನಲವು ಹಿಂಗಿದ ವ್ರೀಹಿಯ ರಾಗಿಯು
ಜಲವ ಹಸ್ತದೊಳೊರಸಿ ಇಂದ್ರನ
ಬಳಿಗೆ ಕಳುಹುವೆ ನಿನ್ನ ಸಂಶಯವೇಕೆ ಚಿತ್ತದಲಿ
ಕಲಿತನವ ಕೈಕೊಂಡು ಸತ್ಯದ
ಹೊಲಬುದಪ್ಪದೆ ಚೋಳದೇಶವ
ನೊಲಿದು ನೀ ಸಲಹೆಂದು ನೇಮವನಿತ್ತು ಕಳುಹಿಸಿದ ೧೫೦

ಪಾಂಡವಾಗ್ರಜ ಕೇಳಿದೈ ಮಾ
ರ್ತಾಂಡ ವಂಶಜ ದಾಶರಥಿಯಾ
ಖಂಡಲನ ಮತವಿಡಿದು ಕರೆಸಿದನುತಳ ಧಾನ್ಯವನು
ಗಂಡುಗಲಿಗಳು ನೀವು ಧರಣೀ
ಮಂಡಲದೊಳಾದರಿಸಿ ದೇವರ
ನಂಡಲೆದು ಸಲಹೆಂದು ನೇಮವನಿತ್ತು ಕಳುಹಿಸಿದ ೧೫೧

ತಪಸಿಗಳನಾದರಿಸಿ ದೇಶಾ
ಧಿಪರ ಮನ್ನಿಸಿ ಧರಣಿಯಮರರ
ನುಪಚರಿಸಿ ವಿದ್ವಾಂಸ ಕವಿಜನ ಮಲ್ಲ ಗಾಯಕರ
ಅಪರಿಮಿತ ಯಾಚಕರ ಕಳುಹಿಸಿ
ತಪನತನಯನ ಸತಿಯರಿಗೆ ರಘು
ನೃಪತಿ ಕೊಡಿಸಿದನಖಿಳ ದಿವ್ಯಾಂಬರ ಸುಭೂಷಣವ ೧೫೨

ಪಾಂಡವಾಗ್ರಜ ಕೇಳು ಘನ ಕೋ
ದಂಡ ದೀಕ್ಷಾಚಾರ್ಯ ನೀ ಭೂ
ಮಂಡಲದೊಳತಿ ಕೀರ್ತಿವಡೆದನು ಸತ್ಯಧರ್ಮದಲಿ
ಚಂಡ ವಿಕ್ರಮ ರಾಮ ನೃಪ ಮಾ
ರ್ತಾಂಡಸುತ ಮೊದಲಾದ ವಾನರ
ತಂಡವನು ಕಳುಹಿಸಿ ಸುವಸ್ತುವನಿತ್ತು ಸತ್ಕರಿಸಿ ೧೫೩

ಕರುಣದಿಂದ ವಿಭೀಷಣನ ಪತಿ
ಕರಿಸಿ ಕರಿ ರಥ ತುರಗ ವಸ್ತ್ರಾ
ಭರಣವಿತ್ತುಪಚರಿಸಿ ಕಳುಹಿದನಾಗಲಾಸುರರನು
ಗುರು ವಸಿಷ್ಠನ ಮತದಿ ತಮ್ಮಂ
ದಿರು ಸಹಿತ ಸಾಮ್ರಾಜ್ಯವಾಳಿದ
ವರದನಗಪತಿಯಾದಿ ಕೇಶವರಾಮ ವಿಭವದಲಿ ೧೫೪

ವ್ಯೋಮ ಕೇಶವಿರಿಂಚಿವಾಸವ
ತಾಮರಸದಳನಯನರಿವರು ಮ
ಹಾಮಹಿಮರೀ ವ್ರೀಹಿಯ ನರೆದಲೆಗರಾ ವಿವಾದವನು
ರಾಮಸಭೆಯಲಿ ತೀರಿದುದು ಸು
ತ್ರಾಮನೋಲಗದಲ್ಲಿ ಕೇಳ್ದೆವು
ರಾಮಧಾನ್ಯದ ಕಥೆಯನಭಿವರ್ಣಿಸಿದೆ ನಿನಗೆಂದ ೧೫೫

ಆಲಿಸಿದೆನೆಲೆ ಮುನಿಪ ನೀವಿದ
ಪೇಳೆ ಕೇಳ್ದೆನು ಮೇಲೆ ಸಜ್ಜನ
ಜಾಲ ತಣಿಯಿತು ಸಕಲ ಕರ್ಣಾಮೃತದಿ ರಂಜಿಸಿತು
ಹೇಳಲೇನವ ಮನದ ಬೇಸರ
ಬೀಳುಕೊಂಡುದು ಹರುಷ ಚಿತ್ತದಿ
ಛಾಳಿ ಹರಿಯಿತ್ತೆನುತ ಮುನಿಪದಕೆರಗಿ ಕೈಮುಗಿದ ೧೫೬

ಅರಸ ನೀ ಮನವೊಲಿದು ಕೇಳದ
ಚರಿತೆ ತಾನೊಂದಿಲ್ಲ ಲೋಕದಿ
ಪರಮಪುಣ್ಯದ ರಾಮಕಥೆಯಿದ ಕೇಳ್ದೆ ನೀನಿಂದು
ಕೊರತೆಯುಂಟೇ ಇಷ್ಟಭೋಗವ
ಹರಿ ಕೊಡುವ ನಿಮಗಿನ್ನು ಎನುತುಪ
ಚರಿಸಿ ಕಳುಹಿಸಿಕೊಂಡು ಮುನಿ ಹೊರವಂಟನಾಶ್ರಮಕೆ ೧೫೭

ಶರಧಿಶಯನ ಮುಕುಂದ ಸಚರಾ
ಚರಭರಿತ ನಿರ್ಗುಣ ನಿರಾಮಯ
ಸುರ ನರೋರಗವಂದ್ಯ ವರಪುರಪಾದಿಕೇಶವನ
ಚರಣದಂಕಿತವಾಗಿ ಪೇಳಿದ
ಪರಮಧಾನ್ಯದ ಚರಿತೆ ಸಂತತ
ಧರೆಯೊಳಿಂತೊಪ್ಪಿಹುದು ಆಚಂದ್ರಾರ್ಕ ಪರಿಯಂತ ೧೫೮



# ಶ್ರೀ ಜಗನ್ನಾಥದಾಸರ ಕೃತಿಗಳು

## ಅಕ್ಷರಾನುಕ್ರಮಣಿಕೆ


| | ಪುಟ | | ಪುಟ |
|---|---|---|---|
| ಅಪಮೃತ್ಯು ಪರಿಹರಿಸೋ | ೩೧೦ | ದಾಸರಿಗುಂಟೆ ಭಯಶೋಕ | ೨೭೨ |
| ಅತಿ ಶೋಭಿಸುತಿದೆ ಶ್ರೀಪತಿವಾಹನ | ೩೧೮ | ದಾಸೋಹಂ ತವ ದಾಸೋಹಂ ತವ | ೨೨೬ |
| ಅಪರಾಧವಣಿಸಪಲೆ ಕಾಯಬೇಕೋ | ೩೨೨ | ದುರಿತವನ ಕುಠಾರಿ ದುರ್ಜನಕುಲವೈರಿ | ೭೪೦ |
| ಅರಿತವರಿಗತಿಸುಲಭ ಹರಿಯ ಪೂಜೆ | ೩೩೨ | ಧನ್ಯನಾದೆ ವಿಠಲನ ಕಂಡು | ೨೬೭ |
| ಆವಭಯವಿಲ್ಲವೋ ಆವಭಯವಿಲ್ಲ | ೨೬೮ | ನರಸಿಂಹ ಪಾಹೀ ಲಕ್ಷ್ಮೀನರಸಿಂಹ | ೩೨೫ |
| ಆ ವೆಂಕಟಗಿರಿನಿಲಯನಂಘ್ರಿ | ೩೪೧ | ನಿನ್ನ ಸಂಕಲ್ಪಾನುಸಾರ ಮಾಡೊ | ೨೬೭ |
| ಇಂದು ನೋಡಿದೆ ನಂಪತೀರ್ಥ | ೨೭೪ | ನಿಲ್ಲುಬಾರೋ ದಯಾನಿಧೆ | ೩೨೩ |
| ಇದು ನಿನಗೆ ಧರ್ಮವೆ ಇಂದಿರೇಶ | ೩೨೯ | ನಿನ್ನ ದಾಸರದಾಸನೆಂತಾಹೆನೊ | ೩೨೬ |
| ಇಂದಿರೆ ಇಂದುವದನೆ ಸರಸಿಜ | ೩೪೬ | ನೀ ನನಲ್ಲನೆ ಇವನು ನೀಚನಲ್ಲವೆ | ೩೦೫ |
| ಉಗಾಭೋಗ | ೩೫೪ | ನೀಲಲೋಹಿತ ಪಾಲಯಮಾಂ | ೩೨೨ |
| ಎಂದು ಕಾಂಬೆನೊ ಪಾಂಡುರಂಗ | ೨೯೨ | ಪವಮಾನ ನಮ್ಮ ಗುರು ಪವಮಾನ | ೩೧೨ |
| ಎಂಥಾದ್ದೋ ಶ್ರೀ ವೈಕುಂಠ | ೩[illegible] | ಪತಿತಪಾವನ ಪೂರ್ಣಕಾಮ ನೀನೇ | ೩೩೦ |
| ಕರುಣಸನಗಿನಿತು ಕರುಣಾಳು ನಿನ್ನ | ೨೬೫ | ಪನ್ನಗಾದ್ರಿ ನಿವಾಸ | ೩೩೪ |
| ಕಂಡೆ ಪಂಢರಿರಾಯನ ತನ್ನನು | ೨೨೫ | ಪ್ರಣವ ಪ್ರತಿಪಾದ್ಯ ಪ್ರಹ್ಲಾದವರದ | ೨೯೭ |
| ಕರುಣಿಗಳೊಳಗೆಣೆಗಾಣೆ ನಿನಗ | ೨೯೮ | ಪಾಲಿಸೆನ್ನ ಪಾವನ್ನ ಗುಣರನ್ನ | ೨೬೬ |
| ಕೃಷ್ಣರಾಯ ನಿನ್ನ ಕೃತ್ಯಗಳನು | ೩೨೨ | ಪಾಲಿಸೋ ನರಸಿಂಹ ಪಾಲಿಸೊ | ೩೧೯ |
| ಕಾಯೊ ಕಾಯೊ ಕಮಲಾಯತಾಕ್ಷ | ೨೨೬ | ಪ್ರಾಣದೇವ ನೀನಲ್ಲದೆ ಕಾಯ್ವರ | ೩೨೩ |
| ಗತಿಯಾವುದೆನಗ ಶ್ರೀಪತಿಯೆ | ೨೯೦ | ಪಿಡಿಯೆನ್ನ ಕೈಯ ರಂಗಯ್ಯ | ೨೫೯ |
| ಗಿರಿರಾಜ ಗಿರಿರಾಜ | ೩೧೦ | ಫಲವಿದು ಬಾಳ್ದುದಕೆ ಸಿರಿನಿಲಯನ | ೨೯೮ |
| ಗೋಪಾಲದಾಸರಾಯ ನಿನ್ನಯ | ೨೪[illegible] | ಬಯಸದಿರಹಿಕ ಸುಖಗಳನುದಿನ | ೨೬೦ |
| ಜಗದಾಪ್ತ ವೃಷ್ಣ ಚಿಂತಿಪುದು | ೩೦೨ | ಬಲು ರಮ್ಯವಾಗಿದೆ ಹರಿಯ ಮಂಚ | ೨೯೪ |
| ತಂತ್ರಸಾರ | ೩೪೬ | ಬಂಧನವ ಪರಿಹರಿಸು ಭವವಿದೂರ | ೨೨೨ |
| ತತ್ತ್ವ ಸುವ್ವಾಲಿಯ ಕೆಲಪದಗಳು | ೩೫೧ | ಬಾ ವೆಂಕಟಶೈಲಾಧಿಪ ಮನ್ಮನಕೆ | ೩೦೨ |
| ತುತಿಸಬಲ್ಲೆನೆ ನಾನಿನ್ನ ವೆಂಕಟರನ್ನ | ೩೩೫ | ಬನ್ನಪೈಪೆ ನಿನಗಾನು ಭೀಮಸೇನ | ೨೫೫ |
| ದಯಮಾಡೆ ದಯಮಾಡೆ ತಾಯೆ | ೨೮೯ | ಬೇಡಲೇತಕೆ ಪರರ ದೇಹಿಯೆಂದು | ೨೭೦ |
| ದಯವಾಗೊ ದಯವಾಗೋ | ೨೭೪ | ಭಾರತೀ ಮಜ್ಜನನೀ ಭಾರತೀ | ೩೨೧ |
| ದಾಸರಾಯ ಪುರಂದರದಾಸರಾಯ | ೨೫೧ | ಮನವೆ ಮರೆವರೇನೋ ಹರಿಯ ಬಹು | ೨೭೧ |

| | ಪುಟ | | ಪುಟ |
|---|---|---|---|
| ಸುಷ್ವಾಂತರ್ಗತ ವೇದವ್ಯಾಸ | ೩೦೬ | ಶಂಭೋ ಸುರ ಗಂಗಾಧರನೆ | ೭೫೩ |
| ಮಂಗಳ ಗುರು ರಾಘವೇಂದ್ರಗೆ | ೩೧೧ | ಶರಣು ಮೃತ್ಯುಂಜಯ ಶರಣು | ೭೭೮ |
| ಮಾರುತ ಮುಖ್ಯನಕ ಮಾರುತ | ೨೭೧ | ಶ್ರೀ ವೇಂಕಟ ಶೈಲಾಧಿಪ ನಮೋ | ೩೩೪ |
| ಮುಕ್ತನಲ್ಲದೆ ಭವದಿ ಮುಕ್ತನಲ್ಲವೆ | ೭೬೪ | ಶ್ರೀ ರಾಘವೇಂದ್ರ ನಿಮ್ಮ ಚಾರು | ೭೫೨ |
| ಯಾತರಭಯ ಶ್ರೀನಾಥನ ವರವು | ೭೫೮ | ಶ್ರೀನಿಕೇತನ ಪಾಲಯಮಾಂ | ೨೫೫ |
| ಯಾತರವ ನಾನಯ್ಯ ಇಂದಿರೇಶ | ೩೭೪ | ಶ್ರೀ ವೇಂಕಟಾಚಲನಿವಾಸ ನಿನ್ನ | ೨೮೨ |
| ರಘುನ ದೊರಕಿತಲ್ಲ ಎನಗೆ ದಿವ್ಯ | ೨೫೦ | ಶ್ರೀ ಮಾರುತಾತ್ಮ ಸಂಭೂತ | ೨೯೧ |
| ರಥವನೇರಿದ ರಥಿಕನ್ಯಾರೆ | ೭೬೧ | ಶ್ರೀ ಮಧ್ವ ಚಿತ್ತಮಂದಿರನೆ | ೩೯೭ |
| ರಂಗ ನಿನ್ನ ಕೊಂಡಾಡುವೆ | ೨೬೨ | ಶ್ರೀಷದೇವ ವಾರುಣಿಪತಿ ಪಾಹಿ | ೨೯೪ |
| ರಣ್ವಸೂ ಶ್ರೀತ ಶ್ರೀನಿವಾಸ | ೨೮೭ | ಶೇಷ ಪರ್ಯಂಕ ಶಯನ | ೩೧೮ |
| ರಾಘವೇಂದ್ರ ಯತಿಸಾರ್ವಭೌಮ | ೨೭೯ | ಸ್ಮರಿಸು ಸಂತತ ಹರಿಯನು ಮನವೆ | ೨೫೬ |
| ರಾಮನ ನೋಡಿರೈ ನಿಮ್ಮಯ | ೩೭೭ | ಸರ್ವಾಂತರ್ಯಾಮಿ ಸಲಹೊ ಎನ್ನ | ೨೭೬ |
| ರಾಯಬಾರೋ ತಂದೆತಾಯಿ ಬಾರೋ | ೩೨೭ | ಸು ಏದಿ | ೩೪೫ |
| ರೋಗಹರ ಕೃಪಾಸಾಗರ ಶ್ರೀಗುರು | ೩೭೭ | ಸಾರಿದ ಡಂಗುರ ಯಮನು | ೩೦೩ |
| ಲಂಬೋದರ ರಕ್ತಾಂಬರಧರ | ೩೧೧ | ಸಿರಿರಮಣ ತವಚರಣ ದೊರಕುವುದು | ೩೦೮ |
| ವಂದಿಪೆ ನಮ್ಮ ಮುದ್ದು ಶಾರದೆ | ೨೫೪ | ಸೋಮ ಶಿವ ಶರ್ವಭವ ಶ್ರೀಕಂಠ | ೩೩೩ |
| ವ್ಯರ್ಥ ಕಳೆವರೇನೋ ಕಾಲವ | ೨೭೯ | ಹಿಂದಿಲ್ಲ ಇಂದು ಮುಂದಿಲ್ಲ | ೩೩೩ |
| ವಾದಿರಾಜ ಗುರು ನೀ ದಯ | ೨೯೬ | ಹೊಂದಿ ಬದುಕಿರೊ ರಾಘವೇಂದ್ರ | ೨೯೫ |
| ವಿರಲಯ್ಯ ವಿರಲಯ್ಯ | ೩೨೬ | | |

ಶ್ರೀರಾಮ ಸಹಾಯಂ

# ಶ್ರೀ ಜಗನ್ನಾಥದಾಸರ ಸಂಕ್ಷೇಪ ಚರಿತ್ರೆ

ನಿಜಾಂ ಸಂಸ್ಥಾನಕ್ಕೆ ಸೇರಿದ ಮಾನವೀ ಮಂಡಲದಲ್ಲಿ ಬ್ಯಾಗವಟ್ಟಿ ಎಂಬುದೊಂದು ಗ್ರಾಮವಿದೆ ಆ ಗ್ರಾಮದಲ್ಲಿ ಶಾಲಿವಾಹನಶಕೆ ೧೭ನೇ ಶತಮಾನದ ಮಧ್ಯಭಾಗದಲ್ಲಿ ನರಸಪ್ಪನೆಂಬೊಬ್ಬ ಬ್ರಾಹ್ಮಣೋತ್ತಮನು ಕರಣೀಕನಾಗಿ ಕೆಲಸ ಮಾಡುತ್ತಿದ್ದನು ಕೆಲವುಕಾಲ ಹೀಗೆ ಉದ್ಯೋಗದಲ್ಲಿದ್ದು, ತರುವಾಯ ಸಂಸಾರ ತಾಪತ್ರಯಕ್ಕೆ ಒಳಪಟ್ಟ ಆತನು, ಒಂದಾನೊಂದುವೇಳೆ ದುರ್ದೈವ ವಶದಿಂದ, ಸರ್ಕಾರದ ಹಣವನ್ನು ಸಕಾಲಕ್ಕೆ ತಲುಪಿಸದೆ ತಪ್ಪಿದನು ಈ ಸಂಗತಿಯನ್ನು ತಿಳಿದ ಆ ತುರುಷ್ಕ ಪ್ರಭುವು, ಶ್ಯಾನುಭೋಗನು ರಾಜ ದ್ರೋಹ ಮಾಡಿದನೆಂಬ ಅಪರಾಧ ಹೊರಿಸಿ ಅಂಗಮರ್ದನ ಶಿಕ್ಷೆ ಮಾಡಿಸಿದನು ನರಸಪ್ಪನು ತನಗೆ ಪ್ರಾಪ್ತವಾದ ದುರ್ವಿಧಿಗಾಗಿ ಮಹಾ ಚಿಂತಾಕ್ರಾಂತನಾಗಿ, ಮುಂದೆ ಲೌಕಿಕ ವಿಚಾರಗಳ ಅಶಾಶ್ವತ ಸ್ಥಿತಿಯನ್ನು ಮನನ ಮಾಡುತ್ತಾ ಬರಲು, ಕ್ರಮವಾಗಿ ಮನಸ್ಸು ವೈರಾಗ್ಯ ಪಥವನ್ನು ಅವಲಂಬಿಸಿತು ತರುವಾಯ ವೈರಾಗ್ಯಪರ ಚಿತ್ತವೃತ್ತಿಯ ನರಸಪ್ಪನು, ಪರತತ್ವ ವಿಚಾರದಲ್ಲಿ ತಕ್ಕ ಗುರು ವನ್ನು ಆಶ್ರಯಿಸಿ ಅನುಭವ ಹೊಂದಬೇಕೆಂದು ಅಲ್ಲಲ್ಲಿ ಹುಡುಕುತ್ತಿರಲು, ಪೂರ್ವಪುಣ್ಯದಿಂದ ಆತನಿಗೆ ಶ್ರೀ ಪಂಗನಾಮ ತಿಮ್ಮಣ್ಣದಾಸರಾಯರ ದರ್ಶನ ವಾಯಿತು ಅಪರೋಕ್ಷ ಜ್ಞಾನಿಗಳಾದ ಆ ಮಹಾನುಭಾವರು, ನರಸಪ್ಪನ ಜನ್ಮ ಪಾವಿತ್ರ್ಯತೆಯನ್ನು ಕಂಡು ಸಂತುಷ್ಟರಾಗಿ, ಆತನಿಗೆ 'ನರಸಿಂಹ ವಿಠಲ' ಎಂದು ಅಂಕಿತ ಪ್ರದಾನ ಮಾಡಲು, ಆ ಅಂಕಿತದಿಂದ ಆತನು, ಶ್ರೀಹರಿ ಮಹಿಮೆಯನ್ನು ಪಾಡುತ್ತಾ ಸಂತೋಷದಿಂದ ಕಾಲಯಾಪನೆ ಮಾಡಿದನು

ಹೀಗಿರಲು ಶ್ರೀ ನರಸಿಂಹದಾಸರ ಪತ್ನಿ ಲಕ್ಷ್ಮಕ್ಕನೆಂಬ ಸಾಧ್ವೀಮಣಿಯು ಗರ್ಭಧಾರಣ ಮಾಡಿ, ಶಾ ಶ. ೧೬೯೯ನೆಯ ಕೀಲಕನಾಮ ಸಂವತ್ಸರ ಶ್ರಾವಣ

ಶುದ್ಧ ಬಿದಿಗೆಯ ದಿನ ಒಂದು ಪುತ್ರರತ್ನವನ್ನು ಪ್ರಸವಿಸಿದಳು ನರಸಿಂಹದಾಸರು ಆ ಮಗುವಿಗೆ ಶ್ರೀನಿವಾಸ ಎಂದು ನಾಮಕರಣಮಾಡಿ, ಪ್ರೀತಿಯಿಂದ ಕಾಪಾಡು ತ್ತಿರಲು, ಮಗುವು ದಿನದಿನಕ್ಕೆ ಆಯುರಾರೋಗ್ಯಗಳಿಂದ ತಾಯಿತಂದೆಗಳಿಗೆ ಆನಂದದಾಯಕವಾಗಿ ಬೆಳೆಯಸಾಗಿತು ಆಜೀವನ ಜನ್ಮಾಂತರ ಸಂಸ್ಕಾರವನ್ನು ತಿಳಿದ ಅಪರೋಕ್ಷ ಜ್ಞಾನಿಗಳಾದ ಮಹಾನುಭಾವರು, ಈ ಮಗುವು ಮಹಾ ಭಗವದ್ಭಕ್ತನಾದ ಪ್ರಹ್ಲಾದನ ಅನುಜ ಸಹ್ಲಾದನ ಸುಚೇತನದ ಅವತಾರವೆಂದು ಉದ್ಗರಿಸಲು, ಅದನ್ನು ಕೇಳಿದ ನರಸಿಂಹದಾಸರು ತಮ್ಮ ಪುಣ್ಯೋದಯಕ್ಕಾಗಿ ಪರಮಾನಂದಗೊಂಡು, ಹರಿಮಹಿಮೆಯನ್ನು ಬಗೆಬಗೆಯಿಂದ ಕೊಂಡಾಡು ತ್ತಿದ್ದರು ಮಗು ಶ್ರೀನಿವಾಸನು ದಿನದಿನಕ್ಕೆ ಅಭಿವೃದ್ಧಿಯಾಗುತ್ತಾ ಯೋಗ್ಯ ವಯಸ್ಸಾಗಲು ಉಪನಯನಾದಿ ವಿಧ್ಯುಕ್ತ ಸಂಸ್ಕಾರಗಳನ್ನು ಹೊಂದಿ, ಶ್ರೀ ರಾಘವೇಂದ್ರಸ್ವಾಮಿಗಳವರ ಪೀಳಿಗೆಗೆ ಸೇರಿದ ಶ್ರೀ ವರದೇಂದ್ರಸ್ವಾಮಿ ಗಳವರನ್ನು ಆಶ್ರಯಿಸಿ, ಅವರಲ್ಲಿ ಶಬ್ದಶಾಸ್ತ್ರವನ್ನೂ, ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಗಳನ್ನೂ ಆಮೂಲಾಗ್ರ ವ್ಯಾಸಂಗಮಾಡಿ, ಪಾಂಡಿತ್ಯವನ್ನು ಹೊಂದಿದನು ಮುಂದೆ ಪಂಡಿತ ಶ್ರೀನಿವಾಸಪ್ಪನವರೆಂದು ಪ್ರಸಿದ್ಧರಾಗಿ ಶಿಷ್ಯರನ್ನಿಟ್ಟುಕೊಂಡು ಪಾಠ ಪ್ರವಚನಾದಿಗಳನ್ನು ನಡೆಸುತ್ತ, ಮಹಾ ಪ್ರಖ್ಯಾತರಾಗಿ ಅವರು ಲೌಕಿಕವನ್ನು ಸಾಗಿಸುತ್ತಿದ್ದರು

ಆ ಕಾಲದಲ್ಲೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಸ್ಥಾಪಿತವಾದ ದ್ವೈತ ಸಿದ್ಧಾಂತವನ್ನು ಜನಸಾಮಾನ್ಯರಲ್ಲಿ ಪ್ರಚುರಗೊಳಿಸುವ ಮಹತ್ಕಾರ್ಯಕ್ಕಾಗಿ ಸ್ಥಾಪಿತವಾದ ದಾಸಕೂಟಕ್ಕೆ, ಶ್ರೀ ಭೃಗುಮಹರ್ಷಿಗಳ ಅಂಶಸಂಭೂತರಾದ ಶ್ರೀಮದ್ವಿಜಯದಾಸರು ನೇತೃಗಳಾಗಿ ಭಗವದಪರೋಕ್ಷ ಪಡೆದು, ಶ್ರೀ ಗೋಪಾಲದಾಸರು, ಪಂಗನಾಮ ತಿಮ್ಮಣ್ಣದಾಸರು, ಮೋಹನ ದಾಸರು ಮುಂತಾದ ಶಿಷ್ಯರಿಂದ ಸೇವೆಗೊಳ್ಳುತ್ತ ಜನಾಂಗಕ್ಕೆ ಸನ್ಮಾರ್ಗದರ್ಶಕ ರಾಗಿದ್ದರು ಮೇಲೆ ಹೇಳಿದ ಪಂಡಿತ ಶ್ರೀನಿವಾಸಪ್ಪನವರು, ಪಂಗನಾಮ ತಿಮ್ಮಣ್ಣದಾಸರಾಯರ ಶಿಷ್ಯನ ಉದರ ಸಂಭೂತರೇ ಆಗಿದ್ದರೂ, ಭಾಗವತಾ ಗ್ರೇಸರರಾದ ವಿಜಯದಾಸರೇ ಮುಂತಾದವರ ಮಹಿಮೆಯನ್ನು ತಿಳಿಯದೆ, ತಮ್ಮ ಸಂಸ್ಕೃತ ವಿದ್ಯಾಪಾಂಡಿತ್ಯದಿಂದ ಬೀಗಿ, ಈ ದಾಸರ ವಿದ್ಯೆಯೇನು, ಬುದ್ಧಿಯೇನು, ಸಾಧನವೇನು, ಜ್ಞಾನವೇನು, ಇವರು ಅಪರೋಕ್ಷಜ್ಞಾನ ಪಡೆದಿರುವುದೆಂದರೆ

ಅರ್ಥವೇನು, ಇವೆಲ್ಲಾ ಜನರನ್ನು ಮರುಳುಗೊಳಿಸುವ ವೇಷಗಳು ಎಂದು ಮುಂಚಿತಾಗಿ ಕೇವಲ ಅಲ್ಪಭಾವದಿಂದ ಕಂಡು ಅವಹೇಳನ ಮಾಡಸಾಗಿದರು ಮಹಾನುಭಾವರಾದ ಆ ಸಜ್ಜನರನ್ನು ನಿಂದೆಮಾಡಿದ ಪಾಪವು ವೃಥಾ ಹೋಗುವುದೆ ? ಆ ಪಾಪದ ಫಲವಾಗಿ ಮುಂದೆ ಸ್ವಲ್ಪಕಾಲದಲ್ಲೇ ಶ್ರೀನಿವಾಸಪ್ಪ ನವರಿಗೆ ಕ್ಷಯರೋಗವು ಪ್ರಾಪ್ತವಾಯಿತು ಪಾಠಪ್ರವಚನಾದಿಗಳು ನಿಂತವು ಪಾಂಡಿತ್ಯದ ಔನ್ನತ್ಯತೆಯು ಕುಂಠಿತವಾಯಿತು. ದಿನದಿನಕ್ಕೆ ರೋಗಬಾಧೆಯು ಹೆಚ್ಚಾಗಿ ಸಹಿಸುವುದು ಅಸಾಧ್ಯವಾಗತೊಡಗಿತು ಶ್ರೀನಿವಾಸಪ್ಪನವರು ಮುಂದೆ ಉಪಾಯ ತೋರದಂತಾದರು

ಹೀಗಿರಲು ಒಂದು ದಿನ ಶ್ರೀ ಪ್ರಾಣದೇವರ ಆರಾಧನೆಯಿಂದ ಈ ಅಪಮೃತ್ಯುವು ಪರಿಹಾರವಾಗಬಹುದೆಂದು ಅವರ ಮನಸ್ಸಿಗೆ ತೋರಲು, ಶ್ರೀನಿವಾಸಪ್ಪನವರು ಶ್ರೀ ಹರಿವಾಯುಸ್ತುತಿಯನ್ನು ಪಠನೆಮಾಡಿಕೊಂಡು ಶ್ರೀಮದಾಂಜನೇಯಸ್ವಾಮಿಗೆ ಅಭಿಷೇಕ ಅರ್ಚನಾದಿಗಳನ್ನು ಮಾಡುತ್ತ ಸೇವಿಸಲಾರಂಭಿಸಿದರು ಒಂದು ಮಂಡಲಕಾಲ ಹೀಗೆ ಸೇವೆ ನಡೆಯಲು ಅವರ ಅನನ್ಯ ಭಕ್ತಿಭಾವನೆಗೆ ಶ್ರೀ ಮಾರುತಿಯು ಸುಪ್ರೀತನಾಗಿ, ಒಂದುದಿನ ರಾತ್ರಿ ಕನಸಿನಲ್ಲಿ ಬಂದು "ಎಲೈ ನೀನು, ಶ್ರೀ ಭೃಗು ಮಹರ್ಷಿಗಳ ಅಂಶಸಂಭೂತ ರಾದ ಶ್ರೀ ವಿಜಯದಾಸರಾಯರನ್ನು ನಿಂದೆ ಮಾಡಿದ ಪ್ರಯುಕ್ತ ನಿನಗೆ ಈ ಕ್ಷಯರೋಗವು ಪ್ರಾಪ್ತವಾಗಿದೆ ಈಗಲೂ ಅವರನ್ನೇ ಮೊರೆಹೊಕ್ಕು ಅವರ ಅನುಗ್ರಹ ಸಂಪಾದನೆ ಮಾಡಿದರೆ, ಮುಂದೆ ರೋಗ ಪರಿಹಾರವಾಗುವುದಲ್ಲದೆ ಪೂರ್ಣಾಯುರಾರೋಗ್ಯವೂ ಲಭಿಸುವುದು" ಎಂದು ಅಜ್ಞಾಪಿಸಿದನು.

ಹಾಗೆ ಮಾರುತಿಯ ಆಜ್ಞೆಯನ್ನು ಹೊಂದಿದ ಪಂಡಿತ ಶ್ರೀನಿವಾಸಪ್ಪ ನವರು, ಪಾಂಡಿತ್ಯದ ಸೊಕ್ಕು ಅಡಗಲು, ನಮ್ರರಾಗಿ, ದೇಹಶಕ್ತಿ ಕುಂದಿದ್ದುದ ರಿಂದ ನಡೆಯಲು ಅಶಕ್ತರಾಗಿ ಆಂದೋಳವನ್ನೇರಿಕೊಂಡು ಶ್ರೀ ವಿಜಯದಾಸ ರಾಯರ ಸಂದರ್ಶನಕ್ಕಾಗಿ ಹೊರಟು ಅವರನ್ನು ಕಂಡು ದೀರ್ಘದಂಡ ನಮಸ್ಕಾರಮಾಡಿ, ಪಶ್ಚಾತ್ತಾಪಾಶ್ರುಗಳು ಧಾರೆಧಾರೆಯಾಗಿ ಸುರಿಯುತ್ತಿರಲು, "ಪಾಂಡಿತ್ಯದ ಒಣಹೆಮ್ಮೆಯಿಂದ ಭ್ರಾಂತನಾಗಿ ಮಹಾನುಭಾವರಾದ ತಮ್ಮ ಪಾದಸನ್ನಿಧಿಯ ಮಾಹಾತ್ಮ್ಯವನ್ನರಿಯದೆ ನಿಂದೆ ಮಾಡಿದ ಮಹಾ ಪಾಪಿಯು ನಾನು ! ಅಪರಾಧ ಕ್ಷಮಾಪಣೆಮಾಡಿ, ಉದ್ಧಾರ ಮಾಡಬೇಕು ಪ್ರಭೋ !"

ಎಂದು ಪ್ರಾರ್ಥಿಸಿದರು ತಮ್ಮ ಪಾದಗಳ ಮೇಲೆ ಶಿರಸ್ಸನ್ನಿಟ್ಟು, ನೀವೇ ಉದ್ಧಾರಕರೆಂದು ಬೇಡುತ್ತಿದ್ದ ಶ್ರೀನಿವಾಸಪ್ಪನವರ ನೊಂದ ನುಡಿಯನ್ನು ಕೇಳಿ, ದಯಾಸಮುದ್ರರಾದ ವಿಜಯದಾಸರ ಹೃದಯವು ಕರಗಿ "ಅಯ್ಯಾ ನಿನ್ನ ಉದ್ಧಾರಕರು ನಾವಲ್ಲ ನೀನು ನಮ್ಮ ಶಿಷ್ಯನಾದ ಭಾಗಣ್ಣ (ಶ್ರೀ ಗೋಪಾಲದಾಸರಾಯರು) ನಲ್ಲಿಗೆ ಹೋಗು" ಎಂದು ಆಜ್ಞಾಪಿಸಲು, ಶ್ರೀನಿವಾಸಪ್ಪನವರು ಅವರನ್ನು ಹುಡುಕಿಕೊಂಡು ಮಂತ್ರಾಲಯ ಸಮೀಪದ ವೇಣೀಸೋಮಪುರವೆಂಬ ಗ್ರಾಮದಲ್ಲಿದ್ದ ಶ್ರೀ ಭಾಗಣ್ಣದಾಸರಲ್ಲಿಗೆ ಹೋಗಿ ಅವರ ಪಾದಕ್ಕೆ ಬಿದ್ದು ಪ್ರಾರ್ಥಿಸಿದರು ಅಪರೋಕ್ಷಜ್ಞಾನಿಗಳಾದ ಶ್ರೀಗೋಪಾಲ ದಾಸರು ಅವರು ತಮ್ಮ ಗುರುವರ್ಯರಿಂದ ಕಳುಹಿಸಲ್ಪಟ್ಟವರೆಂಬುದನ್ನು ತಿಳಿದು ಆದರಿಸಿ, ಆದಿನ ಸ್ನಾನಾಹ್ನಿಕಗಳಾದ ತರುವಾಯ, ಶ್ರೀ ನೃಸಿಂಹ ಮಂತ್ರೋಪ ದೇಶಮಾಡಿ ಭೋಜನಕ್ಕಾಗಿ ಎರಡು ಜೋಳದ ಭಕ್ಕರಿಗಳನ್ನು ಮಾಡಿಸಿ, ತಮ್ಮ ಯೋಗಶಕ್ತಿಯಿಂದ ಅವುಗಳನ್ನು ಅಭಿಮಂತ್ರಿಸಿ ಅವುಗಳನ್ನೇ ಭಕ್ಷಿಸಲು ಹೇಳಿದರು ಕ್ಷಯರೋಗಪೀಡಿತರಾಗಿ ಒಂದಗುಳು ಅನ್ನ ಸಹ ತಿನ್ನಲಾರದ ಶ್ರೀನಿವಾಸಪ್ಪನವರು ಗುರ್ವನುಗ್ರಹದಿಂದ ಆ ಎರಡು ಭಕ್ಕರಿಗಳನ್ನೂ ತಿಂದು ಜೀರ್ಣಿಸಿಕೊಂಡರು ನಂತರ ಅವರ ರೋಗಪರಿಹಾರಕ್ಕೋಸುಗವೂ, ಆಯು ವೃದ್ಧಿಗೂ ಅಲ್ಲದೆ ಭಗವತ್ಸಂಬಂಧ ಜ್ಞಾನಾಭಿವೃದ್ಧಿಗೋಸುಗವೂ ಗೋಪಾಲ ದಾಸರು, ಶ್ರೀ ಧನ್ವಂತ್ರೀ ದೇವರನ್ನು "ಎನ್ನ ಬಿನ್ನಪ ಕೇಳೊ, ಧನ್ವಂತ್ರಿ ದಯಮಾಡೊ ಸಣ್ಣವನು ಇವ ಕೇವಲ" ಎಂಬ ಕೀರ್ತನೆಯಿಂದ ಪ್ರಾರ್ಥಿಸಿ ದರು ಮುಂದೆ ಕೆಲವು ದಿವಸಗಳಲ್ಲೇ ಶ್ರೀನಿವಾಸಪ್ಪನವರ ಕ್ಷಯರೋಗವು ಸಂಪೂರ್ಣ ಪರಿಹಾರವಾಯಿತು ಗುರು-ಶಿಷ್ಯರಿಬ್ಬರೂ ಪರಮ ಸಂತುಷ್ಟರಾದರು ಮುಂದೊಂದು ದಿನ ರಾತ್ರೆ, ಶ್ರೀ ವಿಜಯದಾಸರಾಯರ ಬಿಂಬಮೂರ್ತಿಗಳಾದ ಶ್ರೀ ವಿಜಯವಿಠಲದೇವರು, ಗೋಪಾಲದಾಸರ ಸ್ವಪ್ನದಲ್ಲಿ ಬಂದು, ನಿಮ್ಮ ಆಯುಸ್ಸಿನಲ್ಲಿ ನಾಲ್ವತ್ತು ವರುಷ ಕಾಲವನ್ನು ಈ ಶ್ರೀನಿವಾಸಾಚಾರ್ಯರಿಗೆ ದಾನಮಾಡಿರಿ" ಎಂದು ಆಜ್ಞಾಪಿಸಿದರು.

ಆ ಭಗವದಾಜ್ಞೆಯನ್ನು ಕೇಳಿ, ತಮ್ಮ ಜನ್ಮ ಸಾರ್ಥಕವಾಯಿತೆಂದು ಪರಮ ಸಂತುಷ್ಟರಾದ ಶ್ರೀ ದಾಸರು, ಮಾರನೆಯ ಪ್ರಾತಃಕಾಲ ಸ್ನಾನಾಹ್ನಿಕ ಗಳನ್ನು ತೀರಿಸಿಕೊಂಡು, ಗುರುಪಾದಗಳನ್ನು ಮನನಾ ಧ್ಯಾನಮಾಡಿಕೊಳ್ಳುತ್ತಾ

ತಮ್ಮ ಯೋಗಶಕ್ತಿಯಿಂದ ಶ್ರೀನಿವಾಸಾಚಾರ್ಯರಿಗೆ ಆಯುಃಪ್ರದಾನ ಮಾಡಿದರು ಆಚಾರ್ಯರು ತಮ್ಮ ಮೇಲೆ ಉಂಟಾದ ಗುರ್ವನುಗ್ರಹಕ್ಕಾಗಿ ಪರಮಾನಂದ ಮಗ್ನರಾಗಿ ಪುನಃಪುನಃ ಅವರಿಗೆ ಪಾದಾಭಿವಾದನ ಮಾಡುತ್ತ, ತಮಗೆ ದಾಸತ್ವಕ್ಕೆ ಅಂಕಿತಪ್ರದಾನ ಮಾಡಬೇಕೆಂದು ಪ್ರಾರ್ಥಿಸಿದರು. ಆಗ ಶ್ರೀ ಭಾಗಣ್ಣದಾಸರು "ನೀವು ಪಂಡರಾಪುರಕ್ಕೆ ಹೋಗಿ ಶ್ರೀ ಪಾಂಡುರಂಗ ವಿಠಲದೇವರ ನಾಮಸ್ಮರಣೆಯ ಮೂಲಕ ಚಂದ್ರಭಾಗಾ ನದಿಯಲ್ಲಿ ಸ್ನಾನ ಮಾಡುತ್ತಿರಿ ಹಾಗೆ ನೀವು ಅವಗಾಹನ ಸ್ನಾನ ಮಾಡುತ್ತಿರುವ ಕಾಲದಲ್ಲಿ ಶ್ರೀ ವಿಠ್ಠಲನ ಅನುಗ್ರಹದಿಂದ ನಿಮ್ಮ ಅಂಕಿತವು ಕೆತ್ತಲ್ಪಟ್ಟ ಒಂದು ಶಿಲಾ ಶಲಕವು ನಿಮ್ಮ ತಲೆಯ ಮೇಲೆ ಬಂದು ಕೂಡುತ್ತದೆ ತಕ್ಷಣವೇ ಆ ಅಂಕಿತವನ್ನು ಸ್ವೀಕಾರಮಾಡಿ, ಅನ್ಹಿಕಾನಂತರ ಆ ಅಂಕಿತದಿಂದ ಶ್ರೀ ನರಸಿಂಹದೇವರ ಸ್ತೋತ್ರ ಮಾಡಲಾರಂಭಿಸಿರಿ" ಎಂದು ಆಜ್ಞಾಪಿಸಿದರು ಹೀಗೆ ಆಜ್ಞಾಸ್ವೀಕಾರ ಮಾಡಿ, ಪಂಡರಾಪುರಕ್ಕೆ ನಡೆಯಲು, ಅಲ್ಲಿ ಶ್ರೀ ದಾಸರಾಯರು ಹೇಳಿದ್ದಂತೆಯೇ **ಶ್ರೀ ಜಗನ್ನಾಥ** ವಿಠಲ ಎಂಬ ಅಂಕಿತವು ದೊರೆಯಿತು ಒಡನೆ ಶ್ರೀನಿವಾಸಾ ಚಾರ್ಯರು ಪುಳಕಾಂಕಿತರಾಗಿ "ಪಿಡಿಯನ್ನ ಕೈಯ ರಂಗೈಯ, ಪಿಡಿಯನ್ನ ಕೈಯ ಪಾಲ್ಗಡಲಶಯನ, ಮೋಹ ಮಡುವಿನೊಳ್ಬಿದ್ದು ಬಾಯ್ಬಿಡುವೆ ಬೇಗದಿ ಬಂದು" ಎಂಬ ಪದದಿಂದ ಶ್ರೀಹರಿಯನ್ನು ಸ್ತುತಿಸಿ, ನಂತರ ಕೀರ್ತನೆಗಳನ್ನು ಮಾಡಲು ಪ್ರಾರಂಭಿಸಿದರು

ಹೀಗೆ ಶ್ರೀ ಜಗನ್ನಾಥರಾಯರು, ಅನ್ಯೂನ ಗುರುಭಕ್ತಿಯೊಂದಿಗೆ ವೇದಶಾಸ್ತ್ರಾದಿಗಳ ಅಖಂಡ ಪಾಂಡಿತ್ಯವೂ ಬೆಳೆಯಲು, ಅಸಂಖ್ಯ ಪದಗಳಿಂದ ಶ್ರೀ ಹರಿಯ ಅನಂತ ಮಹಿಮೆಗಳನ್ನು ಕೀರ್ತಿಸಿ, ಸಕಲ ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸಿ, ಮಹಾ ಭಗವದ್ಭಕ್ತರೆಂದು ಲೋಕ ವಿಖ್ಯಾತರಾದರು ಹೀಗಿರಲು ಮುಂದೊಂದು ದಿನ ಉಷಃಕಾಲದಲ್ಲಿ, ವ್ಯಾಸಕೂಟ, ದಾಸಕೂಟಗಳೆರಡಕ್ಕೂ ಆಚಾರ್ಯರಾದ ಶ್ರೀ ಶ್ರೀಪಾದರಾಯರು, ಶ್ರೀ ವ್ಯಾಸರಾಯರು, ಶ್ರೀ ವಾದಿರಾಜರು, ಶ್ರೀ ಪುರಂದರದಾಸರು ಇವರುಗಳು ಶ್ರೀ ಜಗನ್ನಾಥದಾಸರಾಯರ ಕನಸಿನಲ್ಲಿ ಬಂದು "ಶ್ರೀಮನ್ಮಧ್ವ ಸಿದ್ಧಾಂತಶಾಸ್ತ್ರ, ಭಾಗವತ, ಭಾರತ ಮುಂತಾದ ಅನೇಕ ಪ್ರಮಾಣ ಪ್ರಮೇಯ ಗ್ರಂಥಗಳ ಮುಖ್ಯಾರ್ಥಗಳನ್ನೊಳಗೊಂಡ ಒಂದು ಗ್ರಂಥವನ್ನು ಸರ್ವಜನಗ್ರಾಹ್ಯವಾಗುವಂತೆ ತಿಳಿಗನ್ನಡ ಭಾಷೆಯಲ್ಲಿ ನಿರ್ಮಾಣ

ಮಾಡಿರಿ" ಎಂದು ಆಜ್ಞೆ ಮಾಡಲು, ಶ್ರೀ ಜಗನ್ನಾಥದಾಸರು, ಆ ಆಜ್ಞೆಯನ್ನು ಶಿರಸಾ ಧಾರಣಮಾಡಿ ಸರ್ವಶಾಸ್ತ್ರ ಪ್ರತಿಪಾದಕವಾದ **ಶ್ರೀ ಹರಿಕಥಾಮೃತ ಸಾರ** ಎಂಬ ಅನುಪಮೇಯ ಗ್ರಂಥರತ್ನವನ್ನು ರಚಿಸಿ ಲೋಕಕ್ಕೆ ದಾನ ಮಾಡಿದರು.

ಹೀಗೆ ಶ್ರೀ ಜಗನ್ನಾಥದಾಸರು, ಮುಖ್ಯ ಪ್ರಾಣಾಂತರ್ಗತ ಶ್ರೀಹರಿಯನ್ನು ಆರಾಧಿಸಿ, 'ರಂಗವೊಲಿದ ದಾಸರೆ'ಂದು ಪ್ರಖ್ಯಾತರಾಗಿ, ಎಂಭತ್ತೆಂಟು ವರುಷ, ಒಂದು ತಿಂಗಳು, ಆರು ದಿವಸ ಭೂಲೋಕದಲ್ಲಿ ವಾಸಿಸಿ, ತರುವಾಯ ಶಾ ಶ ೧೭೩೧ನೆಯ ಶುಕ್ಲ ಸಂವತ್ಸರ ಭಾದ್ರಪದ, ಶುದ್ಧ ೯, ಆದಿತ್ಯವಾರ ರಾತ್ರೆ ಒಂದು ಪ್ರಹರಕ್ಕೆ ಶ್ರೀ ಹರಿಪದವನ್ನು ಕುರಿತು ಚಿತ್ತೈಸಿದರು.

ಶ್ರೀರಾಮ ಸಹಾಯಂ

# ಶ್ರೀ ಜಗನ್ನಾಥದಾಸಕೃತ

# ಕೀರ್ತನೆಗಳು



೧ ರಾಗ ಮೋಹನ—ಆಟತಾಳ

ಗೋಪಾಲ ದಾಸರಾಯ ನಿನ್ನಯ ಪಾದ
ನಾ ಪೊಂದಿದೆನೊ ನಿಶ್ಚಯ ಪ.
ಈ ಪೀಡಿಪ ತಾಪತ್ರಯಗಳನೋಡಿಸಿ
ಕೈ ಪಿಡಿದೆನ್ನನು ನೀ ಪಾಲಿಸನುದಿನ ಅ

ಘೋರವ್ಯಾಧಿಗಳ ನೋಡಿ ವಿಜಯರಾಯ
ಭೂರಿ ಕರುಣವ ಮಾಡಿ
ತೋರಿದರಿವರೆ ಉದ್ಧಾರಕರೆಂದೆಂದಿ
ನಾರಭ್ಯ ತವಪಾದ ಸೇರಿದೆ ಸಲಹೆಂದು

ಸೂರಿಜನಸಂಪ್ರೀಯ ಸುಗುಣೋ
ದಾರ ಎನ್ನಯ ದೋಷನಿಚಯವ
ದೂರಗೈಸು ದಯಾಂಬುಧಿಯೆ ನಿ
ವಾರಿಸದೆ ಕರಪಿಡಿದು ಬೇಗನೆ ೧

ಅಪಮೃತ್ಯುವನು ತೊಡೆದೆ ಎನ್ನೊಳಗಿಪ್ಪ
ಅಪರಾಧಗಳ ಮರೆದೆ
ಚಪಳಚಿತ್ತನಿಗೊಲಿದು ವಿಪುಳಮತಿಯನಿತ್ತು
ನಿಪುಣನೆಂದೆನಿಸಿದೆ ತಪಸಿಗಳಿಂದಲಿ

ಕೃಪಣವತ್ಸಲ ನಿನ್ನ ಕರುಣಕೆ
ಉಪಮೆಗಾಣೆನೊ ಸಂತತವು ಕಾ
ಶ್ಯಪಿಯೊಳಗೆ ಬುಧರಿಂದ ಜಗದಾ
ಧಿಪನ ಕಿಂಕರನೆನಿಸಿ ಮೆರೆದೆ ೨

ಎನ್ನ ಪಾಲಿಸಿದಂದದಿ ಸಕಲ ಪ್ರ
ಪನ್ನರ ಸಲಹೊ ಮೋದಿ
ಅನ್ಯರಿಗೀಪರಿ ಬಿನ್ನಪಗೈಯೆ ಜ
ಗನ್ನಾಥ ವಿಠಲನ್ನ ಸಂಸ್ತುತಿಸುವ ಧೀರ

ನಿನ್ನ ನಂಬಿದ ಜನರಿಗೀಪರಿ
ಬನ್ನವೇ ಭಕ್ತಾನುಕಂಪಿ ಶ
ರಣ್ಯ ಬಂದೊದಗೀ ಸಮಯದಿ ಅ
ಹರ್ನಿಶಿ ಧ್ಯಾನಿಸುವೆ ನಿನ್ನ ೩

೨ ರಾಗ ಬಿಲಹರಿ—ಅಟತಾಳ

ರತುನ ದೊರಕಿತಲ್ಲ ಎನಗೆ ದಿವ್ಯ-ರತುನ ದೊರಕಿತಲ್ಲ ಪ

ರತುನ ದೊರಕಿತು ಎನ್ನ ಜನ್ಮ ಪ
ವಿತ್ರವಾಯಿತು ಈ ದಿನವು ನಾ
ಯತನಗೈವುತ ಬರುತಿರಲು ಪ್ರ
ಯತನವಿಲ್ಲದೆ ವಿಜಯರಾಯರೆಂಬ ಅ

ಪಥದಿ ನಾ ಬರುತಿರಲು–ಥಳಥಳವೆಂದು
ಅತಿಕಾಂತಿ ಝಳಪಿಸಲು-ಬೆರಗಾಗುತ್ತ
ಅತಿಚೋದ್ಯವ ಕಾಣಲು ಸೇವಿಸುತಿರೆ

ಸತತ ಕರಪಿಡಿದಾದರಿಸಿ ಮನೋ
ರಥವ ಪೂರೈಸುತಲಿ ದಿವ್ಯ ಸ
ನ್ಮತಿಯ ಪಾಲಿಸಿ ಮೋಕ್ಷ ಸುಪಥವ
ಅತಿಶಯದಿ ತೋರುತಲಿ ಪೊರೆಯುವ ೧

ಜ್ಞಾನವೆಂಬೋ ಪುತ್ಥಳಿ-ಕಂಬಿಯಲಿ
ಅಣಿಮುತ್ತಿನ ಭಕ್ತಿಲಿ-ಸುಕೃತಮಾಲಾ
ನಾನಾವಿಧ್ದವಳದಲಿ-ಸೇರಿಸುತಿರೆ
ಪ್ರಾಣಪದಕವೆಂಬ ಮಾಲಾನು
ಮಾನವಿಲ್ಲದೆ ಕೊರಳಿಗ್ಹಾಕುತ
ಗಾನದಿಂ ಕುಣಿಯುತಲಿ ಪಾಡುತ
ದೀನಜನರುದ್ಧಾರ ಗೈಯುವ ೨
ಶೋಧಿಸಿ ಗ್ರಂಥಗಳ-ಸುಳಾದಿಯ
ಮೋದದಿಂದಲಿ ಬಹಳ-ಕವಿತೇಮಾಡಿ
ಸಾಧುಜನಕೆ ಸುಕಾಲ-ಆನಂದವಿತ್ತು
ವಾದಿಜನರನು ಗೆದ್ದು ವಾದಿಸಿ
ಮಾಧವ ಜಗನ್ನಾದ ವಿಠಲನ
ಪಾದಕಮಲಕೆ ಮಧುಪನಂದದಿ
ಸಾದರದಿ ತೋರಿಸುತ ಮೆರೆಯುವ ೩

೩ ರಾಗ ಸಾವೇರಿ ಅಟತಾಳ

ದಾಸರಾಯ-ಪುರಂದರ ದಾಸರಾಯ ಪ
ದಾಸರಾಯ ಪ್ರತಿವಾಸರದಲಿ ಶ್ರೀನಿ
ವಾಸನ ತೋರೊ ದಯಾಸಾಂದ್ರ ಪುರಂದರ ಅ
ವರದನಾಮಕ ಭೂಮಿಸುರನ ಮಡದಿ ಬ
ಸುರಲಿ ಜನಿಸಿಬಂದು ಮೆರೆದೆ ಧರಣಿಯೊಳು ೧
ಕುಲಿಶಧರಾಹ್ವಯ ಪೊಳಲೊಳು ಮಡದಿ ಮ
ಕ್ಕಳಕೂಡೆ ಸುಖದಿ ಕೆಲವು ಕಾಲದಲಿದ್ಯೊ ೨
ವ್ಯಾಸರಾಯರಲಿ ಭಾಸುರ ಮಂತ್ರೋಪ
ದೇಶವ ಕೊಂಡು ರಮೇಶನ ಭಜಿಸಿದೆ ೩
ಮನೆಧನಧಾನ್ಯವಾಹನ ವಸ್ತುಗಳೆಲ್ಲ
ತೃಣಕೆ ಬಗೆದು ಕೃಷ್ಣಾರ್ಪಣವೆಂದೆ ಬುಧರಿಗೆ ೪

ಪ್ರಾಕೃತಭಾಷೆಯೊಳ್ ನೀ ಕೃತಿಪೇಳಿ ಅ
ಪ್ರಾಕೃತ ಹರಿಯಿಂದ ಸ್ವೀಕೃತನಾದೆ ೫

ತೀರ್ಥಕ್ಷೇತ್ರಗಳ ಮೂರ್ತಿಮಹಿಮೆಗಳ
ಕೀರ್ತಿಸಿ ಜಗದಿ ಕೃತಾರ್ಥನೆಂದೆನಿಸಿದೆ ೬

ಪಾತಕವನನಿಧಿ ಪೋತನೆನಿಪ ಜಗ
ನ್ನಾಥವಿಠ್ಠಲನ ಪ್ರೀತಿಯಿಂದೊಲಿಸಿದೆ ೭

೪ ರಾಗ ನವರೋಜು—ಆದಿತಾಳ

ಶ್ರೀ ರಾಘವೇಂದ್ರ ನಿಮ್ಮ ಚಾರುಚರಣವ
ಸಾರಿದೆ ಶರಣಮಂದಾರ ಕರುಣವ ಪ

ಘೋರಭವವನಧಿ ತಾರಿಸು ಕರುಣದಿ
ಸೂರಿಸುಧೀಂದ್ರ ಕುಮಾರ ಉದಾರ ಅ

ಮುನಿರಾಯ ನಿಮ್ಮ ಪಾದವನರುಹಧ್ಯಾನ
ಪ್ರಣವ ಸುಸ್ತವನ ಅರ್ಚನೆ ಮಾಳ್ಪ ನಾನಾ
ಜನರ ವಾಂಛಿತವೀವ ಗುಣಗಣಪೂರ್ಣ ಜ್ಞಾನ
ಧನವ ಪಾಲಿಸೆನಗೀಕ್ಷಣ ನಿನ್ನಾಧೀನ
ಮನುಜನ ಪ್ರತಿದಿನ ದಣಿದಣಿಸುವುದು
ಘನವೇ ಗುರು ಪಾವನತರಚರಿತ ೧

ಮೂಲರಾಮನಪಾದ ಕೀಲಾಲಜ ಮಧುಪ
ಬಾಲನ ಬಿನ್ನಪ ಲಾಲಿಸೊ ಮುನಿಪ
ತಾಳಲಾರೆನೊ ತಾಪತ್ರಯದ ಸಂತಾಪ
ಕೇಳೊ ವಿಮಲಜ್ಞಾನ ಶೀಲಸ್ವರೂಪ
ಭೂಲಲನಾಪತಿ ಕೋಲನಂದಿನಿ
ಕೂಲಗ ವರ ಮಂತ್ರಾಲಯನಿಲಯ ೨

ಕಲಿಕಲ್ಮಷದೂರ ಕುಜನಕುಠಾರ
ನಳಿನಾಕ್ಷವಿಮಲ ಶ್ರೀತುಲಸಿಯಹಾರ
ಗಳಶೋಭಿತ ಕಮಂಡಲ ದಂಡಧರ
ಅಲವಬೋಧರ ಮತ ಜಲಧಿವಿಹಾರ
ಸುಲಲಿತ ಕರುಣಾಬ್ಧಿ ಜಗನ್ನಾಥವಿಠಲನ
ಒಲುಮೆಯ ಪಡೆದೀ ಇಳೆಯೊಳು ಮೆರೆದೆ ೩

೫ ರಾಗ ಮೋಹನ—ಅಟತಾಳ

ಶಂಭೋ ಸುರಗಂಗಾಧರನೆ ಪಾಲಿ
ಸಂಬಾರಮಣನೆ ಲಿಂಗ ಪ
ನಂಬಿದವರಘ ಕಾದಂಬಿನಿಪವನ ಹೇ
ರಂಬಜನಕ ಕರುಣಾಂಬುಧಿ ಗುರುವರ ಅ
ಇಳದೇರ ಇಂದುಮೌಳಿ ಈಪ್ಸಿತಫಲ
ಸಲಿಸುವ ಘನ ತ್ರಿಶೂಲಿ
ಸಲೆ ನಂಬಿದೆನೊ ಹಾಲಾಹಲಕಂಠ ಎನ್ನ ನೀ
ಸಲಹೊ ಸಂತತ ರೌಪ್ಯಾಚಲವಾಸ ವರ ಪಂಪಾ
ನಿಲಯ ನಿರ್ಜರ ಸೇವಿತಾನಲ
ನಳಿನಸಖ ಸೋಮೇಕ್ಷಣನೆ ಬಾಂ
ದಳಪುರಾಂತಕ ನಿಜಶರಣ ವ
ತ್ಸಲ ವೃಷಾರೋಹಣ ವಿಬುಧವರ ೧
ಮಾರಾರಿಮಹದೇವ ನಿನ್ನಯ ಪಾದ
ವಾರಿಜದಳಯುಗ್ಮವ
ಸಾರಿದೆ ಸತತ ಸರೋರುಹೇಕ್ಷಣನ ಹೃ
ದ್ವಾರಿಜದಲಿ ತೋರೊ ಗಾರುಮಾಡದಲೆನ್ನ
ಆರು ಮೊಗನೈಯ ಅಮಿತಗುಣಗಣ
ವಾರಿನಿಧಿ ವಿಗತಾಘವ್ಯಾಳಾ
ಗಾರವಿತ್ತ ಪವಿತ್ರ ಸುಭಗ ಶ
ರೀರ ದುರಿತಾರಣ್ಯ ಪಾವಕ

ಧೃತಡಮರುಗ ಸಾರಂಗ ನಿನ್ನಯ ಪಾದ
ಶತಪತ್ರಾರ್ಚಿಪರ ಸಂಗ
ಸತತ ಪಾಲಿಸು ಜಗನ್ನಾಥ ವಿಠ್ಠಲನ ಸಂ
ಸ್ತುತಿಸುವ ನೆರೆಧೀರ ಕ್ಷಿತಿಧರ ಧೃತಧನ್ವಿ

ಶತಮುಖನ ಜಯಸಿದನ ಪುತ್ರನ
ಪಿತನ ಜನಕನ ಕೈಲಿ ಕೊಲಿಸಿದೆ
ಅತುಳಭುಜಬಲ ಭೂತಪತಿ ಪಾ
ರ್ವತಿಮುಖಾಬ್ಜೋದರ ದಿವಾಕರ ೩

೬ ರಾಗ ಮಧ್ಯಮಾವತಿ — ತಾಳ

ವಂದಿಪೆ ನಮ್ಮ ಮುದ್ದು ಶಾರದೆ ಶರ
ಚಂದಿರವದನೆ ಶಾರದೆ ಪ
ಇಂದೀವರಾಕ್ಷಿ ಶತಾನಂದನ ಪ್ರಿಯೆ ದೇವಿ
ಕುಂದು ನೋಡದೆ ಶ್ರುತಿವಂದ್ಯೆ ಜ್ಞಾನವ ನೀಡೆ ಅ

ಸಿತಾಬ್ಜಾಸನೆ ಸುಖದಾಯಕೀ, ಸುರ
ನಾಥಾರಾಧಿತೆ ವಿಶ್ವನಾಯಕೀ
ವೀತದುರಿತೆ ಶಿವಮಾತೆ ಸದ್ಗುಣಮಣಿ
ವ್ರಾತೆ ವೇದೋಪನಿಷದ್ಗೀತೆ ವಾಗ್ದೇವಿಮಾತೆ ೧

ಕೋಕಿಲವಾಣಿ ಕವಿಸೇವಿತೆ ಎನ್ನ
ವಾಕುಲಾಲಿಸೆ ಮುನಿವಂದಿತೆ
ತೋಕನೆಂದು ಸುವಿವೇಕ ಬುದ್ಧಿಯನಿತ್ತು
ಸಾಕು ಸಜ್ಜನರನ್ನು ವಾಕುಮನ್ನಿಸು ತಾಯೆ ೨

ಪಾತಕಿಗಳೊಡನಾಡಿ ನಾ ನಿನ್ನ
ಪೂತಾಬ್ಜಪದ ಭಜಿಸದ್ಹೋದೆನಾ
ಪಾತಕವೆಣಿಸದೆ ಸೀತಾರಮಣ ಜಗ
ನ್ನಾಥವಿಠ್ಠಲನಂಘ್ರಿ ಗೀತಾಮೃತವನುಣಿಸು ೩

೭ ರಾಗ ಕಾಂಬೋದಿ—ಝಂಪೆತಾಳ

ಬಿನ್ನೈಪೆ ನಿನಗಾನು ಭೀಮಸೇನ ಪ
ಬನ್ನಬಿಡುತಿಹ ಜನರ ಭಯವ ಪರಿಹರಿಸೆಂದು ಅ

ನೀಚರಿಂದಲಿ ಬಂದ ಭಯಗಳಿಂದಲಿ ಜನರು
ಯೋಚಿಸುವರಮಗಾರು ಗತಿಯೆನುತಲಿ
ಕೀಚಕಾಂತಕ ನಿನ್ನ ಕೀರ್ತಿ ಬಹುವಿಧ ಕೇಳಿ
ಯಾಚಿಸುವೆ ನಿನಗಾನು ಎಲ್ಲರನು ಸಲಹೆಂದು ೧

ರೋಚನೇಂದ್ರ(?) ಭವವಿಮೋಚಕನು ನೀನೆ
ಸಚರಾಚರಕೆ ಸಂತತ ಪುರೋಚನಾರೆ
ಪ್ರಾಚೀನಕರ್ಮಾಬ್ಧಿ ವೀಚಿಯೊಳು ಮುಳುಗಿಹರ
ಖೇಚರೇಂದ್ರಾಧಿಪ ತ್ರಿಲೋಚನರ ಗುರುವೆಂದು ೨

ಖಚರೋತ್ತಮನೆ ನಿನ್ನ ಸುಚರಿತ್ರೆಗಳ ಕೇಳಿ
ರಚನೆಗೈಬಲ್ಲೆನೆ ಅಚಲಸತ್ವ
ಪ್ರಚಲಿಸುತ್ತಿಹ ಮನೋ ವಚನಕಾಯವ ಘಟೋ
ತ್ಕಚಜನಕ ಸಜ್ಜನರ ಪ್ರಚಯಮಾಡುವುದೆಂದು ೩

ಈ ಚತುರ್ದಶ ಭುವನದಾಚಾರ್ಯ ದೇಶಕಾ
ಲೋಚಿತ ಸುಧರ್ಮಗಳ ಸೂಚಿಸೆಮಗೆ
ಪಾಚಕನೆ ನಿನ್ನಡಿಗೆ ಚಾಚುವೆನು ಶಿರ ಸವ್ಯ
ಸಾಚಿಸೋದರನೆ ದಯಗೋಚರಿಸಿ ಸಲಹೆಂದು ೪

ವಾಚಾಮಗೋಚರ ಜಗನ್ನಾಥವಿಠ್ಠಲನ
ಶ್ರೀಚರಣಭಜಕ ನಿಶಾಚರಾರೇ
ಮೈಚರ್ಮಸುಲಿದು ದುಶ್ಯಾಸನನ ರಕುತ ಪರಿ
ಷೇಚನೆಯ ಮಾಡಿದೆ ಮಹೋಚಿತವೆಂದರಿತು ೫

೮ ರಾಗ ಆರಭಿ - ಆದಿತಾಳ

ಶ್ರೀನಿಕೇತನ ಪಾಲಯಮಾಂ, ಶ್ರೀನಿಕೇತನ ಪ
ಜ್ಞಾನಗಮ್ಯ ಕರುಣಾನಿಧಿ ನಿನ್ನಡಿ
ಗಾ ನಮಿಸುವೆ ಪೊರೆ ದೀನದಯಾಳೊ ಅ

ಜ್ಞಾನಮಾನದ ಶರಣರ ಸುರ
ಧೇನು ಸರ್ವದ
ನೀನೆಂದರಿತು ಸದಾನುರಾಗದಲಿ
ಧ್ಯಾನಿಪೆ ಮನದನುಮಾನವ ಕಳೆಯೊ ೧

ಶ್ರೀಕರಾರ್ಚಿತ ಪಾದಾಬ್ಜ ಪ
ರಾಕು ಅಚ್ಯುತ
ಶೋಕನಾಶನ ವಿಶೋಕಜನಕ ಹೃ
ದ್ವ್ಯಾಕುಲ ಕಳೆಯೊ ಕೃಪಾಕರ ಪೊರೆದು ೨

ಪನ್ನಗಾಚಲ ನಿವಾಸ ಪ್ರ
ಪನ್ನವತ್ಸಲ
ಬಿನ್ನಪ ಕೇಳೊ ಜಗನ್ನಾಥ ವಿಠ್ಠಲ
ಧನ್ಯನ ಮಾಡೊ ಶರಣ್ಯಶರಣನ ೩

೯ ರಾಗ ಮಧ್ಯಮಾವತಿ – ಝಂಪೆತಾಳ

ಸ್ಮರಿಸು ಸಂತತ ಹರಿಯನು, ಮನವೆ ಪ

ಸ್ಮರಿಸು ಸಂತತ ಹರಿಯ ಕರುಣಾಳುಗಳ ಧೊರೆಯ
ಸರಸಿಯೊಳಗಂದು ಕರಿಯ, ನರನಸಂ
ಗರದೊಳಗೆ ಕಾಯ್ದುದ್ದರಿಯ
ಜಪಹೋಮವ್ರತದಾನತಪಕೆದೊರೆಯ, ಜಗದೀಶ
ಶರಣು ಪೊಕ್ಕವರ ತೊರೆಯ, ಖರೆಯ ಅ

ತಾನೆ ಇಹಪರಸೌಖ್ಯ ದಾನಿಗಳರಸನೆಂದು
ಸಾನುರಾಗದಿ ನಂಬಿದ, ಜನಕೆ ಸುರ
ಧೇನು ವಂದದಲಿ ಮೋದ–ಸಲಿಸುವ ಮ
ಹಾನಂದ ಪೂರ್ಣಬೋಧ–ಪತಿ ಸಾಮ
ಗಾನಲೋಲನ ಪ್ರಸಾದ–ಪಾದ ೧

ಎಲ್ಲೆಲ್ಲಿ ನೋಡೆ ಮತ್ತಲ್ಲಲ್ಲೆ ನೆಲೆಸಿಹನು
ಬಲ್ಲಿದನು ಭಾಗ್ಯವಂತ, ನಂಬಿದರಿ
ಗಲ್ಲದೆ ಒಲಿಯಭ್ರಾಂತ-ದುಷ್ಟಜನ
ರೊಲ್ಲ ನಿಶ್ಚಯ ಮಹಂತರೊಡೆಯ ಕೈ-
ವಲ್ಯದಾಯಕನ ಇಂಥ-ಪಂಥ ೨

ನೋಡಿ ನೋಡಿಸುತಿಹನು ಮಾಡಿ ಮಾಡಿಸುತಿಹನು
ನೀಡಿ ನೀಡಿಸುವ ಪಿಡಿವ ಪಿಡಿಸುವನು,
ಬೇಡಿ ಬೇಡಿಸುವ ಬಡವ-ರೊಡೆಯ ಕೊಂ
ಡಾಡುವರ ಒಡನಾಡುವ, ಈ ಮಹಿಮೆ
ಗೀಡೆಂದು ಆವ ನುಡಿವ-ಕೆಡುವ ೩

ಅಣುವಿನೊಳಗಣುವಹನು ಘನಕೆ ಘನತರನಹನು
ಅಣುಮಹದ್ವಿಲಕ್ಷಣ, ಕಲ್ಯಾಣ ಗುಣಜ್ಞಾನ
ಘನಲಕ್ಷಣ-ಸಂಪೂರ್ಣ
ಮನವಮುಟ್ಟಿ ಕರೆದಾಕ್ಷಣ-ಬಂದೊದಗಿ
ಕುಣಿವ ಲಕ್ಷ್ಮೀವಕ್ಷನ-ಅನಪೇಕ್ಷಣ ೪

ಚಲುವರೊಳಗತಿ ಚೆಲುವ ಸುಲಭರೊಳಗತಿ ಸುಲಭ
ಒಲಿವ ಮನಬಂದ ತೆರದಿ, ಗುಣಕರ್ಮ
ಕುಲಶೀಲಗಳನೆಣಿಸನರಿದೀ-ಭಕುತಿ
ಫಲವಕೊಡೆ ತಾ ತವಕದಿ-ಶಬರಿ ಎಂ
ಜಲನುಂಡ ಕರುಣಶರಧೀ-ಮರೆದೀ ೫

ಪ್ರಾದೇಶ ಮಾತ್ರ ಸ್ಥಿತ ಶ್ರೀದೇವಿಯರಸ ಕನ
ಕೋದರಾದ್ಯಮರ ವ್ರಾತ, ಸಹಿತ ಮಹ
ದಾದಿ ಪೃಥ್ವ್ಯಂತ ಭೂತ-ದೊಳು ನೆಲೆಸಿ
ಕಾದುಕೊಂಡಿಹ ವಿಧಾತಾ-ಅಂಡತ್ರಿದ
ಶಾಧಿಪನ ಸುತನಸೂತ-ಸ್ವರತ ೬

ಸ್ವಗತ ಭೇದವಿಶೂನ್ಯ ನಿಗಮ ಸಂಚಾರ ಶ್ರೀ
ಜಗನ್ನಾಥ ವಿಠಲರೇಯ-ತನ್ನ ಪಾ
ದಗಳ ಧ್ಯಾನಿಪರ ನೋಯ-ಗೊಡದಂತೆ
ಹಗಲಿರುಳುಕಾವ ಮಾಯಾ-ರಮಣ ನಮ್ಮ
ನಗಲಿ ಸೈರಿಸನು ಪ್ರೀಯ-ಧ್ಯೇಯ ೭

೧೦ ರಾಗ ಜಂಜೂಟಿ—ಆದಿತಾಳ

ಯಾತರ ಭಯ ಶ್ರೀನಾಥನ ಪರಮ
ಪ್ರೀತಿಯ ಪಡೆದವಗೆ ಪ
ಕಾತರಗೊಳದಲೆ ಪಾತಕಹರ ವಿಧಿ
ತಾತನೆ ನಿಜ ಸುಖದಾತನೆಂದರಿತಗೆ ಅ.

ದುಸು ಮುಸುಗುಟ್ಟುವ ಶಶಿಮುಖಿಯಿಂದಲಿ
ಹಸಗೆಟ್ಟದ್ದೇನೋ
ಅಶನಾಚ್ಛಾದನ ತರಲಿಲ್ಲವೆನುತಲಿ
ವ್ಯಸನಪಡುವುದೇನೋ
ಕುಸುಮನಾಭ ಸುಮನಸವಂದಿತ ಪದ
ವಸುದೇವನ ಸುತನೊಶದೊಳಗಿರುವಗೆ ೧

ಬಂಧು ಜನರು ತನಗೊಂದಿಸಿದಾಕ್ಷಣ
ಬಂದ ಭಾಗ್ಯವೇನೋ
ಹಿಂದೆ ಮುಂದೆ ತನ್ನ ನಿಂದಿಸಿ ನುಡಿಯಲು
ಕುಂದಾದದ್ದೇನೊ
ಮಂದರಧರ ಗೋವಿಂದನ ಮಾನಸ
ಮಂದಿರದೊಳು ತಂದಿಟ್ಟಿರುವವಗೆ ೨

ಕಾಶಿ ಕಂಚಿ ಕಾಳಹಸ್ತಿಯೆ ಮೊದಲಾದ
ದೇಶ ತಿರುಗಲೇನೊ
ಘಾಸಿಯಿಂದ ಆಯಾಸಪಡುತ ಆ
ವಾಸದೊಳಿರಲೇನೊ
ಈಶಧೀಶ ಜಗನ್ನಾಥ ವಿಠ್ಠಲನ
ದಾಸನೆನಿಸಿ ಸಂತೋಷದೊಳಿರುವವಗೆ ೩

೧೨ ರಾಗ ಮಧ್ಯಮಾವತಿ ಆಟತಾಳ

ಪಿಡಿಯನ್ನ ಕೈಯ ರಂಗೈಯ್ಯ ಪ.
ಪಿಡಿಯನ್ನ ಕೈಯ ಪಾಲ್ಗಡಲೊಡೆಯನೆ ಮೋಹ
ಮಡುವಿನೊಳ್ಬಿದ್ದು ಬಾಯ್ಬಿಡುವೆ ಬೇಗನೆ ಬಂದು ಅ

ನೀರಜನಾಭ ನಂಬಿದೆ ನಿನ್ನ ನೀರಪ್ರದಾಭಾ
ಕಾರುಣ್ಯನಿಧಿ ಲಕ್ಷ್ಮಿಕ್ರ ನಾರಸಿಂಹನೆ ಪರಿ
ವಾರ ಸಹಿತ ಈ ಶರೀರದೊಳಡಗಿದ್ದು
ಘೋರತರ ಸಂಸಾರಪಂಕದಿ
ಚಾರಿವರಿವೆನೊ ದೂರನೋಳ್ಪರೆ
ಹೇ ರಮಾಪತಿ ಗಾರುಮಾಡದೆ
ಚಾರು ವಿಮಲ ಕರಾರವಿಂದದಿ ೧

ಅನಿಮಿತ್ತ ಬಂಧು ನೀನೇ ಗತಿ ಗುಣಗಣ ಸಿಂಧು
ಅನಘನೆ ನೇವಿಸುವೆನೊ ವಿಧಿ ಭವಸಂಕ್ರಂ
ದನ ಮುಖ್ಯ ದೇವಸನ್ಮುನಿಗಣಾರ್ಚಿತ ಪಾದ
ಅನುಜ ತನುಜಾಗ್ರಜ ಸದಾನುಗ
ಜನನಿ ಜನಕ ಪಶು ಕೃಷೀಧನ
ಘನಸದನ ಸಂಹನನ ಮೊದಲಾ
ದಿನಿತು ಸಾಕುವ ಘನ್ನತೆ ನಿನ್ನದು ೨

ಶ್ರೀ ಜಗನ್ನಾಥ ವಿಠಲ ದ್ವಿಜರಾಜವರೂಥ
ಓಜ ಕಾಮಿತಕಲ್ಪಭೂಜ ಭಾಸ್ಕರ ಕೋಟಿ
ತೇಜ ಮನ್ಮನದಿ ವಿರಾಜಿಸು ಪ್ರತಿದಿನ
ಈ ಜಗತ್ರಯ ಭಾಜನನೆ ಬಲು
ಸೋಜಿಗವಲಾ ನೈಜನೇ ನಿ
ರ್ವ್ಯಾಜದಿಂ ನೀನೇ ಜಯಪ್ರದ
ನೈಜ ಜನರಿಗೆ ಹೇ ಜಗತ್ಪತೆ ೩

೧೨ ರಾಗ ಪೂರ್ವಿ ಆದಿತಾಳ

ಬಯಸದಿರಹಿಕ ಸುಖಗಳನುದಿನ ನಿ
ರ್ಭಯದಿ ಭಜಿಸು ಹರಿಯ ಪ

ವಯನಗಮ್ಯ ವಾಂಛಿತ ಫಲಗಳ ಸ
ದ್ವಯದಿ ಕೊಡುವುದರಿಯ–ಪ್ರಾಣಿ ಅ

ಭೂರುಹ ಮೃಗ ಪಶು ವಾರಿ ಖೇಚರ ಶ
ರೀರಗಳಲಿ ಬಂದೆ
ಮಾರಿ ಮಸಣಿ ಸ್ವೀಕರಿಸಿ ಭವಾನಿಗ
ಳಾರಾಧಿಸಿ ನಿಂದೆ
ನಾರಾಯಣನ ಪದಾರವಿಂದಯುಗ
ಳಾರಾಧನೆಯೊಂದೆ
ತಾರಿಸುವುದು ಸಂಸಾರ ಶರಧಿ ಸುಖ
ದೋರುವುದೋ ಮುಂದೆ–ಪ್ರಾಣಿ ೧

ಅನಿರುದ್ಧನು ನಿಜವನಿತೆ ಸಹಿತ ತಾ
ಧನಧಾನ್ಯದೊಳಿಪ್ಪ
ಅನುಬಂಧಿಗಳೊಳು ಕೃತಿಪತಿ ಪ್ರದ್ಯು
ಮ್ನನು ಸುಖಗಳ ತೋರ್ಪ
ಗುಣವಂತರೊಳು ಜಯಾಪತಿ ಸಂಕರು
ಷಣ ಕರ್ಮವ ಮಾಳ್ಪ
ಕುನರರು ಮಾಡುವ ಧರ್ಮ ಕರ್ಮಗಳ
ಕೊನೆಗೆ ತಾನು ಒಪ್ಪ–ಪ್ರಾಣಿ ೨

ವಾಸುದೇವ ವಿಜಯಪ್ರದನಾಗಿ
ದ್ವೀ ಶರೀರಗಳೊಳಾ
ವಾಸವಾಗಿ ಮಾಯಾಪತಿ ಸರ್ವರ
ಕ್ಲೇಶ ಸುಪುಣ್ಯಗಳ

ತಾ ಸಮನಿಸುವನು ಸಂದೇಹಿಸದಿರು
ಆಶಾಪಾಶಗಳ
ತಾ ಸಡಲಿಸುವನು ಪ್ರತಿ ಪ್ರತಿ ಕ್ಷಣ ಕರು
ಣಾಸಮುದ್ರ ಕೇಳಾ–ಪ್ರಾಣಿ ೩

ನಾರಾಯಣ ತನ್ನಾರಾಧಿಪರಿಗೆ
ದೂರ ಗೈವ ದುರಿತ
ಕಾರುಣಿಕ ಕೈವಲ್ಯ ಪ್ರದಾಯಕ
ತೋರುವ ಸರ್ವಜಿತ
ಹಾರೈಸದಿರು ಅಲ್ಪರ ನರಕ
ದ್ವಾರಗಳವು ನಿರುತ
ಸೂರಿಗಳನು ಸಂಸೇವಿಸು ಮುಕ್ತಿಗೆ
ದ್ವಾರವಹುದು ಸತತ–ಪ್ರಾಣಿ ೪

ಪಂಚರೂಪ ಪರಮಾತ್ಮನು ತಾ ಷಟ್
ಪಂಚಸಾಮದಿ ಪೊರೆವ
ಪಂಚಜ್ಞಾನ ಕರ್ಮೇಂದ್ರಿಯ ಜನ್ಯ ದ್ವಿ
ಪಂಚಪಾತಕ ತರಿವ
ಸಂಚಿತ ಆಗಾಮಿಗಳಪರಾಧವ
ಮುಂಚಿನವರಿಗೀವ
ವಾಂಛಿತಪ್ರದ ಜಗನ್ನಾಥ ವಿಠ್ಠಲನು
ಮಿಂಚಿನಂದದಿ ಪೊಳೆವ ಪ್ರಾಣಿ ೫

೧೩ ರಾಗ ಮಧ್ಯಮಾವತಿ (ರೇಗುಪ್ತಿ) ಆದಿತಾಳ

ರಥವನೇರಿದ ರಥಿಕನ್ಯಾರೆ, ಪೇಳಮ್ಮಯ್ಯ ಪ.
ಕಥಿತಧ್ಯಾತ ಸಂಸ್ತುತ ವಿತತಾನತ
ಹಿತಕರದಿ ವಿಷಸೃತಿ ಕಾಣಮ್ಮ ಅ

ಹಾಟಕ ರತ್ನ ಸುಪೀಠ ಮಧ್ಯ ಮಂಟಪದಿ ನೋಡಮ್ಮಯ್ಯ
ತಾಟಂಕಯುತ ವಧೂಟಿಯರಿಕ್ಕೆಲದಿ ನೋಡಮ್ಮಯ್ಯ
ಕೋಟಿಭಾಸ್ಕರ ಪ್ರಭಾಲೋಪದಿ ರಾಜಿಸುವ ನೋಡಮ್ಮಯ್ಯ
ಆಟದಿ ಕುರುಜ ಮಹಾಟವಿಸವರಿ, ಕಿ
ರೀಟಿಯ ಸಲಹಿದ ಖೇಟವಾಹನನೆ ೧

ಭುಜಗರಾಜ ಫಣಿಮಂಡಲ ಮಂಡಿತನೆ ನೋಡಮ್ಮಯ್ಯ
ವಿಜಯದರಾರಿ ಗದಾಂಬುಜ ಕರಭೂಷಿತನೆ ನೋಡಮ್ಮಯ್ಯ
ಗಜ ಚರ್ಮಧರಾದ್ಯನಿಮಿಷಗಣಸೇವಿತನೆ ನೋಡಮ್ಮಯ್ಯ
ಅಜನ ನಾಭಿಯಲಿ ಪಡೆದು ಚರಾಚರ
ಸೃಜಿಸೆ ಪೇಳ್ದ *ನಿರಜ ಕಾಣಮ್ಮ ೨

ಏತಾದೃಶ ಮಹಾಮಹಿಮ ರಮಾವಲ್ಲಭನು ನೋಡಮ್ಮಯ್ಯ
ಶ್ವೇತ ದ್ವೀಪಾನಂತಾಸನ ವೈಕುಂಠ ಬಿಟ್ಟಿಳಿದು ನೋಡಮ್ಮಯ್ಯ
ವೀತಭಯ ಜಗನ್ನಾಥ ವಿಠ್ಠಲ ಬಾರಲ್ಯಾಕೆ ಪೇಳಮ್ಮಯ್ಯ
ಭೂತಳ ಜನರಭಿಲಾಷೆಯ ಸಲಿಸಲು
ವಾತಾಶನ ಗಿರಿಗಿಳಿದ ಕಾಣಮ್ಮ ೩

೪ ರಾಗ ಪೀಲು ಆದಿತಾಳ

ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ
ಸಂಗ ಸುಖವಿತ್ತು ಕಾಯೊ ಕರುಣಾಸಾಗರ ಪ

ಅರಿಯರೊ ನೀನಲ್ಲದೆ ಮತ್ತನ್ಯದೈವರ
ಮರೆಯರೊ ನೀ ಮಾಡಿದ ಅನಿಮಿತ್ತೋಪಕಾರ
ತೊರೆಯರೊ ನಿನ್ನಂಘ್ರಿಸೇವೆ ಪ್ರತಿವಾಸರ
ಅರಿಯರೊ ಪರತತ್ವವಲ್ಲದೆ ಇತರ ವಿಚಾರ ೧

* ನಿರಜ – ನಿರ್ದೋಷ

ಮೂಕ ಬಧಿರರಂತಿಪ್ಪರೊ ನೋಳ್ಪ ಜನಕೆ
ಕಾಕು ಯುಕುತಿಗಳನವರು ತಾರರೊ ಮನಕೆ
ಸ್ವೀಕರಿಸರನರ್ಪಿತವೊಂದು ಕಾಲಕೆ
ಆ ಕೈವಲ್ಯ ಭೋಗ ಸುಖ ಅವರಿಗೆ ಬೇಕೆ ೨

ಜಯಾಜಯ ಲಾಭಾಲಾಭ ಮಾನಾಪಮಾನ
ಭಯಾಭಯ ಸುಖದುಃಖ ಲೋಷ್ಟಕಾಂಚನ
ಪ್ರಿಯಾಪ್ರಿಯ ನಿಂದಾಸ್ತುತಿಗಳನುದಿನ
ಶ್ರೀಯರಸ ಚಿಂತಿಸುವರೊ ನಿನ್ನ ಅಧೀನ ೩

ಈಶಿತವ್ಯರೆಂತಿಪ್ಪರೇಕಾಂತ ಭಕ್ತರು
ದೇಶ ಕಾಲೋಚಿತ ಧರ್ಮಾಕರ್ಮಾಸಕ್ತರು
ಆಶಾಕ್ರೋಧ ಲೋಭಮೋಹ ಪಾಶಮುಕ್ತರು
ಈಸುಜನರೇ ಶಾಪಾನುಗ್ರಹ ಶಕ್ತರು ೪

ಕಂಡ ಕಂಡಲ್ಲಿ ವಿಶ್ವರೂಪ ಕಾಂಬರು
ಉಂಡು ಉಣಿಸಿದ್ದೆಲ್ಲ ನಿನ್ನ ಯಜ್ಞವೆಂಬರು
ಬಂಡುಣಿಯಂದದಿ ನಾಮಾಮೃತವನುಂಬರು
ಹೆಂಡಿರು ಮಕ್ಕಳು ನಿನ್ನ ತೊಂಡರೆಂಬರು ೫

ಬಿಡರು ತಮ್ಮ ಸ್ವಧರ್ಮಗಳೇನು ಬಂದರು
ಬಿಡರು ದೈನ್ಯ ಒಬ್ಬರಿಗು ಲೋಕವಂದ್ಯರು
ಪಿಡಿಯರು ನಿನ್ನ ದ್ವೇಷಿಗಳಿಂದೇನು ಬಂದರು
ಕೊಡುವರು-ಬೇಡಿದಿಷ್ಟಾರ್ಥ ನಿತ್ಯಾನಂದರು ೬

ನಗುವರೊ ರೋದಿಸುವರೊ ನಾಟ್ಯವಾಡೋರೊ
ಬಗೆಯರೊ ಬಡತನ ಭಾಗ್ಯ ಭಾಗವತರು
ತೆಗೆಯರೊ ನಿನ್ನಲ್ಲಿ ಮನವೊಮ್ಮೆಯಾದರು
ಜಗನ್ನಾಥ ವಿಠಲ ನಿನ್ನವರೇನು ಧನ್ಯರೊ ೭

೧೫ ರಾಗ ತೋಡಿ ತಾಳ

ಮುಕ್ತನಲ್ಲವೆ ಭವದಿ ಮುಕ್ತನಲ್ಲವೆ ಪ
ಶಕ್ತನಾದ ಹರಿಯ ಪರಮಭಕ್ತಿಯಿಂದ ಭಜಿಪ ನರನು ಅ

ಉದಯ ಝಾವದಲಿ ಎದ್ದು ಮಧು ವಿರೋಧಿ ಯಮಲ ಗುಣವ
ಹೃದಯದಲಿ ನೆನೆದು ಪರಮ ಮುದದಿ ನಲಿದು ಪಾಡುವವನು ೧
ಕೇಶವಗೆ ರಮಾಬ್ಜಭವ ಸದಾಶಿವ ಶಕ್ರಾದಿ ಸುರರು
ದಾಸರು ಎನೆಯಿಡುವ ಶಕ್ತಿ ಲೇಶವಿಲ್ಲವೆಂಬ ನರನು ೨
ಒಂದಧಿಕ ದಶೇಂದ್ರಿಯಗಳಿಗಿಂದಿರೇಶ ವಿಷಯ ಸಂ
ಬಂಧಗೈಸಿ ಪೋಷಿಸಿ ಸುಖ ತಂದು ಕೊಡುವನೆಂಬ ನರನು ೩
ಈ ಪರಿಯಲಿ ತಿಳಿದು ಪುಣ್ಯ ಪಾಪ ಕರ್ಮ ದುಃಖ ಸುಖ ಜ
ಯಾಪಜಯ ಮಾನಾಪಮಾನ ಶ್ರೀಶ ಕೊಟ್ಟನೆಂಬ ನರನು ೪
ವೇದಶಾಸ್ತ್ರಗಳಲಿ ಇಹ ವಿರೋಧವಾಕ್ಯಗಳನು ಶ್ರೀ ಪ್ರ
ಮೋದ ತೀರ್ಥರುಕ್ತಿಯಿಂದ ಶೋಧಿಸುತಲಿ ಸುಖಿಪ ನರನು ೫
ಮಹಿತರಾಚರಿಪ ಧರ್ಮವಿಹಿತವ ಸಜ್ಜನರು ಮಾಳ್ಪ
ವಿಹಿತವಾದರು ಸರಿಯದೇ ಅವಿಹಿತವೆಂದು ತಿಳಿವ ನರನು ೬
ಪರಮ ಊಸಕ್ಷ್ಮ ಜೀವರೊಂದೊಡೆಯೊಳಿಡದೆ ಸ್ವರ್ಗ ಭೂಮಿ
ನರಕ ಫಲಗಳುಣಿಸಿ ಕರ್ಮ ಹರಿಸುವ ಹರಿ ಎಂಬ ನರನು ೭
ಗುರು ಹಿರಿಯರ ಮಾತುಗಳನುಸರಿಸಿ ನಡೆದು ಅವರೊಳಿಪ್ಪ
ಪರಮಪುರುಷಗರ್ಪಿಸುತಲಿ ಹರುಷ ಬಡುತಲಿಪ್ಪ ನರನು ೮
ಈ ಶರೀರದರಸು ಶ್ರೀನಿವಾಸ ಮಾತೆ ಪ್ರಾಣ ಪಾರ್ವ
ತೀಶ ಪ್ರಮುಖರಿಹರೆಂದು ಪೋಷಿಸುತಲಿ ತೋಷಿಸುವನು ೯
ಪ್ರಿಯ ವಸ್ತುಗಳೊಳಗೆ ಅನ್ನಮಯನೆ ಪ್ರೀಯನೆಂದು ಅನ್ಯ
ಬಯಕೆಗಳನು ಜರಿದು ಹರಿಯ ದಯವ ಬಯಸುತಿಪ್ಪ ನರನು ೧೦
ಶತ್ರು ತಾಪಕನುಳಿದು ಅನ್ಯ ಮಿತ್ರರಿಲ್ಲವೆಂದು ಅಹೋ
ರಾತ್ರಿಯಲ್ಲಿ ಬಿಡದೆ ಜಗದ್ಧಾತ್ರನ ಗುಣತುತಿಪ ನರನು ೧೧
ಬಿಂಬನೆನಿಸಿ ಸರ್ವರ ಹೃದಯಾಂಬರದೊಳಿದ್ದು ಜನ ವಿ
ಡಂಬನಾರ್ಥ ಕರ್ಮಗಳಾರಂಭ ಮಾಳ್ಪನೆಂಬ ನರನು ೧೨

ಅಕ್ಷರೇಢ್ಯ ಬ್ರಹ್ಮ ವಾಯುತ್ರ್ಯಕ್ಷ ಸುರಪ ಸುರರೊಳಗ
ಧ್ಯಕ್ಷ ಸರ್ವ ಕರ್ಮಗಳಲಿ ಸಾಕ್ಷಿಯೆಂದು ಸ್ಮರಿಪ ನರನು ೧೩
ಶಂಬರಜ ಭವಾಂಡದೊಳು ಮಹಾಂಬರವಿಪ್ಪಂತೆ ಶ್ರೀ ನಿ
ತಂಬಿನಿ ಸಹ ಸರ್ವರೊಳಗೆ ತುಂಬಿಹನೆಂದರಿತ ನರನು ೧೪
ಅದ್ವಿತೀಯನನಪೇಕ್ಷ ಭಕ್ತಹೃದ್ವನಜಾವಾಸನೆನಿಸಿ
ಕದ್ದೊಯ್ದವರ ಅಘವ ನುಣಿಪ ಅದ್ವಯಿತರಿಗೆಂಬ ನರನು ೧೫
ಜಾಂಬವತೀ ರಮಣ ವಿಷಯ ಹಂಬಲವನು ಬಿಡಿಸಿ ತನ್ನ
ಕಾಂಬ ಸುಖವನಿತ್ತು ನಿಜ ಕುಟುಂಬದಿಡುವನೆಂಬ ನರನು ೧೬
ಅಣು ಮಹತ್ಪದಾರ್ಥ ವಿಲಕ್ಷಣ ವಿಶೋಕ ಜೀವರೊಡನೆ
ಜನಿಸಿ ಪುಣ್ಯ ಪಾಪ ಫಲಗಳುಣದೆ ಉಣಿಪನೆಂಬ ನರನು ೧೭
ವಿಧಿ ನಿಷೇಧವೆರಡು ಕರ್ಮಸುದತಿಯರೊಡಗೂಡಿ ಸಮಾ
ಧ್ಯಧಿಕ ಶೂನ್ಯ ಮಾಳ್ಪನೆಂದು ಪದೇ ಪದೆಗೆ ಸ್ಮರಿಪ ನರನು ೧೮
ಸ್ವಾತಿ ವರುಷ ವಾರಿ ಕಣವ ಚಾತಕ ಹಾರೈಸುವಂತೆ
ಶ್ವೇತವಾಹನ ಸಖನ ತದೀಯ ಪ್ರೀತಿಯಿಂದ ಕೇಳ್ವ ನರನು ೧೯
ಲೋಕಬಂಧು ಲೋಕನಾಥ ಲೋಕಮಿತ್ರ ಲೋಕರೂಪ
ಲೋಕರಂತೆ ಲೋಕದೋಳ್ ವಿಶೋಕ ಮಾಳ್ಪನೆಂಬ ನರನು ೨೦
ಶಾತ ಕುಂಭವರ್ಣ ಜಗನ್ನಾಥವಿಠಲನೆಂಬ ಮಹ
ದ್ಭೂತಬಡಕರಾವು ಇವನ ಭೀತಿ ಬಿಡದು ಎಂಬ ನರನು ೨೧

೧೬ ರಾಗ ಕಾಂಬೋದಿ ಝಂಪೆತಾಳ

ಕರುಣಿಸೆನಗಿನಿತು ಕರುಣಾಳು ನಿನ್ನ ಪ.
ಚರಣಾಬ್ಜದಲಿ ಭಕುತಿ, ವಿಷಯದಿ ವಿರಕುತಿ ಅ

ಬಿಂಬನೇ ಸರ್ವ ಪ್ರಯೋಜನವ ಮಾಡಿ ಪ್ರತಿ
ಬಿಂಬರಿಗೆ ತತ್ಫಲಗಳೀವ ಕಾವ
ಬಿಂಬಸ್ವತಂತ್ರ ಪ್ರತಿ ಬಿಂಬಾಸ್ವತಂತ್ರತವ
ನೆಂಬ ಸುಜ್ಞಾನಪೂರ್ವಕ ನಿನ್ನ ಭಜಿಪ ಸುಖ ೧

ಕಾರ್ಯಕಾರಣ ಅಂಶಿ ಅಂಶಾವತಾರ ಅಂ
ತರ್ಯಾಮಿ ವ್ಯಾಪ್ತ ವ್ಯಾಪಕ ಪ್ರೇರಕ
ಪ್ರೇರ್ಯ ಬಾಧಕ ಬಾಧ್ಯ ಪೋಷ್ಯ ಪೋಷಕ ರೂಪ
ಆರ್ಯರಿಂದರಿತು ಅನುದಿನದಿ ಸುಖಿಸುವ ಭಾಗ್ಯ ೨
ತಾರತಮ್ಯಜ್ಞಾನ ದುರ್ವಿಷಯಗಳಲಿ ಸ
ದ್ವೈರಾಗ್ಯ ಹರಿದ್ವೇಷಿಗಳಲಿ ದ್ವೇಷ
ಸೂರಿಗಳ ಸಂಗ ಗುಣರೂಪಕ್ರಿಯೆಗಳನು ಸುವಿ
ಚಾರಗೈಯುತ ನಿತ್ಯ ಅನುಮೋದಪಡುವಂತೆ ೩
ಬಿಂದೋದಕಗಳೆಲ್ಲ ಮಜ್ಜನವು ದೇಹಾನು
ಬಂಧಿ ಜನರೆಲ್ಲ ಪರಿವಾರ ನಿನಗೆ
ನಿಂದ್ಯಕರ್ಮಗಳೆಲ್ಲ ಪಾದುಕೆಗಳೆಂಬ ಅನು
ಸಂಧಾನ ಮನಕೆ ನಿತ್ಯದಲಿ ಬರುವಂತೆ ೪
ಚೇತನಾಚೇತನಗಳೆರಡು ಪ್ರತಿಮೆಗಳು ಸಂ
ಪ್ರೀತಿಯಲಿ ಸಂರಕ್ಷಿಸುವುದು ಪೂಜೆ
ಈ ತನುವೆ ಸದನವೆಂದರಿತು ನಿತ್ಯದಿ ಜಗ
ನ್ನಾಥವಿಠ್ಠಲಗುಂಬವಿಷಯಮುಖವೆಂಬುದನು ೫

೧೭ ರಾಗ ಧನ್ಯಾಸಿ ಆದಿತಾಳ

ಪಾಲಿಸೆನ್ನ (ಪಾವನ್ನ ಗುಣರನ್ನ ಪಾ) ಗೋಪಾಲಕೃಷ್ಣ ಪ
ಪಾಲಿಸೆನ್ನ ದಧಿಪಾಲ ಮುಖರ ಗೋ
ಪಾಲಬಾಲ ಕರುಣಾಲವಾಲ (ಕರುಣಾಲಯ ಹರಿಯೆ ಪಾ.). ಅ
ಪುಂಡರೀಕ ಭವರುಂಡಮಾಲಿ ಮೇ
ಷಾಂಡ ಪ್ರಮುಖ ಸುರಷಂಡ ಮಂಡನ ೧
ಗೋಪ ಗೋಪ ಗೋಪಾಲ ವೃಷ್ಣಿ ಕುಲ
ದೀಪ ಶ್ರೀಪ ಶಿವಚಾಪ ಖಂಡನ ೨
ವ್ಯಾಪ್ತಗುಪ್ತ ಜಗದಾಪ್ತ ದೋಷನಿ
ರ್ಲಿಪ್ತ ತೃಪ್ತ ಗತಸುಪ್ತ ಸುಷುಪ್ತ ೩

ಅಂಡಜಾಧಿಪ ಪ್ರಕಾಂಡಪೀರ ಕೋ
ದಂಡಪಾಣಿ ಬ್ರಹ್ಮಾಂಡನಾಯಕ ೪
ಅಧ್ವರೇಶ ಲೋಕೋದ್ಧರ (ಲೋದ್ವಹ ಪಾ) ಪಾಣಿ ಸ
ರಿದ್ವರಪಿತ ಗುರು ಮಧ್ವವಲ್ಲಭ ೫
ವೇದ ವೇದ್ಯ ಬ್ರಹ್ಮಾದಿವಂದ್ಯ ಸುಖ
ಬೋಧ ಪೂರ್ಣ ಬ್ರಹ್ಮೋದನ ಭೋಕ್ತ ೬
ಪೋತವೇಷ ಧರ ಪೂತನಾರಿ ಪುರು
ಹೂತನುತ ಜಗನ್ನಾಥ ವಿಠ್ಠಲ ೭

೧೮ ರಾಗ ಪೂರ್ವಿ ಲದಿತಾಳ

ಧನ್ಯನಾದೆ ವಿಠಲನ ಕಂಡು ಪ
ಧನ್ಯನಾದೆ ಕಾಮನ್ನಪಿತನ ಲಾ
ವಣ್ಯ ಮೂರುತಿಯ ಕಣ್ಣಿಲಿ ಕಂಡು ಅ
ದೇವವರೇಣ್ಯ ಸದಾ ವಿನೋದಿ ವೃಂ
ದಾನವ ಸಂಚರಿ ಒವನ ಕಂಡು ೧
ಮಂಗಳಾಂಗ ಕಾಳಿಂಗಮಥನ ಮಾ
ತಂಗ ವರದ ವರ ರಂಗನ ಕಂಡು ೨
ಹಾಟಕಾಂಬರ ಕಿರೀಟಿ ಸಾರಥಿ
ತಾಟಕಾರಿ ವೈರಾಟನ ಕಂಡು ೩
ಚಿಂ ತಿತಫಲದ ಕೃತಾಂತನಾತ್ಮಜಾ
ದ್ಯಂತರಹಿತ ನಿಶ್ಚಿಂತನ ಕಂಡು ೪
ಮಾತುಳಾಂತಕ ವಿಧಾತ ಪಿತ ಜಗ
ನ್ನಾಥವಿಠಲ ವಿಖ್ಯಾತನ ಕಂಡು ೫

೧೯ ರಾಗ ಕಾಂಬೋದಿ ಆಟತಾಳ

ನಿನ್ನ ಸಂಕಲ್ಪಾನುಸಾರ ಮಾಡೊ ಪ
ಎನ್ನ ಸಾಕುವ ಧೊರೆಯೆ ಮಾನ್ಯ ಮಾನದ ನೀನು ಅ

ಪಾತ್ರನೆಂದೆನಿಸು ಪಾಪಾತ್ಮನೆಂದೆನಿಸೆನ್ನ
ಶ್ರೋತ್ರೀಯನೆಂದೆನಿಸು ಬಹು ಶುಂಠನೆನಿಸು
ಪುತ್ರಮಿತ್ರಾದ್ಯರಿಂ ಬೈಸು ಪೂಜೆಯ ನಡಿಸು
ಕರ್ತೃ ನೀ ಜಗಕೆ ಸರ್ವತ್ರ ವ್ಯಾಪಕನೆ ೧

ಜನರೊಳಗೆ ನೀನಿದ್ದು ಜನುಮ ಜನುಮಗಳಲ್ಲಿ
ಗುಣಕಾಲ ಕರ್ಮ ಸ್ವಭಾವಂಗಳ
ಅನುಸರಿಸಿ ಪುಣ್ಯ ಪಾಪಗಳ ಮಾಡಿಸಿ ಫಲಗ
ಳುಣಿಸಿ ಮುಕ್ತರಮಾಡಿ ಪೊರೆವ ಕರುಣಾಳು ೨

ಯಾತಕೆನ್ನನು ಬರಿದೆ ದುಃಖಿತನ ಮಾಡುವಿ ಧ
ರಾತಳದೊಳನುದಿನ ವಿಧಾತಪಿತನೆ
ಭೀತಿಗೊಂಬುವನಲ್ಲ ಭಯನಿವಾರಣ ಜಗ
ನ್ನಾಥವಿಠ್ಠಲನೆ ದಯಮಾಡು ಜಗದೀಶ ೩

೨೦ ರಾಗ ನಾಟಿ (ಕಲ್ಯಾಣಿ) ಝಂಪೆತಾಳ

ಆವಭಯವಿಲ್ಲವೋ ಆವಭಯವಿಲ್ಲ ಪ.

ಆವಭಯವಿಲ್ಲ ಶ್ರೀ ಪರಾವರೇಶನ ಸಕಲ
ರಾವಿನಲಿ ಚಿಂತಿಸುವ ಪರಾವರಜ್ಞರಿಗಿನ್ನು ಅ

ದೇಶ ಕಾಲೋಚಿತ ಸುಧರ್ಮ ನಿರ್ಮಗಳು ಸ
ನ್ಯಾಸ ಮೊದಲಾದಾಶ್ರಮೋಚಿತ ಸುಕರ್ಮಗಳು
ಮಾಸೋಪವಾಸ ವ್ರತನೇಮ ನೀಮಗಳು ಸದ್
ವ್ಯಾಸಂಗ ನೀಸಂಗವು
ಆಸನ ಜಯ ನಿಯ ಪ್ರದೋಷನಾಧ್ಯಾಯ ನೀಯ
ಶ್ವಾಸಬಂಧನ ಉಪನ್ಯಾಸ ತೀರ್ಥಾಟನ ರ
ಮೇಶ ಗುಣಗಳನಟ್ಟಹಾಸದಲಿ ನೆನೆವುತ ನಿ
ರಾಸೆಯಿಂದಿಪ್ಪ ಹರಿದಾಸ ದಾಸರಿಗೆ ೧

ಸ್ನಾನ ಜಪ ದೇವತಾರ್ಚನೆ ವೈಶ್ವದೇವ ಬಲಿ
ದಾನ ಪಾತ್ರಾಪಾತ್ರ ವಿಧಿ ನಿಷೇಧಗಳು ವಿ
ಜ್ಞಾನ ವಿಹಿತಾಚರಣೆ ಸರ್ವತ್ರ ವಿನಯ ಸಂ
ಹನನ ವೈರಾಗ್ಯ ಶಕ್ತಿ
ಶ್ರೀನಿವಾಸನ ಪರಮ ವಿಮಲ ಲೋಕೈಕ ಕ
ಲ್ಯಾಣ ಗುಣಗಣರೂಪ ಕ್ರಿಯೆಗಳನು ಜಡಚೇತನದಿ
ಧೇನಿಸುತ ಮನದಿ ಹಿಗ್ಗುತ ತುತಿಸಿ ನಲಿವ ಸುಮ
ಹಾನುಭಾವಜ್ಞರಿಗೆ ಈರೇಳು ಲೋಕದೊಳು ೨

ಮಲಿನವಾಗಿಹರೊ ನೋಳ್ಪರಿಗೆ ಪ್ರತಿದಿನದಲ್ಲಿ
ಸುಲಭವಾಗಿಹರು ದುರ್ಲಭರಾಗಿ ತೋರುವರು
ಅಳುವರೊಮ್ಮೊಮ್ಮೆ ಪರವಶರಾಗಿ ಮೈಮರೆದು
ನಲಿವರೊಮ್ಮೊಮ್ಮೆ ನಗುತ
ಜಲಜಾಕ್ಷನಮಲ ಮಂಗಳ ಗುಣವ ಕೇಳಿ ಗಂ
ಟಲ ಶಲೆಗಳುಬ್ಬಿ ಚಪ್ಪಳೆಗಳಂ ಬಾರಿಸುತ
ಮುಳುಗಿ ಸುಖ ಜಲಧಿಯೊಳು ತನುವು ಪುಳಕೋತ್ಸವದಿ
ಇಳೆಯೊಳಗೆ ಸಂಚರಿಪ ಕಲುಷವರ್ಜಿತರಿಗಿನ್ನು ೩

ನೋಡುವುದೆ ಹರಿಮೂರ್ತಿ ಕೇಳುವುದೆ ಹರಿಕೀರ್ತಿ
ಆಡುವುದೆ ಹರಿವಾರ್ತೆ ಮಾಡುವದೆ ಹರಿಪೂಜೆ
ನೀಡುವುದೆ ಅವಧಾನ ಬೇಡುವುದೆ ಪುರುಷಾರ್ಥ
ಕೂಡುವುದೆ ಸಾಯುಜ್ಯವೂ
ದಾಡೆಯಿಂದಲಿ ದನುಜನಳಿದು ಧರಣಿಯ ತಂದ
ಕ್ರೋಢರೂಪಕನೆ ಲೋಕಕ್ಕೆಲ್ಲ ಅನಂದ
ನಾಡಾಡಿ ದೈವದಂತಿವನಲ್ಲವೆಂದು ಕೊಂ
ಡಾಡುತವನಿಯೊಳು ಸಂಚರಿಸುವ ವಿಪಶ್ಚಿತರ್ಗೆ ೪

ಕುಟಿಲರಹಿತರು ಧರ್ಮ ಕಾಮಾರ್ಥ ಮುಕ್ತಿ ಸಂ
ಘಟಿಸಲೆಮಗೆಂದು ಸುರನದಿ ಮುಖ್ಯ ತೀರ್ಥ ವೆಂ
ಕಟ ಶೈಲ ಮೊದಲಾದ ಕ್ಷೇತ್ರದಲಿ ಸತ್ಕರ್ಮ
ಹಟದಿಂದ ಮಾಳ್ಪರಲ್ಲಿ

ವಟಪತ್ರಶಯನನೊಲುಮೆಯನೆ ಬಯಸುತಜಾಂಡ
ಕಟಹಾದ್ಬಹಿವ್ಯಾಪ್ತನಾದ ಶ್ರೀ ಜಗನ್ನಾಥ
ವಿಠಲಗಾವಾವ ದೇಶದಲಿ ಕಾಲದಲಿ ಪಾ
ಸಟಯಿಲ್ಲವೆನುತಲಾರ್ಭಟಿಸುತ್ತಲಿಪ್ಪವರೆಗೆ ೫

೨೧ ರಾಗ ಕಾಂಬೋದಿ ಝಂಪೆತಾಳ

ಬೇಡಲೇತಕೆ ಪರರ ದೇಹಿಯೆಂದು ಪ
ನೀಡುವ ಧೊರೆ ನಮಗೆ ನೀನಿರಲು ಸರ್ವದ ಅ

ಗ್ರಾಸವನು ಬೇಡೆ ದೂರ್ವಾಸಮುನಿಗನ್ನನಾ
ಯಾಸದಿಂ ತತ್ಕಾಲದಲಿ ಕಲ್ಪಿಸಿ
ಆ ಸಂಯಮಿಗೆ ಉಣಿಸಿ ದಣಿಸಿದ ಮಹಾದಾತ
ದಾಶರಥೆ ನಿನ್ನ ಬಿಟ್ಟನ್ಯದೇವತೆಗಳನು ೧

ಖೂಳ ದುಶ್ಶಾಸನನು ದ್ರೌಪದಿಯ ಸಭೆಯೊಳು, ದು
ಕೂಲವನು ಸೆಳೆಯೆ ದ್ವಾರಕಾಮಂದಿರ
ಶ್ರೀಲೋಲ ಶ್ರೀಕೃಷ್ಣ ಕರುಣಿಸು ಕರುಣಿಸೆನೆ
ಪಾಂ-ಚಾಲಿ ಮೊರೆ ಕೇಳಿ ದಿವ್ಯಾಂಬರ ನಿಚಯವಿತ್ತೆ ೨

ಮಡದಿ ಕಳುಹಲು ಬಂದ ಬ್ರಾಹ್ಮಣನ ಪೀಡಿಸುವ
ಬಡತನವ ಕಳೆದೆ ಒಪ್ಪಿಡಿ ಅವಲಿಗೆ
ಪೊಡವಿಯನ್ನಾಳಿಸಿದೆ ಕ್ರಿಮಿಗೊಲಿದು ಕರುಣದಲಿ
ಜಡಜಸಂಭವ ಮೃಡಬಿಡೌಜರೀಪ್ಸಿತ ಕೊಡುವೆ ೩

ತಾಪಸೋತ್ತಮ ಮೃಕಂಡಾತ್ಮಜಗೆ ಕಲ್ಪಾಯು
ನೀ ಪೂರ್ತಿಮಾಡಿ ಅಲ್ಪಾಯು ಕಳೆದೆ
ಆ ಪರೇತೇಶ್ವರನ ಪಟ್ಟಣವ ಸಾರ್ದ ಸಾಂ
ದೀಪತನಯನ ತಂದ ಸರ್ವಾಂತರ್ಯಾಮಿ ೪

ಕಲ್ಪ ಕಲ್ಪಗಳಲ್ಲಿ ವಿಶ್ವಜೀವರಿಗನ್ನ
ಕಲ್ಪಕನು ನೀನಿರಲು ಭ್ರಾಂತಿಯಿಂದ
ಅಲ್ಪಮಾನವರಿಗಾಲ್ಪರಿದರೇನಹುದು ಅಹಿ
ತಲ್ಪ ಜಗನ್ನಾಥ ವಿಠ್ಠಲ ಕಲ್ಪತರುವಿರಲು ೫

೨೨ ರಾಗ ಯರಕಲ ಕಾಂಬೋದಿ ಅಟತಾಳ

ಮನವೆ ಮರವರೇನೊ ಹರಿಯ, ಬಹು ಪ
ಜನುಮಗಳಲಿ ಪುಟ್ಟಿ ಭವಣೆಗಳರಿಯ ಅ

ವಿಷಯ ಚಿಂತನೆ ಮಾಡೆ ಸಲ್ಲ, ಮೇಷ
ವೃಷಣನಾದನು ಪೌಲೋಮಿಯು ನಲ್ಲ
ಝಷಕೇತುವಿನ ಮೇಳ ಹೊಲ್ಲ, *ನಿ
ರಶನನಾಗೊ ಯಮರಾಯ ಎಂದೆಂದು ಕೊಲ್ಲ ೧

ಧನವೆ ಜೀವನವೆಂಬೆ ನಿನಗೆ, ಸುಯೋ
ಧನ ನೋಡು ಧನದಿಂದ ಏನಾದ ಕೊನೆಗೆ
ಅನಿರುದ್ಧದೇವನ ಮನೆಗೆ, ಪೋಪ
ಘನವಿಜ್ಞಾನ ಸಂಪಾದಿಸೊ ಕೊನೆಗೆ ೨

ಹರಿದಾಸನಾಗಿ ನೀ ಬಾಳೋ, ಗುರು
ಹಿರಿಯರ ಪಾದ †ಕಮಲಕೆ ನೀ ಬೀಳೊ
ನರರ ನಿಂದಾಸ್ತುತಿ ತಾಳೊ, ದೇಹ
ಸ್ಥಿರವಲ್ಲ ಸಂಸಾರ ಬಲು ಹೇಯ ಕೇಳೊ ೩

ಜಿತವಾಗಿ ಪೇಳುವೆ ಸೊಲ್ಲ, ಹರಿ
ಕಥೆಯಲ್ಲಿ ನಿರತನಾಗಿರು ಲೋಹ ಕಲ್ಲ
ಪ್ರತಿಮೆ ಪೂಜಿಸಲಲ್ಲೇನಿಲ್ಲ, ಪರಿ
ಕ್ಷಿತನೆಂಬರಾಯ ಈ ಮಹಿಮೆಯ ಬಲ್ಲ ೪

ಹಲವು ತೀರ್ಥಗಳಲ್ಲಿ ಸ್ನಾನ ಮಾಡೆ
ಮಲ ಪೋಪುದಲ್ಲದೆ ನಿರ್ಮಲಜ್ಞಾನ
ಫಲಿಸದೆಂದೆದಿಗು ಹೀನ ಬುದ್ಧಿ
ಕಳೆದು ಸೇವಿಸು ಸಾಧುಗಳನನುದಿನ ೫

---

* ನೀರಸನಾಗೊ—ನಿರಾಶನಾಗ್ಯಮರಾಯ (ಪಾಠಾಂತರಗಳು)

† ಕಂಜಕೆ ನಿತ್ಯ (ಪಾ )

ಜ್ಞಾನೇಚ್ಛಾ ಕ್ರಿಯಾಶಕ್ತಿತ್ರಯವ ತಿಳಿ
ದಾನಂದಬಡು ಬಯಸದಿರು ಉಭಯವ
ಸಾನುರಾಗದಿ ಬೇಡುದಯವ ನೀ ಮು
ದ್ದಾನೆಯಂದದಿ ಸಂಚರಿಸು ಬಿಟ್ಟು ಭಯವ ೬

ಭಾವಕ್ರಿಯ ದ್ರವ್ಯಾದ್ವೈತ ನೀ
ನಾವಾಗ ಚಿಂತಿಸೊ ಭೌಮಾದಿಭೂತ
ಜೀವಗಳು ಜಗನ್ನಾಥ ವಿಠಲ
ಗಾವಾಸ ಯೋಗ್ಯವೆಂದರಿಯೊ ಸಂತತ ೭

೨೩ ರಾಗ ಆನಂದಭೈರವಿ ಆದಿತಾಳ

ಶ್ರೀ ವೆಂಕಟಾಚಲ ನಿವಾಸ, ನಿನ್ನ
ಸೇವಾನು ಸೇವಕರ ದಾಸ ಎನಿಸಿ
ಜೀವಿಸುವ ನರಗೆ ಆಯಾಸ ಯಾಕೆ
ಶ್ರೀವರನ ಕೊಡು ಎನಗೆ ಲೇಸ ೧

ಸ್ವಾಮಿ ಕಾಸಾರ ಪ್ರಭು ನಿನ್ನ, ದಿವ್ಯ
ನಾಮ ವದಗಲು ಜಿಹ್ವೆಗೆನ್ನ ದೋಷ
ಸೀಮೆಗಾಣದಲ್ಲಿದ್ದ ತನ್ನ ಸ್ವಾಮಿ
ನೀ ಮರೆಯಲಾಗದೊ ಸುಪ್ರಸನ್ನ ೨

ನೀಚ ಯೋನಿಗಳಲ್ಲಿ ಬಂದೆ, ಇನ್ನು
ನಾಚಿಕಿಲ್ಲವೊ ಎನಗೆ ತಂದೆ, ನೀನೆ
ಮೋಚಕನು ಬಿನ್ನಹವಿದೆಂದೆ ಸವ್ಯ
ಸಾಚಿ ಸಖ ಕೈಪಿಡಿಯೊ ತಂದೆ ೩

ನಾನೊಬ್ಬನೆ ನಿನಗೆ ಭಾರವಾದೆ
ನೇನೊ ಸಂತತ ನಿರ್ವಿಕಾರ, ಎನ್ನ
ಹೀನತ್ವ ನೊಡಲ್ಕಪಾರ, ಚಕ್ರ
ಪಾಣಿ ಮಾಡದಿರೆನ್ನ ದೂರ ೪

ಕಂಡ ಕಂಡವರಿಗಾಲ್ಪರಿದು, ಬೇಡಿ
ಬೆಂಡಾದೆ ನಿನ್ನಂಘ್ರಿ ತೊರೆದು, ದಿಟ
ತೊಂಡ ವತ್ಸಲನೆಂಬ ಬಿರುದು, ಕಾಯೊ
ಪುಂಡರೀಕಾಕ್ಷ ನೀನರಿದು ೫

ಈ ಸಮಯದೊಳಗೆನ್ನ ತಪ್ಪ, ನೋಡಿ
ನೀ ಸಡಿಲ ಬಿಡುವರೇನಪ್ಪ, ನಿನ್ನ
ದಾಸರ್ಪೆಸರಗೊಳಲು ಬಪ್ಪ ದೋಷ
ನಾಶವಾಗೋದು ತಿಮ್ಮಪ್ಪ ೬

ಕಾಮಾದಿಗಳ ಕಾಟದಿಂದ, ನಿನ್ನ
ನಾ ಮರೆದೆ ಸಚ್ಚಿದಾನಂದ, ಎನ್ನ
ಈ ಮಹಾದೋಷಗಳ ವೃಂದ ನೋಡದೆ
ನೀ ಮನ್ನಿಸೆನ್ನ ಮುಕುಂದ ೭

ನೀ ಪಿಡಿದದರ ಸಹಸ್ರಾರ, ಸುಜನ
ಪಾಪಾಟವಿಗೆ ಸುಕುಠಾರ, ಜಗ
ದ್ವ್ಯಾಪಕನೆ ಎನ್ನ ಸಂಸಾರ ಘೋರ
ಕೂಪದಿಂದೆತ್ತಯ್ಯ ಧೀರ ೮

ಸಿಂಧೂರರಾಜ ಪರಿಪಾಲ, ಕೋಟಿ
ಕಂದರ್ಪ ಲಾವಣ್ಯಶೀಲ, ಧರ್ಮ
ಮಂದಾರ ಭೂಜಾಲ ವಾಲ, ಯೋಗಿ
ಸಂದೋಹ ಹೃತ್ಕುಮುದಲೋಲ ೯

ಶಿವನ ವೈರಿಯ ಕೊಂದ ಶಕ್ತ, ಪುಣ್ಯ
ಶ್ರವಣ ಕೀರ್ತನ ನಿನ್ನ ಭಕ್ತ, ಜನರ
ಭವದೊಳಗೆ ಧಣಿಸುವುದು ಯುಕ್ತವೇನೊ
ಭುವನ ಪಾವನ ನಿತ್ಯಮುಕ್ತ ೧೦

ಶ್ರೀಕರ ಶ್ರೀಮದನಂತ, ನಿಖಿಳ
ಲೋಕೈಕನಾಥ ನಿನ್ನಂಥ, ಸಖರ
ನಾ ಕಾಣೆನೆಲ್ಲೂ ಮಹಂತ, ಎನ್ನ
ನೀ ಕಾಯಿ ಕಂಡ್ಯ ಭೂಕಾಂತ ೧೧

ಕರಕರ್ಮಚಿತ್ತತ್ವಗ್ರಸನ, ಕಾಯ
ಕರಣ ಮನಹಂಕಾರಘ್ರಾಣ, ಬುದ್ಧಿ
ಚರಣ ಪಾಯೂಪಸ್ಥನಯನ ಜಾತ
ಉರುಪಾಪ ಕ್ಷಮಿಸೊ ಶ್ರೀಭವನ ೧೨

ಅನಿಮಿತ್ತ ಬಂಧು ನೀನೆನ್ನ, ಬಿಡುವ
ದನುಚಿತವೊ ಲೋಕಪಾವನ್ನ, ಚರಿತ
ಮನವಚನ ಕಾಯದಲಿ ನಿನ್ನ, ಪಾದ
ವನಜ ನಂಬಿದೆ ಸುಪ್ರಸನ್ನ ೧೩

ನೀನಲ್ಲದೆನಗೆ ಗತಿಯಿಲ್ಲ, ಪವ
ಮಾನವಂದಿತ ಕೇಳೊ ಸೊಲ್ಲ, ಎನ್ನ
ಜ್ಞಾನೇಚ್ಛಾ ಕ್ರಿಯಂಗಳೆಲ್ಲ, ನಿನ್ನ
ಧೀನವಲ್ಲವೆ ಲಕ್ಷ್ಮಿನಲ್ಲ ೧೪

ಪ್ರಾಚೀನ ಕರ್ಮಾಂಧಕೂಪದೊಳಗೆ
ಯೋಚಿಸುವ ನರರ ಸಂತಾಪ, ನಿನಗೆ
ಗೋಚರಿಸದೇನೊ ಬಹುರೂಪ, ವೆಂಕ
ಟಾಚಲನಿಲಯ ಪಾಹಿ ಶ್ರೀಪ ೧೫

ಯಾಕೆ ದಯೆ ಬಾರದೆನ್ನಲ್ಲಿ ನರಕ
ನಾಕ ಭೂಲೋಕಂಗಳಲ್ಲಿ, ಚರಿಸಿ
ನಾ ಕಷ್ಟಪಟ್ಟ ಬಗೆ ಬಲ್ಲಿ, ವೀತ
ಶೋಕ ಕೊಡು ಭಕುತಿ ನಿನ್ನಲ್ಲಿ ೧೬

ನಿನ್ನಂಘ್ರಿದರುಶನವ ಕೊಡದೆ, ಹೀಗೆ
ಬನ್ನಬಡಿಸುವರೇನೊ ಬಿಡದೆ, ನಾನು
ಮುನ್ನ ಮಾಡಿದ ಪಾಪ ಕೆಡದೆ, ನೀ ಪ್ರ
ಪನ್ನವತ್ಸಲನೆಂದು ನುಡಿದೆ ೧೭

ತಾಪತ್ರಯಗಳಿಂದ ನೊಂದೆ, ಮಹಾ
ಪಾಪಿಷ್ಠರಲ್ಲನ್ನ ತಿಂದೆ, ಇನ್ನು
ಆಪರೇತೇಶ್ವರನ ಮುಂದೆ, ಪೋಗಿ
ನಾ ಪೇಳಿಕೊಳಲೇನು ತಂದೆ ೧೮

ದೇಹ ಸಂಬಂಧಿಗಳ ಸಹಿತವಾಗಿ
ನಾ ಹೊಂದಿದೆನೊ ಲೋಕ ಮಹಿತ ಎನ್ನ
ಮೋಹಿಪುದು ನಿನಗೇನು ವಿಹಿತ, ಹೃದಯ
ಬಾಹಿರಂತರದಿ ಸನ್ನಿಹಿತ ೧೯

ಪೋಗುತಿದೆ ದಿವಸ ಕಮಲಾಕ್ಷ, ಪರಮ
ಯೋಗೀಶನೆನ್ನ ಅಪರೋಕ್ಷ , ಎನಗೆ
ಹಾಗಾಗುವುದೊ ಸುರಾಧ್ಯಕ್ಷ, ದುರಿತ
ನೀಗು ಕಾಮಿತ ಕಲ್ಪವೃಕ್ಷ ೨೦

ಗತಿ ಯಾರೊ ನಿನ್ನುಳಿದು ದೇವ ರಮಾ
ಪತೆ ನೀನೆ ಭಕ್ತಸಂಜೀವ, ಎನ್ನ
ಸತಿ ಸುತರನನುದಿನದಿ ಕಾವ ಭಾರ
ಸತತ ನಿನ್ನದೊ ಮಹಾನುಭಾವ ೨೧

ದೊಡ್ಡವರ ಕಾಯ್ವುದೇನರಿದು ಪರಮ
ದಡ್ಡರನು ಕಾಯ್ವುದೇ ಬಿರುದು, ಎನ್ನ
ಗುಡ್ಡದಂತಹ ಪಾಪ ತರಿದು, ಕಾಯೊ
ವಡ್ಡಿನಾಯಕ ಸಾರೆಗರೆದು ೨೨

ಜ್ಞಾನಿಗಳು ನೀಚರಲಿ ಕರುಣ ಮಾಡ
ರೇನೊ ಬಿಡುವರೇ *ರಥಚರಣ ಪಾಣಿ
ಭಾನು ಚಂಡಾಲರಲಿ ಕರುಣ ಬಿಡದೆ
ತಾನಿಡನೆ ಪೇಳ್ರಮಾರಮಣ ೨೩

ಅಡಲ್ಯಾತಕೆ ಬಹಳ ಮಾತ, ಪರರ
ಬೇಡಲಾರೆನೊ ಜಗತ್ರಾತ, ಹೀಗೆ
ಮಾಡುವರೆ ಕೇಳೆನ್ನ ಮಾತ, ನೀನೆ
ನೀಡೆನಗೆ ಪುರುಷಾರ್ಥ ದಾತ ೨೪

---

* ಚಕ್ರ

ಬೇಡಲ್ಯಾತಕೆ ಬಹಳ ಮಾತ, ಎನ್ನ
ಕೇಡು ನಿನ್ನದೆಲೆ ಬಲಿಧೌತ, ಪಾದ
ಬೇಡಕೊಂಬೆನೊ ನಾನನಾಥ, ದೂರ
ನೋಡಲಾಗದೊ ಪಾರ್ಥಸೂತ ೨೫

ಸಾರಸದ್ಭಕ್ತಿಯಲಿ ನಿತ್ಯ, ಬಿಡದೆ
ಶಾರದೇಶನ ತುತಿಪ ಭಕ್ತ, ಜನರ
ಪಾರ ಸಂತೈಸುವುದು ಮಿಥ್ಯ–ವಲ್ಲ
ಶ್ರೀರಮಣ ಸಾಕ್ಷಿದಕೆ ಸತ್ಯ ೨೬

ಫಣಿರಾಜ ಭೋಗಿ ಪರಿಯಂಕ ಶಯನ
ಪ್ರಣತಾರ್ತಿ ಹರನೆಂಬ ಅಂಕ ಕೇಳಿ
ಮಣಿದೆ ನಿನ್ನಂಘ್ರಿಗೆ ಶಶಾಂಕ ಭಾಸ
ದಣಿಸಲಾಗದೊ ನಿಷ್ಕಳಂಕ ೨೭

ಕಾರ್ತವೀರ್ಯಾರ್ಜುನನ ಕೊಂದ, ಭವ್ಯ
ಕೀರ್ತಿ ನಿನ್ನಾನಂದ ವೃಂದ, ಸತತ
ಕೀರ್ತಿಸುವ ನರರ ಬಹು ಕುಂದ ನೋಡ
ದಾರ್ತನ್ನ ಪೊರೆಯೊ ಗೋವಿಂದ ೨೮

ದಯದಿಂದ ನೋಡೆನ್ನ ಹರಿಯೆ, ಜಗ
ನ್ಮಯನೆ ಜ್ಞಾನಾನಂದ ಸಿರಿಯೆ, ಮನಾ
ಮಯವ ಪರಿಹರಿಸಿನ್ನು ಪೊರೆಯೆ, ಸರ್ವ
ಭಯದೂರರಿನ್ನೊಬ್ಬರರಿಯೆ ೨೯

ನರಸಿಂಹ ನಿನ್ನೊರತು ಜಗವ, ಕಾಯ್ವ
ಪರದೈವರುಂಟೆಂದು ಬಗೆವ, ನರರ
ಪರಮೇಷ್ಠಿರಾಯನು ನಗುವ, ನಿತ್ಯ
ನಿರಯಾಂಧ ಕೂಪದೊಳು ಹುಗಿವ ೩೦

ದಾಸ ದಾಸರ ದಾಸನೆಂದು, ಬಿಡದೆ
ನೀ ಸಲಹೊ ಎನ್ನನೆಂದೆಂದು, ನಿನ್ನ
ನಾ ಸೇವಿಸುವೆ ಕೃಪಾಸಿಂಧು, ಎಮ್ಮ
'ದಾಸಿಸದಿರನಿಮಿತ್ತ ಬಂಧು ೩೧

ಎಂದೆಂದು ನೀ ಬಡವನಲ್ಲ, ನಿನ್ನ
ಪೊಂದಿದವನ ಬಿಡುವನಲ್ಲ, ಹೃದಯ
ಮಂದಿರದೊಳಗೆ ಬಲ್ಲೆಯಲ್ಲ, ಚಿದಾ
ನಂದ ನೀ ಭಕ್ತವತ್ಸಲ ೩೨

ಕಾಮಿತಪ್ರದನೆಂಬ ಬಿರುದು ಕೇಳಿ
ನಾ ಮುದದಿ ಬಂದೆನೊ ಅರಿದು, ಎನ್ನ
ತಾಮಸ ಮತಿಗಳನ್ನು ತರಿದು, ಮಮ
ಸ್ವಾಮಿ ನೋಡೆನ್ನ ಕಣ್ಣು ತೆರೆದು ೩೩

ಹಿತವರೊಳು ನಿನಗಧಿಕರಾದ, ತ್ರಿದಶ
ತತಿಗಳೊಳು ಕಾಣೆನೊ ಪ್ರಮೋದ, ನೀನೆ
ಗತಿಯೆಂದು ನಂಬಿದೆ ವಿವಾದ-ವ್ಯಾಕೊ
ಪತಿತ ಪಾವನ ತೀರ್ಥಪಾದ ೩೪

ಮಡದಿ ಮಕ್ಕಳು ತಂದೆತಾಯಿ, ಎನ್ನ
ಒಡಹುಟ್ಟಿದವರ ನೀ ಕಾಯಿ, ಲೋಕ
ದೊಡೆಯ ನೀನಲ್ಲದಿನ್ನಾರೈ ಎನ್ನ
ನುಡಿಯ ಲಾಲಿಸು ಶೇಷಶಾಯಿ ೩೫

ಅನುಬಂಧಿ ಜನರಿಂದ ಬಪ್ಪ ಕ್ಲೇಶ
ವನುಭವಿಸಲಾರೆ ಎನ್ನಪ್ಪ ಉದಾ
ಸೀನ ಮಾಡಿ ದಯಮಾಡದಿಪ್ಪ-ರೇನೊ
ಘನಮಹಿಮ ಫಣಿರಾಜತಲ್ಪ ೩೬

ಹದಿನಾಲ್ಕು ಲೋಕಂಗಳಾಳ್ವ, ಬ್ರಹ್ಮ
ಮೊದಲಾದವರು ನಿನ್ನ ಚಲ್ವ, ನಖದ
ತುದಿಬಣ್ಣ ಕಂಡು ಕಡೆ ಬೀಳ್ವ-ದಿಲ್ಲ
ವಿಧಿಸಲಾಪೆನೆ ನಿನ್ನ ಸಲ್ವ ೩೭

ಧನಧಾನ್ಯ ಪಶುಪತ್ನಿಗೇಹ, ಜನನೀ
ಜನಕ ಜಾಮಾತ ಸಖಸ್ನೇಹ, ಅನುಜ
ತನುಜಾಪ್ತವರ್ಗದಿಂದಾಹ ಸೌಖ್ಯ
ನಿನಗರ್ಪಿಸಿದೆ ಎನ್ನದೇಹ ೩೮

ನೀನಿತ್ತ ಸಂಸಾರದೊಳಗೆ, ಸಿಲುಕಿ
ನಾನೊಂದೆ ಕರೆ ನಿನ್ನ ಬಳಿಗೆ, ಚರಣ
ಧ್ಯಾನ ದೊರಕಲು ಭವದಿ ಮುಳುಗೆ, ನಿನ್ನ
ಕಾಣದಿರಲಾರೆನರೆಘಳಿಗೆ ೩೯

ಸಲುಗೆ ಬಿನ್ನಪವ ನೀ ಕೇಳೊ ಎನ್ನ
ಬಲು ದುರುಳತನವ ನೀ ತಾಳೊ ನೀನೆ
ನೆಲೆಯಲ್ಲದೆನಗಾರು ಪೇಳೊ, ಎನ್ನ
ಕುಲದೈವ ಬಹುಕಾಲ ಬಾಳೊ ೪೦

ಸಾಂದೀಪನಂದನನ ತಂದ, ನಂದ
ನಂದನನೆ ಎನ್ನ ಭವವೃಂದ ಕಳೆದು
ಎಂದೆಂದು ಕುಂದದಾನಂದವೀಯೊ
ಇಂದಿರಾರಮಣ ಗೋವಿಂದ ೪೧

ವಿಶ್ವತೈಜಸಪ್ರಾಜ್ಞ ತುರೀಯ, ಎನ್ನ
ದುಃಸ್ವಭಾವವ ನೋಡಿ ಪೊರೆಯದಿಹರೆ
ನಿಸ್ಪೃಹ ನಿನ್ನಂಘ್ರಿ ಮರೆಯ ಹೊಕ್ಕೆ
ಅಸ್ವತಂತ್ರನ ಕಾಯೊ ಪರಿಯ ೪೨

ಇಹಪರದಿ ಸೌಖ್ಯಪ್ರದಾತ, ನೀನೆ
ಅಹುದೊ ಲೋಕೈಕ ವಿಖ್ಯಾತ, ಮಹಾ
ಮಹಿಮ ಗುಣಕರ್ಮ ಸಂಜಾತ, ದೋಷ
ದಹಿಸು ಸಂಸಾರಾಬ್ಧಿಪೋತ ೪೩

ಲೋಕಬಾಂಧವನೆಂಬ ಖ್ಯಾತಿಯನ್ನು
ನಾ ಕೇಳಿದೆನೊ ಖಳಾರಾತಿ, ಮನ
ಶ್ಶೋಕ ಮೋಹಾಜ್ಞಾನ ಭೀತಿ ಬಿಡಿಸು
ಶ್ರೀಕರಾರ್ಚಿತ ಸ್ವಯಂಜ್ಯೋತಿ ೪೪

ಒಂದು ಗೇಣೊಡಲನ್ನಕಾಗಿ, ಅಲ್ಪ
ಮಂದಭಾಗ್ಯರ ಮನೆಗೆ ಪೋಗಿ, ದೈನ್ಯ
ದಿಂದ ಸತ್ಕರ್ಮಗಳ ನೀಗಿ, ಕಂದಿ
ಕುಂದಿದೆನೊ ಸಲಹೊ ಲೇಸಾಗಿ ೪೫

ಪಾತಕರೊಳಧಿಕ ನಾನಯ್ಯ, ಮಹ
ತ್ಪಾತಕವ ಕಳೆವ ಮಹಾರಾಯ, ನಿನ್ನ
ದೂತ ನಾನಲ್ಲವೆ ಜೀಯ, ಜಗ
ನ್ನಾಥ ವಿಠ್ಠಲ ಪಿಡಿಯೊ ಕೈಯ ೪೬

೨೫ ರಾಗ ಮಧ್ಯಮಾವತಿ ಆದಿತಾಳ

ದಯಮಾಡೆ ದಯಮಾಡೆ ತಾಯೆ ವಾಗ್ದೇವಿ ಪ
ದಯದಿಂದ ನೀನೆನ್ನ ನೋಡೆ ವಾಗ್ದೇವಿ ಅ.
ಹಿತದಿ ಸನ್ಮತಿಯ ಶ್ರೀಮತಿದೇವಿ ನೀಡೆ
ವ್ರತತಿಜನೇತ್ರೇ ಭಾರತಿ ನೀ ದಯಮಾಡೆ ೧
ಸುಮುಖೀ ತ್ವಚ್ಚರಣಾಬ್ಜ ದ್ರುಮಛಾಯಾಶ್ರಿತರ
ಸಮತಿಗಳೊಳಗಿಟ್ಟು ಮಮತೆಯಿಂ ಸಲಹೆ ೨
ಜಗನ್ನಾಥವಿಠಲನಂಘ್ರಿಗಳ ಸೇವೆಯೊಳು
ಸುಗುಣೆ ಸನ್ಮತಿಗೊಟ್ಟು ಬೇಗೆನ್ನ ಸಲಹೆ ೩

೨೬ ರಾಗ ಧನ್ಯಾಸಿ ಆದಿತಾಳ

ರಾಘವೇಂದ್ರಯತಿ ಸಾರ್ವಭೌಮ ದುರಿ
ತೌಘದೂರ ತೇ ನಮೋ ನಮೋ
ಮಾಗಧರಿಪುಮತ ಸಾಗರ ಮೀನ ಮ
ಹಾಘ ವಿನಾಶನ ನಮೋ ನಮೋ ಪ
ಶ್ಲಾಘಿತ ಗುಣಗಣ ಸೂರಿ ಪ್ರಸಂಗ ಸ
ದಾಗಮಜ್ಞ ತೇ ನಮೋ ನಮೋ
ಮೇಘಶ್ಯಾಮಲ ರಾಮಾರಾಧಕ
ಮೋಘ ಬೋಧ ತೇ ನಮೋ ನಮೋ ಅ
ತುಂಗಭದ್ರ ಸುತರಂಗಿಣಿ ತೀರಗ
ಮಂಗಳ ಚರಿತ ಶುಭಾಂಗ ನಮೋ
ಇಂಗಿತಜ್ಞ ಕಾಳಿಂಗಮಥನ ಯದು
ಪುಂಗವ ಹೃದಯ ಸುಸಂಗ ನಮೋ

ಸಂಗಿರಚಿಹ್ನಿತ ಶೃಂಗಾರಾನನ
ತಿಂಗಳ ಕರುಣಾಪಾಂಗ ನಮೋ
ಗಾಂಗೇಯ ಸಮಭಾಂಗ ಕುಮತ ಮಾ
ತಂಗ ಸಂಘ ಶಿತಪಿಂಗ ನಮೋ ೧

ಕೋವಿದ ಮಸ್ತಕ ಶೋಭಿತ ಮಣಿ ಸಂ
ಭಾವಿತ ಮಹಿಮ–ಪಾಲಯಮಾಂ
ಸೇವಾವರ ಸರ್ವಾರ್ಥಪ್ರದ ಬೃಂ
ದಾವನ ಮಂದಿರ ಪಾಲಯಮಾಂ
ಭಾವಜ ಮಾರ್ಗಣ ಭುಜಗ ವಿನಾಯಕ
ಭಾವಜ್ಞಪ್ರಿಯ ಪಾಲಯಮಾಂ
ಕೇವಲ ನತಜನ ಪಾವನರೂಪ ಸ
ದಾ ವಿನೋದಿ ಹೇ ಪಾಲಯಮಾಂ ೨

ಶ್ರೀ ಸುಧೀಂದ್ರ ಕರಜಾತ ನಮೋ ನಮೋ
ಭೂಸುರ ವಿನುತ ವಿಖ್ಯಾತ ನಮೋ
ದೇಶಿಕ ವರ ಸಂಸೇವ್ಯ ನಮೋ ನಮೋ
ದೋಷ ವಿವರ್ಜಿತ ಕಾವ್ಯ ನಮೋ
ಕ್ಲೇಶಿತ ಜನ ಪರಿಪಾಲ ನಮೋ ನಮೋ
ಭೂಷಿತ ಕರುಣಾಶೀಲ ನಮೋ
ವ್ಯಾಸರಾಮ ಪದಭಕ್ತ ನಮೋ ನಮೋ
ಶಾಶ್ವತ ಧರ್ಮಾಸಕ್ತ ನಮೋ ೩

ಸನ್ನುತ ಮಹಿಮ ಜಗನ್ನಾಥ ವಿಠ್ಠಲ
ಸಹ್ನಿತ ಮಾನಸ ಜಯ ಜಯ ಭೋ
ಚಿಹ್ನಿತ ದಂಡ ಕಮಂಡಲ ಪುಂಡ್ರ ಪ್ರ
ಪನ್ನ ಭಯಾಪಹ ಜಯ ಜಯ ಭೋ
ಮಾನ್ಯ ಮಹಾತ್ಮ ಪ್ರಸನ್ನವದನ ಕಾ
ರುಣ್ಯ ಪಯೋನಿಧಿ ಜಯ ಜಯ ಭೋ
ಧನ್ಯ ಕ್ಷಮ ಸಂಪನ್ನ ಧರಾಮರ ಶ
ರಣ್ಯ ಸದಾರ್ಚಿತ ಜಯ ಜಯ ಭೋ ೪

೨೭ ರಾಗ ಶಂಕರಾಭರಣ ಅಟತಾಳ

ಮಾರುತಿ ಮಜ್ಜನಕ ಮಾರುತಿ ಪ.

ಮಾರುತಿ ಕರುಣಿಸು ಜ್ಞಾನ, ಎನ್ನ
ಸೇರಿದ ಸತತ ಅಜ್ಞಾನ, ಆಹ
ದೂರವೋಡಿಸಿ ಹರಿಯಾರಾಧನೆಯಿತ್ತು
ತೋರಿಸು ಪಥ ಸರ್ವಾಧಾರ ಉದ್ಧಾರನೆ ಅ.

ದ್ವಿತಿಯ ಯುಗದೊಳವತರಿಸಿ, ಸೀತಾ
ಪತಿಯ ಪಾದಕೆ ನಮಸ್ಕರಿಸಿ, ರವಿ
ಸುತಗೆ ಒಲಿದು ಉದ್ಧರಿಸಿ, ಅಬ್ಧಿ
ಅತಿವೇಗದಿಂದ ಉತ್ತರಿಸಿ, ಆಹ
ಕ್ಷಿತಿಜ ದೇವಿಯಳನು ತುತಿಸಿ ಮುದ್ರಿಕೆಯಿತ್ತು
ದಿತಿಜರ ಸದೆದ ಭಾರತಿಯ ರಮಣನೆ ೧

ಕುರುಕುಲದೊಳಗೆ ಉದ್ಭವಿಸಿ, ಬಲು
ಗರಳ ಪದಾರ್ಥವ ಸಲಿಸಿ, ಚೆಲ್ವ
ತರುಣಿ ರೂಪವನೆ ಶೃಂಗರಿಸಿ, ನಿಶಾ
ಚರ ಕೀಚಕನ ಸಂಹರಿಸಿ, ಆಹಾ
ಜರೆಯ ಸುತನ ಸೀಳಿ ಧರಣಿಪಾಲಕರನ್ನು
ಸೆರೆಯ ಬಿಡಿಸಿ ಕಾಯ್ದ ಪರಮ ಸಮರ್ಥನೆ ೨

ಭೂತಲದೊಳಗೆ ಯತಿಯ ಚಲುವ
ರೂಪ ತೋರಿದ ಶುಭ ಕಾಯ (?) ಮಾಯಾ
ಮತವನಳಿದ ಮುನಿರಾಯ, ಕಾಯ
ಜಾತ ಜನಕಗತಿ ಪ್ರಿಯ, ಆಹಾ
ಭೂತನಾಥನೆ *ಪರಮಾತುಮನೆಂಬಂಥ
ಪಾತಕರರಿ ಜಗನ್ನಾಥ ವಿಠ್ಠಲ ದೂತ ೩

---

* ಪರಮೋತ್ತಮನೆಂಬಂಥ (ಪಾ )

೨೮ ರಾಗ ಕಾಂಬೋದಿ ಝಂಪೆತಾಳ

ಬಂಧನವ ಪರಿಹರಿಸು ಭವವಿದೂರ
ಕಂದರ್ಪ ಜನಕ ಕಾರುಣ್ಯದಲಿ ಭಕ್ತಜನ ಪ
ದುಷ್ಟ ಜನರುಗಳು ಬಲು ಕಷ್ಟಪಡಿಸುವುದು ನಿನ
ಗೆಷ್ಟು ಉಸುರಲಿ ಕೇಳೊ ಜಿಷ್ಣು ಸಖನೆ
ವೃಷ್ಣೀಶ ನೀ ದಯಾದೃಷ್ಟಿಯಿಂದಲಿ ನೋಡಿ
ಹೃಷ್ಟನ್ನ ಮಾಡು ಸಂತುಷ್ಟಿಯಿಂದಲಿ ಬೇಗ ೧
ಹಯಮುಖನೆ ನಿನ್ನವರ ದಯದಿಂದ ಸಲಹುವುದು
ವಯನಗಮ್ಯನೆ ಲೋಕತ್ರಯವನಿರುತ
ಪ್ರಿಯನೆಂದು ನಿನಗೆ ನಾ ದೈನ್ಯದಲಿ ಮೊರೆಯಿಡುವೆ
ದಯಮಾಡುವುದು ನೀನು ಜಯಪ್ರದಾಯಕನಾಗಿ ೨
ವೀತಶೋಕನೆ ಎನ್ನ ಮಾತ ಲಾಲಿಸಿ ನಿನ್ನ
ದೂತರನು ಸಲಹುವುದು ಪ್ರೀತಿಯಿಂದ
ದಾತ ಶ್ರೀಗುರು ಜಗನ್ನಾಥ ವಿಠ್ಠಲ ನಿನ್ನ
ನಾ ತುತಿಸಬಲ್ಲೆನೆ ವಿಧಾತ ಮುಖವಂದ್ಯ ೩

೨೯ ರಾಗ ನಾದನಾಮಕ್ರಿಯ ತಾಳ

ದಾಸರಿಗುಂಟೆ ಭಯಶೋಕ, ಹರಿ
ದಾಸರಿಗುಂಟೆ ಭಯಶೋಕ ಪ
ವಾಸುದೇವನ ಸದಾ ಸ್ಮರಿಸುವ, ಹರಿ
ದಾಸರಿಗುಂಟೆ ಭಯಶೋಕ ಅ
ಕಾಮಧೇನು ವರ ಕಲ್ಪವೃಕ್ಷ ಚಿಂ
ತಾಮಣಿ ಕೈಸೇರಿದಕಿಂತ
ನಾಮತ್ರಯದಿಂದಪ್ಪುದು ಸುಖವು, ಸು
ಧಾಮನೆ ಸಾಕ್ಷಿದಕೆಂಬ ಹರಿ ೧
ರಾಮಚಂದ್ರ ಶಬರಿ ತಿಂದೆಂಜಲ
ಜಾಮಿಳ ಮಾಡ್ದ ಕುಕರ್ಮಗಳ
ಧೂಮಕೇತು ತಾ ಭುಂಜಿಸುವಂದದಿ
ಮೇಧ್ಯಾಮೇಧ್ಯ ಕೈಗೊಂಬನೆಂಬ ಹರಿ ೨

ನೇಮ ಮಂತ್ರ ಜಪ ದೇವತಾರ್ಚನ ಸ
ಕಾಮುಕವಾಗಲು ತ್ಯಜಿಸುತಲಿ
ಧೀಮಂತರಾಗತಿ ಪ್ರಿಯವಾಗಲು ಬಹು
ತಾಮಸ ಕರ್ಮವ ಮಾಳ್ಪುದೆಂಬ ಹರಿ ೩

ಏನು ಮಾಡಿದವರಾಧವ ಕ್ಷಮಿಸುವ
ಏನು ಕೊಟ್ಟುದನು ಕೈಗೊಂಬ
ಏನು ಬೇಡಿದಿಷ್ಟಾರ್ಥವ ಕೊಡುವ, ದ
ಯಾನಿಧಿ ಅನುಪಮನೆಂಬ ಹರಿ ೪

ಪ್ರಹ್ಲಾದವರದ ಪ್ರಕಟನಾಗದಲೆ
ಎಲ್ಲರೊಳಿಪ್ಪನು ಪ್ರತಿದಿನದಿ
ಬಲ್ಲಿದವರಿಗೆ ಬಲ್ಲಿದ ಜಗನ್ನಾಥ
ವಿಠ್ಠಲ ವಿಶ್ವವ್ಯಾಪ್ತನೆಂಬ ಹರಿ ೫

೩೦ ರಾಗ ಹಿಂದೂಸ್ಥಾನಿ ಕಾಪಿ ಅಟತಾಳ

ಇಂದು ನೋಡಿದೆನಂದತೀರ್ಥ ಮು
ನೀಂದ್ರವಂದಿತ ಚರಣನ ಪ
ವಂದಿಸುವ ಭಕುತರಿಗೆ ನಿತ್ಯಾ
ನಂದ ಫಲದ ಮುಕುಂದನ ಅ

ತಮನ ವೈರಿಯ ಮಂದರಾದ್ರಿಯ
ಕಮಠ ರೂಪದಿ ಪೆತ್ತನ
ಕಮಲಸಂಭವ ಭವ ಹಿರಣ್ಯಕ
ದಮನ ವಾಮನಮೂರ್ತಿಯ ೧

ಭೂಮಿಪರ ಸಂಹರಿಸಿ ದಶರಥ
ರಾಮ ನಾಮದಿ ಮೆರೆದನ
ಸೋಮಪಾಧಿಪ ಸುತಗೊಲಿದು ಸಂ
ಗ್ರಾಮದಲಿ ರಕ್ಷಿಸಿದನ ೨

ಬುದ್ಧರೂಪದಿ ತ್ರಿಪುರಸತಿಯರ
ಬುದ್ಧಿ ಭೇದವ ಮಾಡ್ದನ
ಯುದ್ಧದಲಿ ಕಲಿಮುಖ್ಯ ಯವನರ
ಗೆದ್ದ ಗಾನವಿಲೋಲನ ೩

ದೇವಕೀ ವಸುದೇವ ತನಯನ
ದೇವಗಣ ಸಂಸೇವ್ಯನ
ಈ ವಸುಂಧರೆಯೊಳಗೆ ಶೋಭಿಪ
ಮಧ್ವ ಸರೋವರ ನಿಕಟನ ೪

ಪೋತವೇಷನ ವೀತಶೋಕನ
ಪೂತನಾದಿ ವಿಘಾತನ
ಮಾತರಿಶ್ವಪ್ರಿಯ ಗುರು ಜಗ
ನ್ನಾಥವಿಠ್ಠಲರೇಯನ ೫

೩೧ ರಾಗ ಪೂರ್ವಿ ಆದಿತಾಳ

ದಯವಾಗೊ ದಯವಾಗೊ ಪ
ಹಯಮುಖ ಭಯಕೃದ್ಭಯನಾಶನ ನೀ ಅ.

ಗೋ ಭೂಸುರರಿಗೆ ಭೂ ಭುಜರ ಭಯ, ಪ
ರಾಭವ ಗೈದ ಶ್ರೀ ಭೂರಮಣನೆ ೧

ಶತ್ರುತಾಪಕ ಜಗತ್ರಯ ವ್ಯಾಪ್ತ ಪ
ವಿತ್ರ ಪಾಣಿ ಸರ್ವತ್ರದಿ ಎಮಗೆ ೨

ಖರಮುರ ನರಕಾದ್ಯರ ಸಂಹರಿಸಿದ
ಪರಮಪುರುಷ ಗಹ್ವರಹರ ನರಹರಿ ೩

ಎಷ್ಟೆಂದುಸುರಲಿ ದುಷ್ಟ ಜನರು ಬಲು
ಕಷ್ಟಪಡಿಪ ಬಗೆ ಜಿಷ್ಣುಸಾರಥಿಯೆ ೪

ಅಪ್ರಮೇಯನೀ ಕ್ಷಿಪ್ರದಿ ಒಲಿದು ಜ
ಯ ಪ್ರದನಾಗೊ ಸುಪ್ರದವರದ ೫

ದ್ರೌಪದಿ ಮೊರೆ ಕೇಳ್ದಾ ಪದ್ಮಾಂಭವ
ನೇ ಪೊರೆಯೆಮ್ಮ ಭೂಪತಿ ನಿರುತ ೬
ಯಾತಕೆ ಎಮ್ಮನು ಭೀತಿಗೊಳಿಪೆ ಪುರು
ಹೂತವಿನುತ ಜಗನ್ನಾಥ ವಿಠ್ಠಲ ೭

೩೨ ರಾಗ ನಾದನಾಮಕ್ರಿಯ ಆದಿತಾಳ

ಕಂಡೆ ಪಂಢರಿರಾಯನ ತನ್ನನು
ಕೊಂಡಾಡುವರ ಪ್ರಿಯನ-ವಿಠ್ಠಲನ ಪ.
ಸಮಚರಣ ಭುಜನ, ನಿಗಮಾ
ಗಮತತಿಗೆ ಗೋಚರನ
ಅಮಿತ ಪರಾಕ್ರಮನ ರುಗ್ಮಿಣಿ
ರಮಣ ಸುಲಕ್ಷಣನ ವಿಠ್ಠಲನ ೧
ಕಾಮಿತಾರ್ಥಪ್ರದನ, ಸಿರಿ ತುಲಸಿ
ದಾಮ ವಿಭೂಷಣನ
ಸಾಮಜಪತಿಪಾಲನ ತ್ರೈಜಗ
ತ್ಸ್ವಾಮಿ ಚಿತ್ಸುಖಮಯನ ವಿಠ್ಠಲನ ೨
ಗೋಕುಲ ಪೋಷಕನ, ಮುನಿ ಪುಂಡ
ರೀಕಗೊಲಿದು ಬಂದನ
ಲೋಕ ವಿಲಕ್ಷಣನ ಶರಣರ
ಶೋಕ ವಿನಾಶನನ ವಿಠ್ಠಲನ ೩
ಚಂದ್ರಭಾಗವಾಸನ, ವಿಧಿವಿಹ
ಗೇಂದ್ರಮುಖಾರ್ಚಿತನ
ಇಂದ್ರನೀಲ ನಿಭನ ಗುಣಗಣ
ಸಾಂದ್ರ ಸುರೋತ್ತಮನ ವಿಠ್ಠಲನ ೪
ಶ್ವೇತವಾಹನ ಸಖನ, ಸತಿಸೆರೆಕಾರಿ
ಜಾತವ ತಂದಿತ್ತನ
ವಿತಶೋಕಭಯನ ಶ್ರೀ ಜಗ
ನ್ನಾಥ ವಿಠ್ಠಲರೇಯನ ೫

೩೩ ರಾಗ ಕಾಂಬೋದಿ ಝಂಪೆತಾಳ

ಸರ್ವಾಂತರ್ಯಾಮಿ ಸಲಹೊ ಎನ್ನ ಪ
ದುರ್ವಾರ್ತೆ ಕೇಳಿ ಮನಬಿಡದೆ ಚಿಂತಿಸುತಿದೆ ಅ

ಜೀವರಿಗೆ ಗುಣಕಾಲ ಕರ್ಮ ಪ್ರಕೃತಿಗಳ ಸ್ವ
ಭಾವಗಳನನುಸರಿಸಿ ಸುಖ ದುಃಖವ
ಈವ ಧೊರೆ ನೀನಲ್ಲದಿನ್ನುಂಟೆ ಜಗಕೆ ಮ
ತ್ತಾವನ್ಯೆ ಭಕ್ತರನು ಪಾಲಿಸುವ ದಾತ ೧

ಸತ್ಯಸಂಕಲ್ಪ ನೀನೆಂಬುದೆಂದಿಗು ಸತ್ಯ
ಭೃತ್ಯವತ್ಸಲನೆಂಬೊ ಬಿರುದಿಲ್ಲವೆ
ದತ್ತಾತ್ರೇಯ ನಿನ್ನ ಸ್ಮರಣೆಮಾತ್ರದಿ, ಅಪ
ಮೃತ್ಯು ಪರಿಹರವಹುದು ಸಂದೇಹವಿಲ್ಲಿದಕೆ ೨

ಶ್ರೀಪತೇ ಎನ್ನ ವಿಜ್ಞಾಪನೆಯ ಕೈಕೊಂಡು
ಪಾಪಿ ಜನರಿಂದ ಬಂದಾಪತ್ತನು
ನೀ ಪರಿಹರಿಸೈಯ ದ್ರೌಪದೀವರದ ಕರು
ಣಾಪಯೋನಿಧಿ ಜಗನ್ನಾಥ ವಿಠ್ಠಲಸ್ವಾಮಿ ೩

೩೪ ರಾಗ ಬೇಹಾಗ್ ಆದಿತಾಳ

ಕಾಯೊ ಕಾಯೊ ಕಾಯೊ ಕಮಲಾಯತಾಕ್ಷ ಪ

ಕಾಯೊ ಕಾಯೊ ಕಮಲಾಯತಾಕ್ಷ ಭವ
ತೋಯಧಿಯೊಳು ಬಿದ್ದು ಬಾಯಬಿಡುವೆ, ಬೇಗದಿ ಬಂದು ಅ

ಅದ್ವೈತತತ್ತ್ವಯ ದಧ್ವಪ್ರವರ್ತಕ
ಸದ್ವೈಷ್ಣವ ಪಾದದ್ವಯ ತೋರಿ ೧

ಸಂಜೆಯ ತೋರಿ ಧನಂಜಯ ನುಳುಹಿದೆ
ಮಂಜುಳ ಚರಿತ ನಿರಂಜನ ಮೂರ್ತೆ ೨

ಕುಕ್ಷಿಯೊಳಂದು ಪರೀಕ್ಷಿದ್ರಾಜನ
ರಕ್ಷಿಸಿದಂತೆ ಪ್ರತಿಪ್ರತಿ ಕ್ಷಣದಿ ೩

ಅಧಮನು ನಾನಹುದುದಧಿಶಯನ (ಮಥನ ಪಾ.) ಸ್ವ
ಮುದವನಿಮತ ಪೊಂದಿದರಣುಗನ ನೀ ೪

ನೀ ದಯವಮಾಡದಡೀ ದಿವಿಜರು ವಲಿ
ದಾದರಿಸುವರೆ ವೃಕೋದರ ವಂದ್ಯ ೫

ಸತ್ಯಾತ್ಮಕ ತವಭೃತ್ಯಗೆ ಬಂದಪ
ಮೃತ್ಯು ಕಳೆದು ಸಂಪತ್ತು ಪಾಲಿಸಿ ೬

ಎಲ್ಲರೊಳಿಹ ಕೈವಲ್ಯದರಸೆ ನೀ
ಬಲ್ಲಿದನೆಂಬುದ ಬಲ್ಲೆ ಬಹುಬಗೆ ೭

ಕ್ಷುದ್ರಭೂಮಿಪರುಪದ್ರವ ಕಳೆದು ಸು
ಭದ್ರವೀಯೊ ಕಲ್ಪದ್ರುಮದಂತೆ ೮

ವೀತಭಯ ಜಗನ್ನಾಥ ವಿಠಲ ಸು
ಖೇತರ ಕಳೆದು ಮಹಾತಿಶಯದಲಿ ೯

೩೫ ರಾಗ (ಕಾನಡ) ಮಧ್ಯಮಾವತಿ ಅಟತಾಳ

ರಕ್ಷಿಸೊ ಶ್ರೀಶ ಶ್ರೀನಿವಾಸ ಪ
ರಕ್ಷಿಸೆನ್ನ ಪದ್ಮಾಕ್ಷ ತ್ರಿಜಗ
ಧ್ಯಕ್ಷ ಖಳಜನ ಶಿಕ್ಷ ಪಾಂಡವ
ಪಕ್ಷ ಕರುಣಕಟಾಕ್ಷದಲಿ ನೀ
ನೀಕ್ಷಿಸುತ ಪೊರೆ ಪಕ್ಷಿವಾಹನ ಅ.

ಕೊಂಚಮತಿಯಲಿ ಕುಜನರ ಸೇರಿ
ಸಂಚರಿಸುತಲಿ ದೀನನಾದೆ
ಪಂಚಶರ ಸ್ಮರ ವಂಚಿಸುತ ಬಿಡೆ
ಚಂಚಲಾಕ್ಷೇರ ಸಂಚು ನೋಟದ
ಮಿಂಚಿಗೆನ್ನ ಮನ ಚಂಚಲವು ಪುಟ್ಟಿ
*ವಂಚಿಸೇ ಯಮ*ನಂಚಿಗೆ ಸಿಲುಕಿದೆ ೧

* ವಂಚಿಸೆ ಯುನಂಚಿಕೆಗೆ ಸಿಲುಕಿದೆ (ಪಾ )  ※ ಅಂಚಿ–ಕತ್ತಿ

ಕಿಟ್ಟಗಟ್ಟಿದ ಕಬ್ಬಿಣದಂತೆ
ಕೆಟ್ಟ ಕಿಲ್ಬಿಷದ ಕೂಪದಿ ಬಿದ್ದು
ಧಿಟ್ಟ ನಿನ್ನಯ ಗುಟ್ಟು ತಿಳಿಯದೆ
ಹೊಟ್ಟೆಗೋಸುಗ ಕೆಟ್ಟ ಕುಜನರ
ಘಟ್ಟನೆ ಕಾಲ್ಗಟ್ಟಿ ಬಹುಶ್ರಮ
ಪಟ್ಟು ನಾ ಕಂಗೆಟ್ಟೆ ಪ್ರತಿದಿನ ೨
ಶ್ರೀ ಕಮಲೇಶ ಹೃತ್ಪದ್ಮ ದಿ
ನೇಶ ಪ್ರಕಾಶ ಬೇಗನೆ ಬಂದು
ಯಾಕೆ ತಡವೆನ್ನ ವಾಕು ಲಾಲಿಸಿ
ಜೋಕೆಯಿಂದಲಿ ನೀ ಕರವ ಪಿಡಿ
ದಾಕುಚೇಲನ ಸಾಕಿದ ಪರಿ
ಶ್ರೀಕರ ಜಗನ್ನಾಥ ವಿಠ್ಠಲ ೩

೩೬ ರಾಗ ನಾಟಿ ಝಂಪೆತಾಳ

ಶರಣು ಮೃತ್ಯುಂಜಯ ಶರಣು ಸಜ್ಜನರ ಭಯ ಪ
ಪರಿಹರಿಸು ಕರುಣಾಳು ಬಿನ್ನಪವ ಕೇಳು ಅ
ವಾಸವಾದ್ಯಮರುನುತ ವನಜಸಂಭವನ ಸುತ
ನೀ ಸಲಹೊ ಕೈಲಾಸವಾಸ ಈಶ
ಕ್ಲೇಶ ಮೋದಾದಿಸಮ ತಿಳಿಸು ಅಶ್ವತ್ಥಾಮ
ಶ್ರೀಶುಕ ದೂರ್ವಾಸ ಸ್ಫಟಿಕ ಸಮಭಾಸ ೧
ವೈಕಾರಿಕಾದಿ ತ್ರೈರೂಪ ನಿನ್ನಯ ಕೋಪ
ಶೋಕ ಕೊಡುವುದು ದೈತ್ಯಜನಕೆ ನಿತ್ಯ
ಲೌಕಿಕಗಳೆಲ್ಲ ವೈದಿಕವಾಗಲೆನಗೆ ಮೈ
ನಾಕಿ ಹೃತ್ಕುಮುಂದೇದು ಭಕ್ತಜನ ಬಂಧು ೨
ಪವಮಾನ ತನಯ ನಿನ್ನವರಲ್ಲಿ ಕೊಡು ವಿನಯ
ದಿವಸ ಸವನಗಳಲ್ಲಿ ಎನ್ನಿರವ ಬಲ್ಲಿ
ಪವನ ದ್ವಿತೀಯರೂಪ ಸತತ ಎನ್ನಯ ಪಾಪ
ಅವಲೋಕಿಸದಲೆನ್ನ ಸಲಹೊ ಸುರಮಾನ್ಯ ೩

ಶೇಷನಂದನ ಶೇಷಭೂಷನೆ ನಿಶ್ಶೇಷ
ದೋಷರಹಿತನ ತೋರು ಕರುಣವನು ಬೀರು
ಶ್ರೀ ಷಣ್ಮುಖನ ತಂದೆ ಸತತ ನೀ ಗತಿಯೆಂದೆ
ಶೋಷಿಸು ಭವಾಮಯವ ಬೇಡುವೆನು ದಯವ ೪

ಗರ್ಗಮುನಿ ಕರಪದುಮ ಪೂಜ್ಯ ಚರಣಾಬ್ಜ ಮಮ
ದುರ್ಗುಣಗಳೆಣಿಸದಲೆ ಜಗದಮೇಲೆ
ನಿರ್ಗತಾಶನ ಜಗನ್ನಾಥ ವಿಠ್ಠಲನ ಸ
ನ್ಮಾರ್ಗವನೆ ತೋರು ಈ ದೇಹ ನಿನ್ನ ತೇರು ೫

೩೭ ರಾಗ ಕಾಪಿ ಏಕತಾಳ

ವ್ಯರ್ಥ ಕಳೆವರೇನೊ ಕಾಲವ, ಹೇ ಪಾಪಿ ಮನುಜ ಪ
ಪಾರ್ಥಸಖನ ವಾರ್ತೆಗಳನು
ಕೀರ್ತಿಸದ, ಕುವಾರ್ತೆಯಿಂದ ಅ

ನೇಸರನುದಿಸದ ಮುನ್ನ
ಶ್ರೀಶನ ಗುಣಕರ್ಮ ನಾಮ
ಆಸೆಯಿಂದ ಸ್ಮರಿಸದಲೆ
ಗ್ರಾಸದ್ವರಟೆಗಳನು ಹರಟೆ ೧

ಪವನ ಮತವನವಲಂಬಿಸಿದ
ಸ್ಥವಿರ ಕವಿಗಳಿಂದ ಕಥಾ
ಶ್ರವಣ ರಸವ ಕಿವಿಯು ದಣಿಯೆ
ಸವಿದು ಸುಖಿಸಿ ಪ್ರವರನಾಗದೆ ೨

ಶ್ರೀಪಯೋಜ ಪೀರ ಶೈಲ
ಚಾಪ ಗೋಪಮುಖರು ದ್ವಿತೀಯ
ರೂಪರೆಂದು ಹರಿಗೆ ನೀ ಪ
ದೇ ಪದೇ ನಮಸ್ಕರಿಸದೆ ೩

ಕ್ಷಿತಿ ಜಲಾಗ್ನಿ ವಾಯು ಖಂ
ಅತುಳ ಬುದ್ಧಿಯಹಂಕಾರಗಳು
ಕೃತಿರಮಣನ ವಿಮಲ ಭಿನ್ನ
ಪ್ರತಿಮೆಯೆಂದು ಭಜಿಸದಿನ್ನು ೪

ಪುತ್ರ ಜನಕ ಜನನಿ ಪತ್ನಿ
ಕರ್ತೃ ಜಗನ್ನಾಥ ವಿರಲ
ಪಾತ್ರ ಕರ್ಮಕರಣ ಕ್ರಿಯಾ
ಭೋಕ್ತೃ ಮಿತ್ರನೆಂದರಿಯದೆ ೫

೩೮ ರಾಗ ಕಾಂಬೋದಿ ಝಂಪೆತಾಳ

ಗತಿಯಾವುದೆನಗೆ ಶ್ರೀಪತಿಯೆ ಪೇಳೊ ಪ
ಮತಿಗೆಟ್ಟು ಪ್ರತಿದಿನದಿ ಸತಿಯ ಬಯಸುವೆನೊ ಅ

ಮರುಳು ಬುದ್ಧಿಗಳಿಂದ ಕರಸೂಚನೆಯ ಮಾಡಿ
ತರಳೆಯರ ತಕ್ಕೈಸಿ ಸರಸವಾಡಿ
ಇರಳು ಹಗಲು ಹೀಗೆ ದುರುಳತನದಲಿ ತಿರುಗಿ
ಧರೆಯೊಳಗೆ ನಾನೊಬ್ಬ ಹರಿದಾಸನೆನಿಸಿದೆನು ೧

ನಾಚಿಕೆಯ ತೊರೆದು ಬಲು ನೀಚರಲ್ಲಿಗೆ ಪೋಗಿ
ಯಾಚಿಸುವೆ ಸುವಿಚಾರಹೀನನಾಗಿ
ಆ ಚತುರ್ದಶವರುಷದಾರಭ್ಯ ಈ ವಿಧದಿ
• ಆಚರಿಪೆನೈ ಸವ್ಯಸಾಚಿಸಖ ಕೃಷ್ಣ ೨

ನಾನು ನನ್ನದು ಎಂಬ ಹೀನ ಬುದ್ಧಿಗಳಿಂದ
ಜ್ಞಾನಶೂನ್ಯನು ಆದೆ ದೀನಬಂಧು
ಸಾನುರಾಗದಿ ಒಲಿದು ನಾನಾ ಪ್ರಕಾರದಲಿ
ನೀನು ಪಾಲಿಸು ಹರಿಯೆ ಜ್ಞಾನಗುಣಪರಿಪೂರ್ಣ ೩

ಅಂಬುಜಾಕ್ಷನೆ ನಿನ್ನ ನಂಬಿ ಭಜಿಸುವರ ಪಾ
ದಾಂಬುಜಕ್ಕೆರಗದಲೆ ಸಂಭ್ರಮದಲಿ
ತಂಬೂರಿಯನು ಪಿಡಿದು ಡಂಭತನದಲಿ ನಾನು
ಶಂಬರಾರಿಗೆ ಸಿಲುಕಿ ಬೆಂಬಿಡದೆ ಚಾಲ್ವರಿದೆ ೪

---

• ಯಾಚಿಸುವೆನು ಸನ್ಮಾರ್ಗವನು ಯೋಚಿಸದಲೆ (ಪಾ)

ಪರಮೇಷ್ಠಿಯಾರಭ್ಯ ತೃಣಜೀವ ಪರಿಯಂತ
ತರತಮಂಗಳ ತಿಳುಹಿ ತರುವಾಯದಲ್ಲಿ
ಗುರುಹಿರಿಯರಲಿ ಭಕುತಿ ವೈರಾಗ್ಯವನೆ ಕೊಟ್ಟು
ಸಿರಿ ಜಗನ್ನಾಥವಿಠಲ ನಿರುತ ನೀ ಪೊರೆಯದಿರೆ ೫

೭೯ ರಾಗ ಆನಂದಭೈರವಿ ಆದಿತಾಳ

ಶ್ರೀಮಾರುತಾತ್ಮ ಸಂಭೂತ, ಹನುಮ
ಭೀಮ ಮಧ್ವಾಖ್ಯ ಯತಿನಾಥ, ಮೂಲ
ರಾಮಕೃಷ್ಣಾರ್ಪಿತ ಸುಚೇತ ಮಮ
ಸ್ವಾಮಿ ಚಿತ್ತೈಸೆನ್ನ ಮಾತ ೧

ಅಂಜನಾದೇವಿ ಸುಕುಮಾರ, ಎಮ್ಮ
ನಂಜಿಸುವ ಘೋರ ಸಂಸಾರ, ಹೇ ಪ್ರ
ಭಂಜನನೆ ನಿಗಮಸಂಚಾರ, ಕ್ಲೇಶ
ಭಂಜಿಸಿ ಸಲಹೊ ಗುಣೋದಾರ ೨

ಕುಂತಿ ಜಠರದೊಳುದಿಸಿ ಬಂದೆ, ಮಹಾ
ಹೊಂತ ಕೌರವರನ್ನು ಕೊಂದೆ, ಅನಾದ್ಯ
ನಂತಕಾಲದಲ್ಲಿ ಎಮ್ಮ ತಂದೆ, ನೀನೆ
ಸಂತೈಸಬೇಕೆಂದು ನಿಂದೆ ೩

ಮಧ್ಯಗೇಹಾಖ್ಯ ನಿಜಸದನ-ದೊಳಗೆ
ಉದ್ಭವಿಸಿ ಮೆರೆದ್ಯೊ ಜಿತಮದನ, ಧರ್ಮ
ಪದ್ಧತಿಗಳ ಪ್ರಸನ್ನ ವದನ, ತಿಳಿಸಿ
ಉದ್ಧರಿಸೊ ದನುಜಕುಲ ನಿಧನ ೪

ಬದರಿಕಾಶ್ರಮಕೆ ನೀ ಪೋಗಿ, ಲಕ್ಷ್ಮೀ
ಹೃದಯವಾಸನ ಪದಕೆ ಬಾಗಿ, ಭಾಷ್ಯ
ಮುದದಿಂದ ಪೇಳ್ದಿ ಚೆನ್ನಾಗಿ, ಎನಗೆ
ಅದರ ಭಾವವ ತಿಳಿಸೊ ಯೋಗಿ ೫

ಶ್ರೀಪೂರ್ಣಬೋಧ ಯತಿರಾಯ, ಎನ್ನ
ತಾಪತ್ರಯಗಳಿಂದ ನೋಯ-ಗೊಡದೆ
ನೀ ಪಾಲಿವುದು ಗುಣನಿಕಾಯ, ಕೃಷ್ಣ
ದ್ವೈಪಾಯನಗೆ ನೀನೇ ಪ್ರಿಯ ೬

ಜೀವಕೋಟಿಯೊಳು ನೀ ಪಿರಿಯ, ಎಮ್ಮ
ನೋವು ಸುಖಗಳ ನೀನು ಅರಿಯ, ಈಗ
ನೀ ವೊಲಿಯದಿರೆ ಹರಿ ನಮ್ಮ ಪೊರೆಯ, ಜಗವ
ಕಾವ ಸುರವರ ನೀನೆ ಖರೆಯ ೭

ಹನುಮ ಭೀಮಾನಂದ ಮುನಿಪ, ಕರುಣಿ
ಸನುದಿನದಿ ನಿನ್ನಂಘ್ರಿ ನೆನೆಪ, ಮುದದಿ
ಘನವಾದ ಸತ್ಫಲಗಳುಣಿಪ ಶಕ್ತ
ಜನನ ಮರಣಗಳ ಬಿಡಿಸೊ ದಿನಪ ೮

ಯಾರಿಗುಸುರಲೊ ಮನದ ತಾಪ, ಭಾರ
ತೀರಮಣ ಎನ್ನ ಮಹಪಾಪ, ನೀನೆ
ದೂರ ಮಾಳ್ಪುದು ಸುಪ್ರತಾಪ, ಪರಮ
ಕಾರುಣಿಕ ತೋರೊ ತವರೂಪ ೯

ಭಕ್ತರಿಗೊಲಿದು ಭವದಿಂದ, ನೀ ವಿ
ಮುಕ್ತರನು ಮಾಡು ದಯದಿಂದ, ಸರ್ವ
ಶಕ್ತನಹುದೆಂದು ವೇದ-ವೃಂದದೊಳಗೆ
ಉಕ್ತವಾಗಿದೆ ನಿಮ್ಮ ಆನಂದ ೧೦

ಶ್ರೀಜಗನ್ನಾಥವಿಠಲಯ್ಯ ನಂಘ್ರಿ
ಪೂಜಿಸುವ ಸಜ್ಜನರ ಕೈಯ್ಯ ಬಿಡದೆ
ನೀ ಜೋಕೆಮಾಡುವುದು ಜೀಯ, ನೀನೆ
ಈ ಜಗತ್ರಯಕೆ ಗುರುವರ್ಯ ೧೧

೪೦ ರಾಗ ಮಧ್ಯಮಾವತಿ ಅಟತಾಳ

ಎಂದು ಕಾಂಬೆನೊ ಪಾಂಡುರಂಗ ಮೂರುತಿಯ ಪ.
ಇಂದುಭಾಗ ನಿವಾಸ ನರನ ಸಾರಥಿಯ ಅ

ಅರುಣಾಬ್ಜೋಪಮ ಹಾರು ಚರಣಾಂಗುಳಿ ನಖರ
ತರಣೇಂದು ಚ್ಛವಿ ತಿರಸ್ಕರಿಸುವ ಪ್ರಖರ
ಕಿರುಗೆಜ್ಜೆ ಕಡಗ ನೂಪುರ ಪೆಂಡಿ ಶಫರ
ತೆರೆ ಜಾನು ಜಂಘೆ ಭಾಸುರ ರತ್ನಮುಕುರ ೧

ರಂಭ ಪೋಲುವ ಊರು ಪೊಂಬಣ್ಣಾಂಬರವ
ಕುಂಭಿ ಮಸ್ತಕದೋಲ್ನಿತಂಬದಿ ಪೊಳೆವ
ಕಂಬು ಮೇಖಲ ಕಂಜ ಗಂಭೀರ ನಾಭಿ
ಅಂಬುಧಿಶಾಯಿ ವಿಠ್ಠಲನ ವಿಗ್ರಹವ ೨

ಲವಕುಕ್ಷಿತ್ರಿವಳಿ ಭಾರ್ಗವಿವಕ್ಷ ಉರವು
ದ್ರವಿ ಪೋಲ್ವ ಕೌಸ್ತುಭ ನವ ವೈಜಯಂತಿಯ
ಸುವಿಶಾಲ ವಕ್ಷದೋಳ್ ವಿವಿಧ ಹಾರಗಳು
ನವನೀತಚೋರ ನೀರಜಪೀರ ಪಿತನ ೩

ಪದಕ ಸರಿಗೆ ಜಾಂಬುನದ ಕಂಬುಕಂಠ
ಮದಕರಿ ಬಾಹುವು ಚದುರ ಭುಜಕೀರ್ತಿ
ಬದರ ಸಂಕಾಶ ಅಂಗದ ರತ್ನಕಟಕ
ಪದುಮಾರುಣ ಕರಯುಗ್ಮ ಕಟಿಯಲಿಟ್ಟವನ ೪

ವಿಧು ಬಿಂಬೋಪಮ ಚೆಲ್ವವದನ ಕೆಂದುಟಿಯ
ಬಿದುರಾಭ ದಶನಕುಟ್ಮಲ ಕಿರುನಗೆಯ
ಕದಪು ಕನ್ನಡಿ ನಾಸಾತುದಿ ಚಂಪಕತೆನೆಯ
ಉದಕೇಜಾಯತ ನೇತ್ರ ಯದುವಂಶೋದ್ಭವನ ೫

ಜ್ವಲಿತ ಕುಂಡಲ ಕರ್ಣ ಲಲಿತ ಭ್ರೂಯುಗಳ
ಪೊಳೆವ ಬಾಲಶಶಾಂಕ ತಿಲಕಾಂಕಿತ ಫಾಲ
ಅಳಿಜಾಲವೆನಿಪ ಕುಂತಳ ರತ್ನಖಚಿತ
ಕಲಧೌತ ಮಕುಟ ದಿಗ್ವಲಯ ಬೆಳಗುವನ ೬

ಶಫರ ಕೂರ್ಮರೂಪಿಯ ಕಿಟಿ ನರಹರಿಯ
ವಟು ಭಾರ್ಗವ ಕಾಕುಸ್ಥ ಶಕಟಕಂಸದ್ವಿಷಿಯ
ನಿಟಿಲಾಂಬಕ ಸಹಳ ಖಳಕಟಕಾರಿ ಭೀಮಾ
ತಟಶಾಯಿ ಜಗನ್ನಾಥ ವಿಠಲನಾಕೃತಿಯ ೭

೪೧ ರಾಗ ಪೂರ್ವಿ ತ್ರಿಪುಟತಾಳ

ಶೇಷದೇವ, ವಾರುಣಿಪತಿ ಪಾಹಿ ಪ
ಶೇಷದೇವ ತ್ರೈಘೋಷಣ ಮುಖ ಪರಿ
ಪೋಷಿಸು ಎಮ್ಮಭಿಲಾಷೆಯ ಸಲಿಸಿ ಅ
ಭಜಿಸುವೆ ಸರ್ವದ ಸುಜನರಭೀಷ್ಟದ
ಸುಜನಾರಾಧಕ ಭುಜಗೋತ್ತಂಸ ೧
ಪುಣ್ಯಚರಿತ ಸುಶರಣ್ಯನೆ ಸುಬ್ರ
ಹ್ಮಣ್ಯದೇವ ಕಾರುಣ್ಯ ಮೂರುತಿ ೨
ವಾರುಣಿಮುಖ ಸರೋರುಹ ದಿನಕರ
ತೋರುತವಾಂಘ್ರಿ ಮಹೋರಗ ರಾಜ ೩
ಅಸಿತ ವಸನ ಹಲ ಮುಸಲಾಯುಧ ಧರ
ದ್ವಿಸಹಸ್ರೇಕ್ಷಣ ಸುಶರಣ ಪಾಲ ೪
ಪಾತಾಳಪ ಪುರುಹೂತನುತ ಜಗ
ನ್ನಾಥವಿಠ್ಠಲನ ಪ್ರೀತಿ ವಿಷಯನೆ ೫

೪೨ ರಾಗ ಕಾಂಬೋದಿ ಝಂಪೆತಾಳ

ಬಲು ರಮ್ಯವಾಗಿದೆ ಹರಿಯ ಮಂಚ ಪ
ಯಲರುಣಿಕುಲರಾಜ ರಾಜೇಶ್ವರ ಮಂಚ ಅ
ಪವನತನಯ ಮಂಚ ಪಾವನ ತರ ಮಂಚ
ಭುವನತ್ರಯವ ಪೊತ್ತ ಭಾರಿ ಮಂಚ
ಕಿವಿಗಳಿಲ್ಲದ ಮಂಚ ಶ್ರೀನಿಕೇತನ ಮಂಚ
ಶಿವರೂಪದಲಿ ಹಿಂದೆ ಹರಿಯನೊಲಿಸಿದ ಮಂಚ ೧
ನೀಲಾಂಬರವನುಟ್ಟು ನಳಿನಳಿಸುವ ಮಂಚ
ನಾಲಿಗೆ ಎರಡುಳ್ಳ ನೈಜ ಮಂಚ
ನಾಲ್ವತ್ತು ಕಲ್ಪದಿ ತಪವ ಮಾಡಿದ ಮಂಚ
ತಾಲ ಮುಸಲಹಲವ ಹಿಡಿದಿರುವ ಮಂಚ ೨

ರಾಮನನುಜನಾಗಿ ರಣವ ಜಯಿಸಿದ ಮಂಚ
ತಾಮಸ ರುದ್ರನನು ಪಡೆದ ಮಂಚ
ಭೀಮಾವರಜನೊಳು ಆವೇಶಿಸಿದ ಮಂಚ
ಜೀಮೂತಮಂಡಲವ ತಡೆಗಟ್ಟಿದ ಮಂಚ ೩

ಜೀವನಾಮಕನೆನಿಸಿ ವ್ಯಾಪ್ತನಾಗಿ ಹರಿಯ
ಸೇವಿಸಿ ಸುಖಿಸುವ ದಿವ್ಯ ಮಂಚ
ಸಾವಿರ ಮುಖದಿಂದ ತುತಿಸಿ ಹಿಗ್ಗುವ ಮಂಚ
ದೇವಕೀ ಜಠರದಿಂ ಸೆಳೆಸಿಕೊಂಡ ಮಂಚ ೪

ವಾರುಣೀದೇವಿಗೆ ವರನೆನಿಸಿದ ಮಂಚ
ಸಾರುವ ಭಕುತರ ಸಲಹೊ ಮಂಚ
ಕಾರುಣ್ಯಸಿಧಿ ಜಗನ್ನಾಥವಿಠ್ಠಲನ ವಿ
ಹಾರಕ್ಕೆ ಯೋಗ್ಯವಾದ ವಿಮಲ ಶೇಷ ಮಂಚ ೫

೮೩ ರಾಗ ಆರಭಿ ಅಟತಾಳ

ಹೊಂದಿ ಬದುಕಿರೋ ರಾಘವೇಂದ್ರರಾಯರ ಪ.
ಕುಂದದೆಮ್ಮನ ಕರುಣದಿಂದ ಪೊರೆವರ ಅ
ನಂಬಿ ತುತಿಸುವ ಜನಕದಂಬಕಿಷ್ಟವ
ತುಂಬಿ ಕೊಡುವನು ಅನ್ಯರ್ಹಂಬಲೀಯನು ೧
ಆಲವಬೋಧರ ಸುಮತ ಜಲಧಿ ಚಂದಿರ
ಒಲಿದು ಭಕ್ತರ ಕಾಯ್ವ ಸುಲಭ ಸುಂದರ ೨
ಗುರುಸುಧೀಂದ್ರರ ವಿಮಲ ಕರಜರೆನಿಪರ
ಸ್ಮರಿಸಿ ಸುರುಚಿರ ವಿಮಲ ಚರಣ ಪುಷ್ಕರ ೩
ಫಾಲಲೋಚನ ವಿನುತ ಮೂಲರಾಮನ
ಲೀಲೆಯನುದಿನ ತುತಿಪ ಶೀಲ ಸದ್ಗುಣ ೪
ಭೂತ ಭಾವನ ಜಗನ್ನಾಥವಿಠಲನ
ಪ್ರೀತಿಪಾತ್ರನ ನಂಬಿರೀತನನುದಿನ ೫

೪೪ ರಾಗ ಧನಾಸರಿ ಆದಿತಾಳ

ವಾದಿರಾಜ

ವಾದಿರಾಜ ಗುರು ನೀ ದಯಮಾಡದ

ಡೀದುರಿತವ ಕಳೆದ್ಪಾದಿಪರಾರೊ ಅ ಪ

ಕಲಿಬಾಧೆಯು ತಾ ವೆಗ್ಗಳವಾಗಿದೆ

ಇಳೆಯೊಳು ಯತಿಕುಲ ತಿಲಕ ಕೃಪಾಳೊ ೧

ದೇಶಿಕಾರ್ಯ ವಾಗೀಶಕುವರ ತವ

ದಾಸ ಸಮೂಹವ ನೀ ಸಲಹೈ ಸದಾ ೨

ಜನ್ಮಾದಿವ್ಯಾಧ್ಯುನ್ಮಾದ ಭ್ರಮ

ನಿಮ್ಮೊರೆ ಹೊಕ್ಕರಿಗಿನ್ನೊದಲುಂಟೆ ೩

ನೀ ಗತಿಯೆಂದನುರಾಗದಿ ನಂಬಿದ

ಭೋಗಿ ಪುರೀಶನ ರೋಗವ ಕಳೆದೆ ೪

ಯಲುರುಣಿ ಭಯಕಂಜಿಲಿ ನಿಮ್ಮಾಸನ

ಕೆಳಗಿರೆ ಕಂಡದ ನುಳುಹಿದೆ ಕರುಣಿ ೫

ಗರಮಿಶ್ರಿತ ನರಹರಿ ನೈವೇದ್ಯವ

ಅರಿತು ಉಂಡು ಅದನರಗಿಸಿಕೊಂಡೆ ೬

ಹಯವದನನ ಪದದ್ವಯ ಭಜಕಾಗ್ರಣಿ

ದಯದಿ ವಿಪ್ರನಿಗೆ ನಯನವನಿತ್ತೆ ೭

ಮೋದಮುನಿಮತ ಮಹೋದಧಿ ಪೂರ್ಣ

ವಿಧೋದಯ ಶರಣರ ಕಾದುಕೊ ಧೊರೆಯೆ ೮

ಅರ್ಥಿಗಳಿಗೆ ಪರಮಾರ್ಥವ ತೋರಿಸಿ

ತೀರ್ಥ ಪ್ರಬಂಧವ ಕೀರ್ತನೆಗೈದೆ ೯

ಯಮಿವರನೆ ತ್ರಿವಿಕ್ರಮ ರಥೋತ್ಸವ

ಸಮಯವಿದೆಂದುತ್ಕ್ರಮಣವ ತೊರೆದೆ ೧೦

ಬಂದು ಕರೆಯೆ ಪುರಂದರನಾಳ್ಗಳು

ಹಿಂದಟ್ಟದೆ *ಕರ್ಮೇಂದ್ರಿಗಳರಸನೆ ೧೧

* ಕರ್ಮೇಂದ್ರಿಗಳು=ಯತಿಗಳು

ಭೂಮಿಪರುಪಟಳ ಕಾ ಮಹಿನಾಥನು
ತಾ ಮೈಮರೆದಿರೆ ನೀ ಮುದವಿತ್ತೆ ೧೨
ನಿನ್ನೊಶನಾದ ಜಗನ್ನಾಥವಿಠಲನ
ಇನ್ನಾದರು ತೋರೆನ್ನ ಮನದಲಿ ೧೩

೪೫ ರಾಗ ನಾಟಿ ಝಂಪೆತಾಳ

ಪ್ರಣವ ಪ್ರತಿಪಾದ್ಯ ಪ್ರಹ್ಲಾದ ವರದ ಪ
ಪ್ರಣತ ಕಾಮದನೆ ಪ್ರಾರ್ಥಿಸುವೆ ಪ್ರಭುವೆಂದು ಅ
ಸಕಲ ಜೀವ ಜಡಾತ್ಮಕ ಜಗತಿನೊಳಗಿದ್ದು
ಅಕಳಂಕ ನಾಮರೂಪದಲಿ ಕರೆಸಿ
ಪ್ರಕಟನಾಗದೆ ಮಾಡಿ ಮಾಡಿಸುವ ವ್ಯಾಪಾರ
ಸುಖದುಃಖಗಳಿಗೆ ಗುರಿಮಾಡಿ ನಮ್ಮನು ನೋಳ್ಪೆ ೧
ಏನೆಂಬೆ ನಿನ್ನ ಮಹಿಮೆಗೆ ರಮಾಪತೆ ನಿನ್ನ
ಧೀನರಲ್ಲವೆ ತತ್ವಮಾನಿ ಸುರರು
ದಾನವಾಂತಕನೆ ವಿಜ್ಞಾಪನವ ಕೈಕೊಂಡು
ದೀನರುದ್ಧರಿಸುವುದು ದಯದಿಂದ ನಿರುತ ೨
ಸರ್ವಸ್ವತಂತ್ರ ನೀನಾದಕಾರಣ ಬ್ರಹ್ಮ
ಶರ್ವಾದಿ ಸುರರು ಪ್ರಾರ್ಥಿಸುತಿಪ್ಪರು
ದುರ್ವಿಭಾವ್ಯನೆ ಸುರರಿಗಮೃತಪಾವನಗೈಸಿ
ಗರ್ವಿಸಿದ ದಾನವರ ಗಣವ ಸಂಹರಿಸಿದೆ ೩
ಬುದ್ಧ್ಯಾದಿ ಇಂದ್ರಿಯಗಳೊಳಗೆ ತತ್ವತಿಗಳೊಳ
ಗಿದ್ದು ಬಹುವಿಧ ಚೇಷ್ಟೆಗಳನೆ ಮಾಡಿ
ಬದ್ಧರನು ಮಾಳ್ಪೆ ಭವದೊಳಗಲ್ಪ ಜೀವರನಿ
ರುದ್ಧನೆಂದೆನಿಪೆ ಎಲ್ಲರೊಳು ವ್ಯಾಪಕನಾಗಿ ೪
ದಾಶರಥೆ ನೀನೆ ಗತಿಯೆಂದು ಮೊರೆಹೊಕ್ಕ ವಿ
ಭೀಷಣಗೆ ಲಂಕಾಧಿಪತ್ಯವಿತ್ತೆ
ವಾಸವಾನುಜ ಜಗನ್ನಾಥವಿಠ್ಠಲ ಭಕ್ತ
ಪೋಷಕನು ನೀನಹುದು ಕಲ್ಪಕಲ್ಪಗಳಲ್ಲಿ ೫

೪೬ ರಾಗ ಧನಸಾರಿ ಅಟತಾಳ

ಕರುಣೆಗಳೊಳಗೆಣೆ ಕಾಣೆನೊ ನಿನಗೆ ಸ
ದ್ಗುರುವರ ರಾಘವೇಂದ್ರ ಪ
ಚರಣಕಮಲ ಯುಗ್ಮ ಮರೆಹೊಕ್ಕವರ ಮನದ
ಹರಕೆಯ ನಿರುತದಲೀವೆ ನೀ ಕಾವೇ ಅ

ರಾಘವೇಂದ್ರ ಗುರುವೇ ಗತಿ ಎಂದನು
ರಾಗದಿಂಧಲಿ ಭಜಿಪ
ಭಾಗವತರ ದುರಿತೌಘಗಳಳಿದು ಚೆ
ನ್ನಾಗಿ ಸಂತೈಸುವೆ ನೀ ಸನ್ಮೌನಿ ೧

ಸುಧೀಂದ್ರಯತಿಕರ ಪದುಮಸಂಭವ ಮಧು
ವದ ಪಾದಾಂಬುಜ ಮಧುಪ
ತ್ರಿದಶ ಭೂರುಹದಂತೆ ಬುಧಜನರೀಪ್ಸಿತ
ಒದಗಿ ಪಾಲಿಸಿ ಪೊರೆವೆ ಮದ್ಗುರುವೆ ೨

ಕುಧರ ದೇವನ ದಿವ್ಯರದನದಿ ಜನಿಸಿದ
ನದಿಯ ತೀರದಿ ಶೋಭಿಪ
ಸದಮಲ ಘನ ಮಂತ್ರಸದನ ನಿಲಯ ಜಿತ
ಮದನ ಶ್ರೀ ಜಗನ್ನಾಥ ವಿಠಲನ ದೂತ ೩

೪೭ ರಾಗ ನಾದನಾಮಕ್ರಿಯ ಆದಿತಾಳ

ಫಲವಿದು ಬಾಳ್ದುದಕೆ–ಸಿರಿ
ನಿಲಯನ ಗುಣಗಳ ತಿಳಿದು ಭಜಿಸುವುದೆ
ಫಲವಿದು ಬಾಳ್ದುದಕೆ ಪ.

ಸ್ವೋಚಿತ ಕರ್ಮಗಳಾಚರಿಸುತ ಬಲು
ನೀಚರಲ್ಲಿ ಪೋಗಿ ಯಾಚಿಸದೆ
ಖೇಚರವಾಹ ಚರಾಚರ ಬಂಧಕ
ಮೋಚಕನಹುದೆಂದ್ಯೋಚಿಸುತಿಪ್ಪುದೆ ೧

ನಿಚ್ಚ ಸುಭಕುತಿಯೊಳಚ್ಯುತನಂಘ್ರಿಗ
ಳರ್ಚಿಸಿ ಮೆಚ್ಚಿಸುತೆಚ್ಚರದಿ
ತುಚ್ಛ ವಿಷಯಗಳ ನಿಚ್ಛೈಸದೆ ಯ
ದೃಚ್ಛಾಲಾಭದಿ ಪ್ರೀಚ್ಛನಾಗುವುದೆ ೨

ಮನವಾಕ್ಕಾಯದೊಳನುಭವಿಸುವ ದಿತ
ದಿನದ ವಿಷಯ ಸಾಧನಗಳನು
ಅನಿಲಾಂತರ್ಗತ ವನರುಹದಳ ಲೋ
ಚನಗರ್ಪಿಸಿ ದಾಸನು ನಾನೆಂಬುದೆ ೩

ವಾಸವಮುಖ ವಿಬುಧಾಸುರ ನಿಚಯಕ
ವಾಸುದೇವನೆ ಶುಭಾಶುಭದಾ
ಈ ಸಮಸ್ತ ಜಗದೀಶ ಕೇಶವಾ
ನೀಶ ಜೀವರೆಂಬೀ ಸುಜ್ಞಾನವೆ ೪

ಪಂಚ ಭೇದ ಪ್ರಪಂಚ ಸುಸತ್ಯ ವಿ
ರಿಂಚ ಮುಖರು ಬಲಿ ವಂಚಕಗೆ
ಚಂಚಲ ಪ್ರತಿಮೆಯ ಚಂಚಲ ಪ್ರಕೃತಿಯ
ಸುಚಿಂತಿಸಿ ಮುದಲಾಂಘನನಾಹುದೆ ೫

ಪಂಚಋತುಗಳಲಿ ಪಂಚಾಗ್ನಿಗಳಲಿ
ಪಂಚ ಪಂಚರೂಪವ ತಿಳಿದು
ಪಂಚ ಸುಸಂಸ್ಕಾರಾಂಚಿತನಾಗಿ ದ್ವಿ
ಪಂಚ ಕರಣದಲಿ ಪಂಚಕನರಿವುದೆ ೬

ಹೃದಯದಿ ರೂಪವು ವದನದಿ ನಾಮವು
ಉದರದಿ ನೈವೇದ್ಯವು ಶಿರದಿ
ಪದಜಲ ನಿರ್ಮಾಲ್ಯ ಧರಿಸಿ ನಿರುತ ಕೋ
ವಿದರ ಸದನ ಹೆಗ್ಗದವನು ಕಾಯ್ವುದೆ ೭

ಪಾತ್ರರ ಸಂಗಡ ಯಾತ್ರೆಯ ಚರಿಸಿ ವಿ
ಧಾತೃಪಿತನ ಗುಣ ಸ್ತೋತ್ರಗಳ
ಶ್ರೋತ್ರದಿ ಸವಿದು ವಿಚಿತ್ರಾನಂದದಿ
ಗಾತ್ರವ ಮರೆದು ಪರತ್ರವ ಪಡೆವುದೆ ೮

ಹಂಸ ಮೊದಲು ಹದಿನೆಂಟು ರೂಪಗಳ
ಸಂಸ್ಥಾನವ ತಿಳಿದನುದಿನದಿ
ಸಂಸೇವಿಸುವ ಮಹಾ ಪುರುಷರ ಪದ
ಪಾಂಸುವ ಧರಿಸಿ ಅಸಂಶಯನಾಹುದೆ ೯

ವರ ಗಾಯಿತ್ರೀನಾಮಕ ಹರಿಗೀ
ರೆರಡಂಘ್ರಿಯ ವಿವರವ ತಿಳಿದು
ತರುವಾಯದಿ ಷಡ್ವಿಧ ರೂಪವ ಸಾ
ದರವಲಿ ಅನುದಿನ ಧ್ಯಾನಿಸುತಿಪ್ಪುದೆ ೧೦

ಬಿಗಿದ ಕಂಠದಿಂದ್ಯಗ್ಬಾಷ್ಪಗಳಿಂ
ನಗೆಮೊಗದಿಂ ರೋಮಗಳೊಗೆದು
ಮಿಗೆ ಸಂತೋಷದಿ ನೆಗೆದಾಡುತ ನಾ
ಲ್ಮೊಗನಯ್ಯನ ಪದ ಪೊಗಳಿ ಹಿಗ್ಗುವುದೆ ೧೧

ಗೃಹಕರ್ಮವ ಬ್ಯಾಸರದಲೆ ಪರಮೋ
ತ್ಸಹದಲಿ ಮಾಡುತ ಮೂರ್ಜಗದ
ಮಹಿತನ ಸೇವೆಯಿದೆನುತಲಿ ಮೋದದಿ
ಅಹರಹರ್ಮನದಿ ಸಮರ್ಪಿಸುತಿಪ್ಪುದೆ ೧೨

ಕ್ಲೇಶಾನಂದಗಳೀಶಾಧೀನ ಸ
ಮಾಸಮ ಬ್ರಹ್ಮ ಸದಾಶಿವರು
ಈಶಿತವ್ಯರುಪರೇಶನಲ್ಲದೆ
ಶ್ವಾಸಬಿಡುವ ಶಕ್ತಿ ಲೇಸಿಲ್ಲೆಂಬೋದೆ ೧೩

ಆ ಪರಮಾತ್ಮಗೆ ರೂಪದ್ವಯವು ಪ
ರಾಪರ ತತ್ವಗಳಿದರೊಳಗೆ
ಸ್ತ್ರೀ ಪುಂ ಭೇದದಿ ಈ ಪದ್ಮಜಾಂಡವ
ವ್ಯಾಪಿಸಿ ಇಹನೆಂದೀಪರಿ ತಿಳಿವುದೆ ೧೪

ಏಕೋತ್ತರ ಪಂಚಾಶದ್ವರ್ಣಗ
ಳೇಕಾತ್ಮನ ನಾಮಂಗಳಿವು
ಮಾ ಕಮಲಾಸನ ಮೊದಲಾದಮರರು
ಸಾಕಲ್ಯದಿ ಇವನರಿಯರೆಂತೆಂಬುದೆ ೧೫

ಒಂದು ರೂಪದೊಳನಂತ ರೂಪವು
ಪೊಂದಿಪ್ಪವು ಗುಣಗಳ ಸಹಿತ
ಹಿಂದೆ ಮುಂದೆ ಎಂದೆಂದಿಗೆ ಶ್ರೀ ಗೋ
ವಿಂದಗೆ ಸರಿಮಿಗಿಲಿಲ್ಲೆಂತೆಂಬುದೆ ೧೬

ಹರಿಕಥೆ ಪರಮಾದರದಲಿ ಕೇಳುತ
ಮರೆದು ತನುವ ಸುಖ ಸುರಿಯುತಲಿ
ಉರುಗಾಯನ ಸಂದರುಶನ ಹಾರ್ತೈ
ಸಿರುಳು ಹಗಲು ಜರಿಜರಿದು ಬಾಳುವುದೆ ೧೭

ವಿಷಯೇಂದ್ರಿಗಳ ತದಭಿಮಾನಿ ಸುಮ
ನಸರಲಿ ನಿಂದು ನಿಯಾಮಿಸುವ
ಶ್ವಸನಾಂತರ್ಗತ ವಾಸುದೇವ ತಾ
ವಿಷಯಂಗಳ ಭೋಗಿಸುತಿಹನೆಂಬುದೆ ೧೮

ಮೂಜಗದೊಳಗಿಹ ಭೂಜಲ ಖೇಚರ
ಈ ಜೀವರೊಳಗೆ ಮಹೌಜಸನ
ಸೋಜಿಗ ಬಹುವಿಧ ನೈಜವಿಭೂತಿಯು
ಪೂಜಿಸುತನುದಿನ ರಾಜಿಸುತಿಪ್ಪುದೆ ೧೯

ಮೇದಿನಿ ಪರಮಾಣಾಂಬು ಕಣಂಗಳ
ನೈದಬಹುದು ಪರಿಗಣನೆಯನು
ಮಾಧವ ನಾನಂದಾದಿ ಗುಣಂಗಳ
ನಾದಿಕಾಲದಿಂದಗಣಿತವೆಂಬುದೆ ೨೦

ಗುಣಕಾಲಾಹ್ವಯ ಆಗಮಾರ್ಣವ ಕುಂ
ಭಿಣಿ ಪರಮಾಣ್ವಂಬುಧಿಗಳಲಿ
ವನ ಗಿರಿ ನದಿ ಮೊದಲಾದದರೊಳಗಿಂ
ಧನಗತ ಪಾವಕನಂತಿಹನೆಂಬುದೆ ೨೧

ಅನಲಾಂಗಾರದೊಳಿಪ್ಪೋಪಾದಿಲಿ
ಅನಿರುದ್ಧನು ಚೇತನರೊಳಗೆ
ಕ್ಷಣಬಿಟ್ಟಗಲದೆ ಏಕೋ ನಾರಾ
ಯಣ ಶ್ರುತಿ ಪ್ರತಿಪಾದ್ಯನು ಇಹನೆಂಬುದೆ ೨೨

ಪಕ್ಷ್ಮಗಳಕ್ಷಿಗಳ ಗಲದಲಿಪ್ಪಂ
ತಕ್ಷರ ಪುರುಷನಪೇಕ್ಷೆಯಲಿ
ಕುಕ್ಷಿಯೊಳಬ್ಜಜ ತ್ರ್ಯಕ್ಷಾದ್ಯಮರರ
ಈಕ್ಷಿಸಿ ಕರುಣದಿ ರಕ್ಷಿಪನೆಂಬುದೆ ೨೩

ಪವನ ಮತಾನುಗರವ ನಾನಹುದೆಂ
ದವನಿಯೊಳಗೆ ಸತ್ಕವಿಜನರ
ಭವನಗಳಲಿ ಸಂಚರಿಸುತ ಸುಕಥಾ
ಶ್ರವಣವ ಮಾಡುತ ಪ್ರವರನಾಗುವುದೆ ೨೪

ಕಾರಣ ಕಾರ್ಯಾಂತರ್ಗತ ಅಂಶವ
ತಾರಾವೇಶ ವಿಹಿತ ಸಹಜ
ಪ್ರೇರಕ ಪ್ರೇರ್ಯಾಹ್ವಯ ಸರ್ವತ್ರವಿ
ಕಾರವಿಲ್ಲದಲೆ ತೋರುವನೆಂಬುದೆ ೨೫

ಪ್ರತಿದಿವಸ ಶ್ರುತಿಸ್ಮೃತಿಗಳಿಂದ ಸಂ
ಸ್ತುತಿಸುತ ಲಕ್ಷ್ಮೀಪತಿ ಗುಣವ
ಕೃತಿಪತಿ ಸೃಷ್ಟಿ ಸ್ಥಿತಿಲಯಕಾರಣ
ಇತರ ದೇವತೆಗಳಿಗಿನಿತಿಲ್ಲೆಂಬುದೆ ೨೬

ಪನ್ನಗಾಚಲ ಸನ್ನಿವಾಸ ಪಾ
ವನ್ನ ಚರಿತ ಸದ್ಗುಣಭರಿತ
ಜನ್ಯಜನಕ ಲಾವಣ್ಯಾನೇಕ ಜ
ಗನ್ನಾಥ ವಿಠ್ಠಲ ನಾನ್ಯಪನೆಂಬುದೆ ೨೭

೪೮ ರಾಗ ಕಾಂಬೋದಿ ಝಂಪೆತಾಳ

ಜಗದಾಖ್ಯ ವೃಕ್ಷ ಚಿಂತಿಪುದು ಬುಧರು ಪ.
ಭಗವಂತನೆಂಬ ಆಗಸದಲ್ಲಿ ಪಸರಿಸಿದ ಅ

ಚತುರಾಸ್ಯವಾಣಿ ಈರ್ವರು ಬೀಜ ಚಿತ್ಪ್ರಕೃತಿ
ಪೃಥಿವಿಕರ್ಮವು ಬೇರು ತ್ರಿಗುಣತ್ವವು
ಕ್ಷಿತಿಜಲಾನಳವಾಯು ಗಗನಶಾಖೆಗಳಿದಕೆ
ಮತಿಸಹಿತ ದಶಕರಣ ಉಪಶಾಖೆಯೆನಿಸುವುದು ೧

ಅಹಂಕಾರಬಲದಿಂದ ಅಭಿವೃದ್ಧಿಯೈದುವುದು
ಅಹಿಕಸುಖ ಕುಸುಮ ತನ್ಮಾತ್ರರಸದಿ
ಸಹಿತವಾದ ಪ್ರವೃತ್ತಿ ಕರ್ಮಗಳ ಫಲವನ್ನು
ಅಹರಹರ್ ಭುಂಜಿಪುದು ತನ್ನಾಮ ಜೀವಖಗ ೨

ನಾನು ನನ್ನನು ಎಂಬ ನೀಡದ್ವಯಗಳಿದಕೆ
ಮಾನಾಪಮಾನಾದಿಗಳೆ ಪತ್ರವು
ಹೀನವಿದ್ಯಾದಿ ಪಂಚಕವೆ ಸರ್ವಗಳಲ್ಲಿ
ಶ್ರೀನಿಧಿ ಜಗನ್ನಾಥ ವಿಠಲ ಸಂರಕ್ಷಕನು ೩

೪೯ ರಾಗ ನಾದನಾಮಕ್ರಿಯೆ (ಪಂತುವರಾಳಿ) ಅಟತಾಳ

ಸಾರಿದ ಡಂಗುರ ಯಮನು–ಅಘ ಪ
ನಾರಿಯರೆಳೆತಂದು ನರಕದೊಳಿಡು ಎಂದು ಅ

ಹೊತ್ತಾರೆ ಎದ್ದು ಪತಿಗೆ ಎರಗದವಳ
ವೃತ್ತಿಕೆ ಶೌಚ ಮಾಡದೆ ಇಪ್ಪಳ
ಬತ್ತಲೆ ಮೈತೊಳೆದತ್ತಿಗೆ ನಾದಿನಿ
ಅತ್ತೆಮಾವರ ಬೈವಳೆತ್ತಿ ತನ್ನಿರೊ ಎಂದು ೧

ತಿಲಕಾಯುಧವ ಬಿಟ್ಟು ಕುಂಕುಮವಿಡುವಳ
ಬೆಳಗಾದ ಕಾಲಕ್ಕು ಮಲಗಿಪ್ಪಳ
ಮಲಿನ ವಸ್ತ್ರವನುಟ್ಟು ಪತಿಬಳಿ ಪೋಪಳ
ಕಲಹಕಾರಿಯ ಪಿಡಿದೆಳೆತನ್ನಿರೊ ಎಂದು ೨

ಉತ್ತಮ ಗುರುಹಿರಿಯರನು ನಿಂದಿಸುವಳ
ಹೆತ್ತಮಕ್ಕಳ ಮಾರಿ ಬದುಕುವಳ
ಪ್ರತ್ಯೇಕ ಶಯ್ಯದಿ ಮಲಗಿಪ್ಪಳ ನೀಚ
ವೃತ್ತಿಯಳ ಪಿಡಿದೊತ್ತಿ ತನ್ನಿರೊ ಎಂದು ೩

ಜಲಜಕ್ಕಿಸಾಳಿ ಕಂಬಳಿ ಬೋಳಿ ಬಕ್ಕಿ ಗೋಂ
ದಲ ಮೊದಲಾದುವು ದೈವವೆಂದು
ತಿಳಿದು ಪಿಶಾಚಿ ಎಂಜಲನುಂಡು ಹಿಗ್ಗುವ
ಲಲನೇರನಾಲಸ್ಯಗೊಳದೆ ತನ್ನಿರೊ ಎಂದು ೪

ಒಲುಮೆ ಔಷಧಿಮಾಡಿ ಪತಿಯ ನೋಲಿಸುವಳ
ಮಲಮಕ್ಕಳೊಳು ಮತ್ಸರಿಸುತಿಪ್ಪಳ
ಕಳುವಿಲಿ ಕಾಂತನ ಧನವ ವಂಚಿಸುವಳ
ಗಳಕೆ ಪಾಶವ ಸುತ್ತಿ ಎಳೆದು ತನ್ನಿರೋ ಎಂದು ೫

ನಾಗೇಂದ್ರಶಯನನ ದಿನದಲಿ ಉಪವಾಸ
ಜಾಗರಮಾಡದೆ ಮಲಗಿಪ್ಪಳ
ಭಾಗವತಾದಿ ಶಾಸ್ತ್ರವ ಕೇಳದೆ ಮತ್ತ
ಳಾಗಿ ತಿರುಗುವಳ ಎಳೆದು ತನ್ನಿರೊ ಎಂದು ೬

ಉಡಲಿಲ್ಲ ಉಣಲಿಲ್ಲ ಇಡಲಿಲ್ಲ ತೊಡಲಿಲ್ಲ
ಸುಡಲಿ ಗಂಡನ ವಗತನವೆನ್ನುತ
ಪಡೆದವರನು ನುಡಿನುಡಿಗೆ ಬೈಯುವ ಇಂಥ
ಕಡುಪಾಪಿಗಳ ಹೆಡೆಮುಡಿಕಟ್ಟಿ ತಾ ಎಂದು ೭

ಗಂಡ ನಿರ್ಧನಿಕನೆಂದವಮಾನ ಮಾಳ್ಪಳ
ಉಂಡ ಶೇಷಾನ್ನವನುಣಿಸುವಳ
ಕೊಂಡೆಮಾತುಗಳ್ಹೇಳಿ ಕಳವಳಗೊಳಿಪಳ
ಮಂಡೆ ಕೂದಲು ಹಿಡಿದೆಳೆದು ತನ್ನಿರೊ ಎಂದು ೮

ಸಾಲೆಡೆಯಲಿ ಭೇದಮಾಡಿ ಬಡಿಸುವಳ
ನೀಲಾಂಬರವನುಟ್ಟು ಮಡಿಯೆಂಬಳ
ಬಾಲಕರನು ಬಡಿದಳಿಸುತಿಪ್ಪಳ ಹಿಂ
ಗಾಲ ತೊಳೆಯದಳ ಎಳೆದು ತನ್ನಿರೊ ಎಂದು ೯

ಮಿಾಸಲು ಮಡಿ ಎನ್ನದೆ ಭುಂಜಿಸುವಳ ಸ
ಕ್ಕೇಶಿಯೊಡನೆ ಗೆಳೆತನ ಮಾಳ್ಪಳ
ದಾನೇರಿಂದಲಿ ಪಾಕಪಾತ್ರೆ ಮುಟ್ಟಿಸುವಳ
ಪಾಶಗಳನೆ ಹಾಕಿ ಎಳೆದು ತನ್ನಿರೊ ಎಂದು ೧೦

ಪತಿಗೆ ಬೇಕಾದವರೊಳು ಮತ್ಸರಿಸುವಳ
ಮೃತವತ್ಸಗೋವಿನ ಪಾಲುಂಬಳ
ಹುತವಹನನು ಪಾದತಳದಿ ನೊಂದಿಸುವಳ
ಮತಿಗೇಡಿಯ ಹಿಡಿದೆಳೆದು ತನ್ನಿರೊ ಎಂದು ೧೧

ಅತ್ತೆಮಾವರ ಕೂಡೆ ಮತ್ಸರಿಸುವಳ
ಸತ್ತವರ ನೆನೆನೆನೆದಳುತಿಪ್ಪಳ
ದತ್ತಾಪಹಾರವ ಮಾಡುತಿಪ್ಪಳ ಉ
ನ್ಮತ್ತಳ ಹಿಡಿದೆಳೆದೆತ್ತಿ ತನ್ನಿರೊ ಎಂದು ೧೨
ಲಶುನವೃಂತಾಸಾದಿಗಳನು ಭಕ್ಷಿಸುವಳ
ಸೊಸೆಯರೊಡನೆ ಮತ್ಸರಿಸುತಿಹಳ
ಹಸಿದು ಬಂದವರಿಗೆ ಅಶನವಿಲ್ಲೆಂಬಳ
ಉಸಿರು ಬಿಡದ ಹಾಗೆ ಎಳದು ತನ್ನಿರೊ ಎಂದು ೧೩
ತುಲಸಿ ಬೃಂದಾವನಕಭಿನಮಿಸದವಳ
ಜಲವ ಶೋಧಿಸದೆ ಪಾನವ ಮಾಳ್ಪಳ
ಫಲಧಾನ್ಯಾದಿಗಳ ನೋಡದೆ ಪಾಕಮಾಳ್ಪಳ
ಮಳೆಗಾಳಿ ನಿಂದಿಪಳೆಳೆದು ತನ್ನಿರೊ ಎಂದು ೧೪
ಅರಸಿನ ಕುಂಕುಮ ಪುಷ್ಪಾಂಜನ ವಸ್ತ್ರಾ
ಭರಣ ಭೂಷಿತಳಾಗಿ ಪತಿಯೊಡನೆ
ಸರಸವಾಡುವ ಸುಖ ಹರಿಗೆ ಅರ್ಪಿತವೆಂಬ
ಗರತೇರೆಡೆಗೆ ಕರಮುಗಿದು ಬನ್ನಿರೊ ಎಂದು ೧೫
ಬಾಲಕರನು ತೊಟ್ಟಿಲೊಳಗಿಟ್ಟು ತೂಗುತ
ಪಾಲೆರೆವುತ ಹಾಡಿ ಪಾಡುತಲಿ
ಆಲಯದೊಳು ಕೆಲಸಗಳ ಮಾಡುತ ಲಕ್ಷ್ಮಿ
ಲೋಲನ ಸ್ಮರಿಸುವವರನು ಮುಟ್ಟದಿರೆಂದು ೧೬
ಅಗಣಿತಮಹಿಮ ಶ್ರೀ ಜಗನ್ನಾಥವಿಠಲನ
ಹಗಲು ಇರುಳು ಬಗೆಬಗೆಯಿಂದಲಿ
ಹೊಗಳುವ ದಾಸರ ಬಗೆಯವರೆನಿಸುವ
ಸುಗುಣೇರಿದ್ದೆಡೆಗೆ ಕೈಮುಗಿದು ಬನ್ನಿರೊ ಎಂದು ೧೭

೫೦ ರಾಗ ಪಂತುವರಾಳಿ ರೂಪಕತಾಳ

ನೀಚನಲ್ಲವೆ ಇವನು ನೀಚನಲ್ಲವ ಪ
ಕೀಚಕಾರಿ ಪ್ರಿಯನ ಗುಣವ । ಯೋಚಿಸದಲಿಪ್ಪ ನರನು ಅ

ಜನನಿ ಜನಕರಂತೆ ಜನಾ | ರ್ದನನು ಸಲುಹುತಿರಲು ಬಿಟ್ಟು
ಧನಿಕರ ಮನೆ ಮನೆಗಳರಸಿ | ಶುನಕನಂತೆ ತಿರುಗುತಿಹನು ೧
ಜೀವ ತಾ ನೆಕರ್ತೃವೆಂದು | ದೇವನೊಬ್ಬ ಕರ್ತೃ ರಮಾ
ದೇವಿ ಮೊದಲುಗೊಂಡು ಹರಿಯ | ಸೇವಕರೆಂದರಿಯದವನು ೨
ಲೋಕವಾರ್ತೆಗಳಲಿ ಏಡ | ಮೂಕನಂತೆ ವಿಷಯಗಳವ
ಲೋಕಿಸದಲೆ ಶ್ರೀಶಗಿವು ಪ್ರ | ತೀಕವೆಂದು ತಿಳಿಯದವನು ೩
ಬಹಳ ದ್ರವ್ಯದಿಂದ ಗರುಡ | ವಹನನಂಘ್ರಿ ಭಜಿಸಿ ಅನು
ಗ್ರಹವ ಮಾಡುಯೆಂದು ಬರಿದೆ | ಆಹಿಕ ಸುಖವ ಬಯಸುವವನು ೪
ಶ್ರೀ ಕಳತ್ರನಂಘ್ರಿ ಕಮಲ | ವೇಕ ಚಿತ್ತದಲಿ ಮನೋ
ವ್ಯಾಕುಲಗಳ ಬಿಟ್ಟು ಸುಖೋ | ದ್ರೇಕದಿಂದ ಭಜಿಸದವನು ೫
ಹರಿಕಥಾಮೃತವ ಬಿಟ್ಟು | ನರ ಚರಿತ್ರೆಯಿಂದ ದ
ರ್ದುರಗಗಳಂತೆ ಹಾಳು ಗೋಷ್ಟಿ | ಹರಟೆ ದಿವಸ ಕಳೆಯುತಿಹನು ೬
ವಿಹಿತ ಧರ್ಮ ತೊರೆದು ಪರರ | ಗೃಹಗಳಲ್ಲಿ ಸಂಚರಿಸುತ
ಕುಹಕ ಯುಕ್ತಿಯಿಂದ ಲೋಕ | ಮಹಿತರನ್ನು ನಿಂದಿಸುವನು ೭
ಕರಣ ಜನ್ಯ ಪುಣ್ಯಪಾಪ | ವೆರಡು ಹರಿಯಧೀನವೆಂದು
ಸ್ಮರಿಸುತ ಅತಿ ಭಕುತಿಯಿಂದ | ಹರುಷ ಪಡದಲಿಪ್ಪ ನರನು ೮
ವಾತಜನಕನೆನಿಪ ಜಗ | ನ್ನಾಥ ವಿಠಲ ಪಾದಪದ್ಮ
ಪೋತವಾಶ್ರಯಿಸಿ ಭವ ಕು | ವೈತರಣಿಯ ದಾಟದವನು ೯

೫೧ ರಾಗ ತೋಡಿ ಅಟತಾಳ

ಮಧ್ವಾಂತರ್ಗತ ವೇದವ್ಯಾಸ ಮಮ | ಹೃದ್ವನರುಹ ಸನ್ನಿವಾಸ ಪ
ಸದ್ಬುದ್ಧಿ ಕೊಡೊ ಕೃಷ್ಣ ದ್ವೈಪಾಯನ ಚಿದ
ಚಿದ್ವಿಲಕ್ಷಣ ತ್ವತ್ಪಾದದ್ವಯಾಬ್ಜವ ತೋರೊ ಅ
ಹರಿತೋಷಲಾಭಾ ಶರೀರ ಪರಾ | ಶರವರ ಮುನಿ ಸುಕುಮಾರಾ
ಪರಮಾ ಪುರುಷ ಕಾರ್ತ | ಸ್ವರ ಗರ್ಭ ಪ್ರಮುಖ ನಿ
ರ್ಜರ ಮುನಿಗಣನುತ | ವರ ಪಾದ ಪಂಕೇಜ
ಕುರುಕುಲದಿ ಧೃತರಾಷ್ಟ್ರ ಪಾಂಡು ವಿ | ಧುರರ ಪಡೆದೈವರಿ ಗೊಲಿದು ಸಂ
ಹರಿಸಿ ದುರ್ಯೋಧನನ ಭಾರತ | ವಿರಚಿಸಿದ ಸುಂದರ ಕವೀಂದ್ರ ೧

ಬಾದರಾಯಣ ಬಹುರೂಪ ಸನ| ಕಾದಿ ಸನ್ನುತ ಧರ್ಮಸ್ಥಾಪ
ವೇದೋದ್ಧಾರಾನಾ | ದಾದಿಕಾರಣ ಪೂರ್ಣ
ಬೋಧ ಸದ್ಗುರುವರಾ | ರಾಧಿತ ಪದಯುಗ
ಮೇದಿನಿಯೊಳಾನೋರ್ವ ಪಾಮ- | ರಾಧಮನು ಕೈ ಪಿಡಿಯೊ ಕರುಣ ಮ
ಹೋದಧೇ ಕಮನೀಯ ಕಪಿಲ ಪ್ರ | ಬೋಧ ಮುದ್ರಾಭಯ ಕರಾಂಬುಜ ೨

ಜಾತರೂಪ ಜಟಾಜೂಟ ಶ್ರೀನಿ | ಕೇತನ ತಿಲಕ ಲಲಾಟ
ಪೀತ ಕೃಷ್ಣಾಜಿನ | ಶ್ವೇತ ಶ್ರೀಯಜ್ಞೋಪ
ವೀತ ಮೇಖಲ ದಂಡ | ನೀತ ಕಮಂಡಲ
ಭೂತ ಭಾವನ ಭೂತಿ ಕೃತ್ಸ | ದ್ದ್ಯುತಿದಾಯಕ ಶ್ರೀಪತಿ ಜಗ
ನ್ನಾಥ ವಿಠಲನೆ ತುತಿಸಬಲ್ಲೆನೆ | ಪಾತಕನು ಅಲ್ಪಾತುಮನು ನಾ ೩

೫೨ ರಾಗ ಮೋಹನ ಝಂಪೆ ತಾಳ

ಸಿರಿರಮಣ ತವ ಚರಣ | ದೊರಕುವುದು ಹ್ಯಾಗಿನ್ನು |
ಪರಮ ಪಾಪಿಷ್ಠ ನಾನು ಪ
ನರಹರಿಯೆ ನಿನ್ನ ನಾಮ | ಸ್ಮರಣೆ ಮಾಡದೆ ವ್ಯರ್ಥ |
ನರಕಕ್ಕೆ ಗುರಿಯಾದೆನೊ ಇನ್ನು ಅ

ಕೆರೆ ಭಾವಿ ದೇವಮಂದಿರಗಳನು ಕೆಡಿಸಿ ದಿವ್ಯ ಹಿರಿದಾಗಿ ಮನೆಗಟ್ಟಿದೆ | ನೆರೆ ನಡೆವ ಮಾರ್ಗದೊಳು ಅರವಟ್ಟಿಗೆಗಳನ್ನು ಥರ ಥರದಿ ಬಿಚ್ಚಿ ತೆಗೆದೆ || ಪರಮ ಸಂಭ್ರಮದಿಂದ ಆರಳಿಯ ಮರ ಕಡಿಸಿ ಕೊರೆಸಿ ಬಾಗಿಲಮಾಡಿದೆ | ರವರ ಮಂದಿರವ ಮುಗಿಸಿ ಹರುಷ ಚಿತ್ರವ ಬರೆಸಿ ಪರಿಪರಿಯ ಸೌಖ್ಯ ಸುರಿದೆ–ಮೆರೆದೆ ೧

ಹೊಸ ಮನೆಯ ಕಂಡು ಬಲು ಹಸಿದು ಭೂಸುರರು ಬರೆ ಕೊಸರಿ ಹಾಕುತ ದಬ್ಬುತ | ಶಶಿಮುಖಿಯೆ ಬಾರೆಂದು ಆಸವಸದಿ ಬಣ್ಣಿಸುತ ಹಸನಾಗಿ ಅವಳೊಲಿಸುತ || ದಶಮಿ ಏಕಾದಶಿ ದ್ವಾದಶಿ ದಿನದಲಿ ಅಶನ ವೆರಡ್ಹೊತ್ತುಣ್ಣುತ | ಘಸಘಸನೆ ತಾಂಬೂಲ ಪಶುವಿನಂದದಿ ಮೆದ್ದು ಕುಸುಮಗಂಧಿಯ ರಮಿಸುತ–ನಗುತ ೨

ಸ್ನಾನ ಸಂಧ್ಯಾನ ಅತಿ ಮೌನ ಗಾಯತ್ರಿ ಜಪ ಭಾನುಗರ್ಘ್ಯವನು ಕೊಡದೆ। ದೀನತ್ವದಲಿ ದಾನಧರ್ಮವನು ಮಾಡದೆ ಶ್ವಾನನಂದದಿ ಚರಿಸಿದೆ॥ ಶ್ರೀನಿವಾಸನೆ ನಿನ್ನ ಆನುಪೂರ್ವಕ ಸೇವೆ ನಾನೊಂದು ಕ್ಷಣ ಮಾಡದೆ। ಬ್ಯಾನೆ ಬಂದಂತಾಗೆ ಹೀನ ವಿಧವೆಯು ಕೈಯ ನಾನಾ ವಿಧಾನ್ನ ತಿಂದೆ–ನೊಂದೆ ೩

ನಾಕಲ್ಯದಿಂದ ಸಾಲಗ್ರಾಮ ಕಭಿಷೇಕ ವಾಕಳ್ದಾಲಲಿ ಮಾಡದೆ। ನಾಲ್ಕೆಂಟು ನಾಯಿಗಳ ನಾಕಿ ಮನೆಯೊಳು ಬದುಕ ಬೇಕೆಂದು ಹಾಲು ಹೊಯ್ದೆ॥ ಕಾಕು ಬುದ್ಧಿಗಳಿಂದ ಗುಡಿಗುಡಿ ನಶ್ಯಪುಡಿ ಹಾಕಿ ಭಂಗಿಯು ನೇದಿದೆ। ಲೋಕ ನಿಂದಕನಾಗಿ ಪಾಕಿ ಕೈ ಹಚ್ಚಿ ಅನೇಕ ಜೂಜುಗಳಾಡಿದೆ–ಬಿಡದೆ ೪

ಬಾದರಾಯಣ ಕೃತ ಭಾಗವತ ಕೇಳುವಲ್ಲಿ ಆದರವು ಪುಟ್ಟಲಿಲ್ಲ। ವಾದಿಗಳ ಮತವಳಿದ ಮಧ್ವ ಸಿದ್ಧಾಂತದ ಹಾದಿಗೆ ಹೋಗಲಿಲ್ಲ॥ ಶೋಧಿಸಿದ ಚಿನ್ನಕ್ಕೆ ಸಮಕಾದ ವೈಷ್ಣವರ ಪಾದಕ್ಕೆ ಬೀಳಲಿಲ್ಲ। ವೇದ ಬಾಹ್ಯರಿಗೆರಗಿ ಅಪಸವ್ಯ ಮನನಾಗಿ ಒದಿಕೊಂಡೆನೊ ಇದೆಲ್ಲ–ಸಲ್ಲ ೫

ಉತ್ತಮ ಬ್ರಾಹ್ಮಣರ ವೃತ್ತಿಯನು ಕೆಡಿಸಿ ಬ್ರಹ್ಮತ್ಯಗಾರನು ಎನಿಸಿದೆ। ಮತ್ತೆ ಮುಂಜಿ ಮದುವೆ ಸಮಯಕ್ಕೆ ನಾ ಹೋಗಿ ಸತ್ತಸುದ್ದಿಯ ಪೇಳಿದೆ॥ ವಿತ್ತವಿದ್ದವರ ಬೆನ್ಹತ್ತಿ ದೂತರ ಕಳುಹಿ ಕುತ್ತಿಗೆಯನು ಕೊಯಿಸಿದೆ। ಹತ್ತು ಜನರೆನ್ನೆಣಕೆ ನಿತ್ಯ ಕಲ್ಲೊಡೆಯುತಿರೆ ಮೃತ್ಯುದೇವತೆ ಎನಿಸಿದೆ–ಬಿಡದೆ ೬

ಕ್ಷಿತಿಯೊಳಗೆ ಇನ್ನಾರು ಹಿತವ ಬಯಸುವರೆನಗೆ ಗತಿಯೇನು ಪೇಳೊ ಕೊನೆಗೆ। ಸತತ ತವಧ್ಯಾನದಲಿ ರತನಾಗಿ ಇರುವ ಸನ್ಮತಿ ಪಾಲಿಸೈಯ ಎನಗೆ॥ ಪತಿತ ಪಾವನನೆಂಬ ಬಿರುದು ಅವನಿಯು ಮೇಲೆ ಶ್ರುತಿ ಸಾರುತಿದೆಯೊ ಹೀಗೆ। ಸಿತಿಕಂಠನುತ ಜಗನ್ನಾಥ ವಿಠ್ಠಲ ನಿನಗೆ ನುತಿಸಿ ಮೊರೆಹೊಕ್ಕೆ ಹರಿಯೇ–ಪೊರೆಯೇ ೭

೫೩ ರಾಗ ಮೋಹನ (ಪಂತುವರಾಳಿ) ಆದಿತಾಳ

ಬಾ ವೆಂಕಟಶೈಲಾಧಿಪ ಮನ್ಮನಕೆ। ತಡಮಾಡುವುದೇಕೆ ಪ

ಶ್ರೀವಲ್ಲಭನಾ ನಿನ್ನಂಘ್ರಿ ಕಮಲಕೆ। ನಮಿಸುವೆ ಪ್ರತಿಕ್ಷಣಕೆ

ನೀವಲಿದೆನ್ನ ದಯಾವಲೋಕನದಿ ಪಾವನಮಾಡಲು ದೇವವರೇಣ್ಯ ಅ॰

ವೈಕುಂಠಾಧೀಶ ವಿಗತಕ್ಲೇಶ | ಚಿತ್ಸುಖಮಯ ವಪುಷ
ಆಕಾಶ ವತ್ಸರ್ವತ್ರಪ್ರಕಾಶ | ಶ್ರೀ ವೆಂಕಟೇಶ
ಶ್ರೀ ಕಮಲಜ ಭವ ಪಾಕಹ ಮದನ ದಿ | ವಾಕರ ಪ್ರಮುಖ ದಿವೌಕಸ ವರದ ೧

ಮಮಸರ್ವಸ್ವಾಮಿ ಮದಂತರ್ಯಾಮಿ | ಸರ್ವಾಂತರ್ಯಾಮಿ
ಅಮೆಯಾತ್ಮಾ ನಿರ್ಗುಣ ನಿಷ್ಕಾಮಿ | ಸೇವಿತ ಶ್ರೀ ಭೂಮಿ
ಶಮಲ ವಿವರ್ಜಿತ ಅಮಿತ ಸುಗುಣಪೂರ್ಣ | ಪಮಲ ಮಹಿಮ
ಖಳ ದಮನ ದಯಾಳೊ ೨

ಸೋಮಾರ್ಕಾನಲ ಸಂಕ್ರಮ ಋತು ರುಕ್ಷ | ಸಿ-ತಾಸಿತಪಕ್ಷ
ನಾಮಾಭಿಧೇಯ ಲೋಕಾಧ್ಯಕ್ಷ | ಕಮಲಾಯತಾಕ್ಷ
ಸೋಮ ಭೂಮ ನಿಸ್ಸೀಮ ಮಹಿಮ ತ್ರಿ- | ಧಾಮ ರಾಮ
ಘನಶ್ಯಾಮ ಲಲಾಮ ೩

ಪವನಾಂತರಾತ್ಮ ನಿರ್ಮಲಾತ್ಮ | ಪರಮಾತ್ಮ ಜ್ಞಾನಾತ್ಮ
ಅವಿಕಾರ ಅತಿರೋಹಿತ ಭೂತಾತ್ಮ | ಪ್ರೂತಾತ್ಮ ಮಹಾತ್ಮ
ತ್ರಿವಿಧ ಜೀವರಿಗೆ ವಿವಿಧ ಫಲಂಗಳ | ತವಕದಿ ಕೊಟ್ಟವಗವರನು ಪಾಲಿಸು ೪

ಸೃಷ್ಟ್ಯಾದಿಕರ್ತ ತ್ರಿಜಗದ್ಭರ್ತ | ಲೋಕೈಕ ಸಮರ್ಥ
ವೃಷ್ಣೀಶ ವೃಂದಾರಕ ರಿಪುಹರ್ತ | ಮುಕುತರ ಪುರುಷಾರ್ಥ
ಹೃಷ್ಟ ಪುಷ್ಟ ಪರಮೇಷ್ಟಿಜನಕ | ಶಿಷ್ಟೇಷ್ಟ ದ್ರಷ್ಟ ಅನಿವಿಷ್ಟ ನಿವಿಷ್ಟ ೫

ವೇದಾಸ್ತೇಯಾರಿ ಮಂದರಧಾರಿ | ಭೂವರ ನರಹರಿ
ಭೂದಾನವ ಬೇಡಿದ ಜ್ಯಾಪಕುಠಾರಿ | ರಾವಣಕುಲವೈರಿ
ಯಾದವವಂಶ ಮಹೋದಧಿ ಚಂದ್ರಮ | ಸಾದಿತ ತ್ರಿಪುರ ಖಳೋದರ ಪಾಟಿ ೬

ದಯದಿಂದ ನೋಡೊ ದೀನೋದ್ಧಾರ | ಸದ್ಗುಣ ಗಂಭೀರ
ಪ್ರಿಯ ನೀನೆ ಎನಗೆ ಲೋಕೋದ್ಧಾರ | ಸೌಂದರ್ಯ-ಸಾರ
ಹಯಮುಖ ಲೋಕತ್ರಯ ಪತ್ರಯೊಮಯ | ವಯನಗಮ್ಯ
ನಾ ಬಯಸುವೆ ನಿನ್ನ ೭

ಬಹುಮಾತುಗಳ್ಯಾಕೋ ಭವಭಯಹಾರಿ | ಬಿನ್ನೈಸುವೆ ಶೌರಿ
ವಿಹಿತಾ ವಿಹಿತಂಗಳ ನಿನ್ನನು ವಿಾರಿ | ಮಾಳ್ಪನೆ ಕಂಸಾರಿ
ರಹಿತಶಮಲ ಸನ್ಮಹಿತ ಲಕುಮಿ ಭೂ | ಸಹಿತ ಮನದಿ ಸನ್ನಿಹಿತನಾಗಲು ೮

ದಾತ ನೀನಲ್ಲದನ್ಯರನರಿಯೆ | ಕಂಡವರನು ಕರೆಯೆ
ಪ್ರೀತನಾಗೆನ್ನೊಳು ಶ್ರೀಹರಿಯೆ | ಮೂಲೋಕದ ಧೊರಿಯೆ
ಶ್ರೀತರುಣಿಯ ಕೂಡೀ ತನುಸದನಕೆ | ನೀ ತ್ವರಿತದಿ ಜಗನ್ನಾಥ ವಿಠ್ಠಲಾ ೯

೫೪ ರಾಗ ಪೂರ್ವಿ ಆದಿತಾಳ

ಗಿರಿರಾಜ–ಗಿರಿರಾಜ ಪ.

ತರಣಿ ಶತಸುರುಚಿ ತೇಜವೆಂಕಟ ಅ

ಆರನು ಕಾಣದೆ ನಾರಿದೆ ತ್ರಿಜಗ ವಿ | ಹಾರ ಕರಪಿಡಿ ಸಮಿಾರಾಶನ ಶ್ರೀ ೧
ಶ್ರೀಕಮಲಜ ಪಿ-ನಾಕಿ ಮುಖ್ಯರ | ನೇಕರನಾಳ್ದಿ ಲೋಕೈಕ ಶರಣ್ಯ ೨
ಮನವಾಕ್ಕಾಯದಿ ಮನಸಿಜನೈಯ ನಿ | ನ್ನನು ಧೇನಿಸುವಂತನುದಿನಮಾಡ್ಯೆ ೩
ವಂಬಿದ ಭಕ್ತಕುಟುಂಬಿಯೆಂಬು | ದಬುಜಾಂಬಕ ಬಲ್ಲೆ
ಕೃಪಾಂಬುಧಿ ಕರುಣಿಸು ೪
ಸಟಿಯಲ್ಲೀನುಡಿ ದಿಟವೆಂಬೊರು ಬುಧ | ಕಟಕ ಜಗನ್ನಾಥ ವಿಠಲ
ವಿಹಂಗಪ ೫

೫೫ ರಾಗ ಕಾಂಬೋದಿ ಝಂಪೆತಾಳ

ಅಪಮೃತ್ಯು ಪರಿಹರಿಸೊ ಅನಿಲದೇವ
ಕೃಪಣವತ್ಸಲನೆ ಕಾವರಕಾಣೆ ಜಗದೊಳಗೆ ಪ.

ನಿನಗಿನ್ನು ಸಮರಾದ ಅನಿಮಿತ್ತ ಬಾಂಧವರು
ಎನಗಿಲ್ಲ ಆವಾವ ಜನುಮದಲ್ಲಿ
ಅನುದಿನವು ಎಮ್ಮ ನೀನುದಾಸೀನಮಾಡುವುದು
ಅನುಚಿತವು ಜಗದಿ ಸಜ್ಜನ ಶಿಖಾಮಣಿಯೆ ೧

ಕರಣಾಭಿಮಾನಿಗಳು ಕಿಂಕರರು ಮೂಲೋಕ
ಧೊರೆ ನಿನ್ನೊಳಗಿಪ್ಪ ಸರ್ವಕಾಲ
ಪರಿಸರನೆ ಈಭಾಗ್ಯ ಧೊರೆತನಕೆ ಸರಿಯುಂಟೆ
ಗುರುವರನೆ ನೀ ದಯಾಕರನೆಂದು ಬಿನ್ನೈಪೆ ೨

ಭವರೋಗ ಮೋಚಕನೆ ಪವಮಾನ ರಾಯ ನಿ
ನ್ನವರವನು ನಾನು ಮಾಧವನ ಪ್ರಿಯನೆ
ಜವನ ಬಾಧೆಯ ಬಿಡಿಸು ಅವನಿಯೊಳು ಸುಜನರಿಗೆ
ದಿವಿಜಗಣ ಮಧ್ಯದೊಳು ಪ್ರವರ ನೀನಹುದೊ ೩

ಜ್ಞಾನಾಯು ರೂಪಕನು ನೀನಹುದೊ ವಾಣಿ ಪಂ
ಚಾನನಾದ್ಯಮರರಿಗೆ ಪ್ರಾಣದೇವ
ದೀನವತ್ಸಲನೆಂದು ನಾನಿನ್ನ ಮರೆಹೊಕ್ಕೆ
ದಾನವಾರಣ್ಯ ಕೃಶಾನು ಸರ್ವದ ಎನ್ನ ೪

ಸಾಧನ ಶರೀರವಿದು ನೀ ದಯದಿ ಕೊಟ್ಟದ್ದು
ಸಾಧಾರಣವಲ್ಲ ಸಾಧುಪ್ರಿಯನೆ
ವೇದವಾದೋದಿತ ಜಗನ್ನಾಥ ವಿಠ್ಠಲನ
ಪಾದಭಜನೆಯನಿತ್ತು ಮೋದಕೊಡು ಸತತ ೫

೫೬ ರಾಗ ನಾದನಾಮಕ್ರಿಯ ತಾಳ

ಮಂಗಳ ಗುರು ರಾಘವೇಂದ್ರಗೆ, ಜಯ ಪ.
ಮಂಗಳ ಸುಜನಾಂಬುಧಿ ಚಂದ್ರಗೆ ಅ

ಶ್ರೀ ಸುಧೀಂದ್ರ ಕುಮಾರಗೆ ಮಂಗಳ | ಭೂಸುರನುತ ಮಹಿಮಗೆ ಮಂಗಳ |
ದೇಶಿಕ ಕುಲವನಜಾರ್ಕಗೆ ಮಂಗಳ | ಭಾಸುರ ಕೀರ್ತಿಯ ಪಡೆದವಗೆ ೧
ವೃಂದಾವನಭುವಿಯೊಳಗೆ ಸುರದ್ರುಮ | ದಂದದಿ ರಾಜಿಸುವಗೆ ಮಂಗಳ |
ಅಂಧಪಂಗುಮೂಕ ಬಧಿರರ ಈಪ್ಸಿತ | ಸಂದೋಹ ಸಲಿಸುವ ಮುನಿವರಗೆ ೨
ಭೂತ ಪ್ರೇತ ಬೇತಾಳ ಭಯವಿಪಿನ | ವೀತಿಹೋತ್ರನೆನಿಪಗೆ ಮಂಗಳ |
ವಾತಜನುತ ಜಗನ್ನಾಥ ವಿಠ್ಠಲನ | ದೂತರ ಸಲಹುವ ದಾತನಿಗೆ ೩

೫೭ ರಾಗ ಮಧ್ಯಮಾವತಿ ಅಟತಾಳ

ಲಂಬೋದರ ರಕ್ತಾಂಬರ ಧರ ಪ
ಅಂಬರಾಧೀಶ್ವರ ಗೌರಿಕುಮಾರ ಅ.

ಸಿಂಧುರ ವದನಾರವಿಂದ ಸುಂದರ ವಿಘ್ನಾ
ಧಾಂಧಕಾರ ಶರಚ್ಚಂದಿರ ಧೀರ ೧

ವರಪಾಶಾಂಕುಶ ದಂತಧರ ಸುಮೋಹಕ ಶೂರ್ಪ
ಕರಣ ತ್ವಚ್ಚರಣಪಂಕಜಕಾ ನಮಿಪೆ ೨
ಜಗನ್ನಾಥ ವಿಠಲನ ಮಗನಾಗಿ ದ್ವಾಪರ
ಯುಗದಲಿ ಜನಿಸಿದ ಸುಗುಣ ನೀ ಸಲಹೊ ೩

೫೮ ರಾಗ ಶಂಕರಾಭರಣ ಅಟತಾಳ

ಪವಮಾನ, ನಮ್ಮ ಗುರು ಪವಮಾನ ಪ

ಪವಮಾನ ಪಾವನ್ನ ಚರಿತ, ಪದ್ಮ | ಭವನ ಪದಾರ್ಹನೆ ನಿರುತ, ಆಹ | *ಶ್ರವಣವೆ ಮೊದಲಾದ ನವವಿಧ ಭಕುತಿ ಜ್ಞಾ | ನವನಿತ್ತು ಸಲಹೊ ಮೂರವತಾರಾತ್ಮಕ ದೇವ ಅ.

ಪ್ರಾಣಪಾನ ವ್ಯಾನೋದಾನ ಹೇ, ಸ | ಮಾನ ರೂಪಕನೆ ವಿಜ್ಞಾನ, ತತ್ವ
ಮಾನಿಯೆ ಅಮೃತಾಭಿಧಾನ, ಚತು | ರಾನನ ತನಯ ಗೀರ್ವಾಣ, ಆಹ
ಸೇನಾಪತಿ ನಿನ್ನಾಜ್ಞಾನುಸಾರದಲಿಪ್ಪ | ಮಾನವರನು ಕಾಯ್ವ ಮೌನಿ
ಧ್ಯಾನಗಮ್ಯ ೧
ನಾಗಕೂರ್ಮ ದೇವದತ್ತ, ಕೃಕಲ | ಯೋಗಿವರಿಯ ಮುಕ್ತಾಮುಕ್ತ, ಕ್ಲುಪ್ತ
ಭೋಗಂಗಳೀವ ಸುಶಕ್ತ, ತಲೆ | ಬಾಗಿ ಬೇಡುವೆ ಸರ್ವೋದ್ರಿಕ್ತ, ಆಹ
ಹೋಗುತ್ತಲಿದೆ ಹೊತ್ತು ಜಾಗುಮಾಡದೆ ನಿಜ | ಭಾಗವತರೊಳಿಡೊ
ಮೈಗಣ್ಣ ಪದವಾಳ್ದ ೨
ಮೂರು ಕೋಟಿ ರೂಪಧರನೆ ಲೋಕಾ | ಧಾರಕ ಲಾವಣ್ಯಾಕರನೆ, ಸರ್ವ
ಪ್ರೇರಕ ಭಾರತೀವರನೆ, ತ್ರಿಪು | ರಾರಿಗೆ ವಜ್ರಪಂಜರನೆ, ಆಹ
ನೀರಜಜಾಂಡದಿ ಮೂರೇಳು ಸಾವಿರ | ದಾರುನೂರು ಜಪ ಬೇರೆ ಬೇರೆ ಮಾಳ್ಪ ೩
ಮೂಲೇಶನಂಘ್ರಿ ಸರೋಜ, ಭೃಂಗ | ಏಳೇಳು ಲೋಕಾಧಿರಾಜ, ಇಪ್ಪ
ತ್ತೇಳು ರೂಪನೆ ರವಿತೇಜ, ಲೋಕ | ಪಾಲಕರಾಳ್ದ ಮಹೋಜಾ, ಆಹ
ಕಾಳಿರಮಣ ನಿನ್ನ ಕಾಲಿಗೆರಗುವೆ ಕೃ | ಪಾಳು ಭಕ್ತಿಜ್ಞಾನವಾಲಯ
ಕರುಣಿಸೊ ೪

---

*ಶ್ರವಣಾದಿ ಭಕ್ತಿ ಜ್ಞಾನವನಿತ್ತು ಸಲಹೊ ಮೂ
ರವತಾರಾತ್ಮಕ ತತ್ವ ದಿವಿಜ ನಿಯಾಮಕ (ಪಾ)

ಶ್ರೀವಲ್ಲಭಗೆ ಪ್ರತಿಬಿಂಬ-ನಾಗಿ | ಜೀವವೇದ ಕಾಲಸ್ತಂಭ-ಗತ
ಆವಾಗ ಹರಿ ರೂಪಕಾಂಬ, ಶಕ್ತ | ನೀನೊಬ್ಬನಹುದೊ ನಾನೆಂಬ ಆಹ
ದೇವತೆಗಳಿಗುಂಟೆ ಈ ವಿಭವ ಜಗ | ಜ್ಜೀವ ದಯಾಶೀಲ ನಾವಂದಿಪೆ ನಿತ್ಯ ೫
ಆಖಣಾಶ್ಮ ಸಮಚರಣ, ಪದ್ಮ | ಲೇಖರ ಮಸ್ತಕಾಭರಣ, ಕಲ್ಪ
ಶಾಖೆಯಂತೆ ಅತಿ ಕರುಣದಿಂದ | ಈ ಖಂಡದೊಳು ಮಿಥ್ಯಾವರಣ, ಆಹ
ನೀ ಖಂಡಿಸಿದೆ ದಂಡ ಮೇಖಲ ಭೂಷಣ | ಆಖುವಾಹನ ಪಿತ
ಅಖಂಡಲಾರ್ಚಿತ ೬
ದಕ್ಷಿಣಾಕ್ಷಿಗತವತ್ಸ, ರೂಪ | ದಕ್ಷನಹುದೊ ಪರಮೋತ್ಸ-ಚಾರು
ತ್ರ್ಯಕ್ಷಾದಿ ಸುರರೊಳಧ್ಯಕ್ಷ, ಸರ್ವ | ವೇಕ್ಷ ಪರ್ಚಿತನೇ ಸ್ವೇಚ್ಛಾ, ಆಹ
ಮೋಕ್ಷಾದಿದ್ವಾತ್ರಿಂಶ ಲಕ್ಷಣ ಪುರುಷ ನಿ | ರೀಕ್ಷಿಸಿ ಕರುಣದಿ ರಕ್ಷಿಸು
ಎನ್ನನು ೭
ಅದಿಭೂತ ಆಧ್ಯಾತ್ಮಗತನೆ, ವಿಮಲ | ಆದಿದೈವರೊಳು ಪ್ರವಿತತನೆ, ಕಲಿ
ಹೃದಯ ವಿಭೇದನರತನೆ, ಎನ್ನ | ವದನದಿ ನೆಲೆಸೊ ಮಾರುತನೆ, ಆಹ
ಬದರಿಕಾಶ್ರಮದೊಳು ಹದಿನಾರು ಸಾವಿರ | ಸುದತೇರ ಕಾಯ್ದ ನಾರದ
ಮುನಿ ನನ್ನುತ ೮
ಮಾತರಿಶ್ವ ಮಹಾಮಹಿಮ, ಸರ್ವ | ಚೇತನ ಹೃದ್ಗತ ಹನುಮ, ಭೀಮ
ಭೂತಳದೊಳು ಮಧ್ವನಾಮ-ದಿಂದ | ಜಾತನಾಗಿ ಜಿತಕಾಮ, ಆಹ
ಆ ತಿಪ್ಪಣಾದಿ ವಿಖ್ಯಾತ ಮಾಯ್ಗಳ ಗೆದ್ದ | ಸೀತಾರಮಣ ಜಗನ್ನಾಥ
ವಿಠ್ಠಲ ದೂತ ೯

೫೯ ರಾಗ ತೋಡಿ ಆಟತಾಳ

ತುತಿಸಬಲ್ಲೆನೆ ನಾ ನಿನ್ನ ವೆಂಕಟರನ್ನ ಪ.
ತುತಿಸಬಲ್ಲೆನೆ ಲಕ್ಷ್ಮೀಪತಿ ನಿನ್ನ ಬ್ರಹ್ಮ ಪಾ
ರ್ವತಿ ಪತಿಗಳ ಪಡೆದತುಳ ಮಹಿಮೆಗಳ ಅ

ನಮಿಪ ಜನರ ಕಲ್ಪದ್ರುಮ ದುಷ್ಟ ದಾನವ | ದಮನ ದಿವಿಜ ಕುಲೋತ್ತಮ ಲಕ್ಷ್ಮೀಪವನಾದಿ | ಸುಮನಸಾರ್ಚಿತ ಪಾದ ಕಮಲಯುಗ್ಮನೆ ಅನು | ಪಮ ರೂಪಲಾವಣ್ಯ ಕಮನೀಯಕಾಯ ಹೃ | ತ್ತಿಮಿರಭಾಸ್ಕರ ಶ್ರೀ ಭೂರಮಣಸರ್ವಗ ಸದಾ |

ಗಮವೇದ್ಯ ವೇದವ್ಯಾಸ–ಕಪಿಲದತ್ತ
ಕುಮುದಾಪ್ತಕೋಟಿಭಾಸ–ತ್ವದ್ಭೃತ್ಯರ
ಸಮುದಾಯಕೀಯೊ ಲೇಸ–ಆನತಬಂಧು
ಸುಮುಖ ಸುಲಭನೆಂದಾನಮಿಪೆ ಎನ್ನರಸ ೧

ಘನಮಹಿಮನೆ ಬೃಂದಾವನವಾಸಿ ಸ್ವಪ್ರಿಯೋ | ಜನ ವಿವರ್ಜಿತ ಗೋವರ್ಧನಧಾರಿ ಗೋ ಗೋಪಿ | ಜನ ಮನೋರಂಜನ ಜನಕಜಾರಮಣ ಪೂ | ತನಿ ಪ್ರಾಣಾಂತಕ ವೇದವಿನುತ ಶ್ರೀವತ್ಸಲಾಂ | ಛನ ವಕ್ಷ ಕೌಸ್ತುಭ ಮಣಿ ವೈಜಯಂತಿ ಸ |

ದ್ವನಮಾಲಾನ್ವಿತ–ಕಂಧರ–ಸತತ ನಿಷ್ಕಿಂ
ಚನ ಭಕ್ತಜನಮಂದಾರ–ಸತ್ಕಲ್ಯಾಣ
ಗುಣ ಜ್ಞಾನಾತ್ಮಕಶರೀರ–ವಂದಿಸುವೆ ಮ
ನ್ಮನದೊಳು ನೆಲೆಸು ಕರುಣಪಾರಾವಾರ ೨

ಕಲಿಮುಖ ದೈತ್ಯ ಗಂಟಲಗಾಣ ಗುರುತಮ | ಬಲಿಬಂಧಮೋಚಕ ಸುಲಭ ಚಿತ್ಸುಖದಾಯಿ | ಫಲಚತುಷ್ಟಯ ನಾಮ ಫಲಸಾರಭೋಕ್ತೃಶಂ | ಫಲಿಪುರಿವಾಸಿ ಬೆಂಬಲನಾಗಿ ಭಕ್ತರ | ಸಲಹುವ ಕರುಣಿ ಬಾಂಬೊಳೆಯ ಜನಕ ಲಕ್ಷ್ಮಿ |

ನಿಲಯನಿರ್ಗತ ದುರಿತ–ಮನ್ಮನದ ಚಂ
ಚಲವ ಬಿಡಿಸೊ ನಿರುತ–ಬೇಡಿಕೊಂಬೆ
ತಲೆಬಾಗಿ ಸರ್ವಜಿತ–ನೀನಹುದೆಂದು
ತಿಳಿಸುತೀವರದಿ ಮುಪ್ಪೊಳಲುರಿಗನ ತಾತ ೩

ಉದಿತ ಭಾಸ್ಕರನಂತೆ ಸುದತೇರಿಂದೊಡಗೂಡಿ | ಉದರನಾಮಕ ನೀನು ಉದರದೊಳಿದ್ದನ್ನ | ಉದಕಗಳಿಗೆ ನಿತ್ಯಾಸ್ಪದನಾಗಿ ಜೀವರ | ಹೃದಯದೊಳಿರುತಿಪ್ಪೆ ಸದಸದ್ವಿಲಕ್ಷಣ | ವಿಧಿಭವಶಕ್ರಾದಿ ತ್ರಿದಶವಂದಿತ ಪಾದ |

ಬದಿಗನಾಗಿರಲು ಪಾಪ–ಕರ್ಮಗಳು ಬಂ
ದೊದಗುವುವೇನೊ ಶ್ರೀಪ–ಪರಿಹರಿಸೊ ನೀ
ಬುಧಜನರಂತಸ್ತಾಪ–ಕಳೆದು ನಿತ್ಯ
ಬಿದುರದಂದದಿ ಪೊಳೆ ದೋಷನಿರ್ಲೇಪ ೪

ಕವಿಭಿರೀಡಿತ ಪುಣ್ಯ ಶ್ರವಣ ಕೀರ್ತನ ಮತ್ಸ್ಯಾ | ದ್ಯವತಾರಂತ ರ್ಯಾಮಿ ಪ್ರವಿವಿಕ್ತಭುಗ್ವಿಭು | ಭುವನನಿಧಿಯ ಪೆತ್ತ ಸವನತ್ರಯಾಹ್ವಯ | ಶಿವರೂಪಿ ಶಿವದಭೂರ್ಭುವ ಸ್ವಸ್ಥ ಸ್ವವಶ ಭಾ | ರ್ಗವ ನಿನ್ನೊಳಿಪ್ಪ ದಾನವನ ಸಂಹರಿಸುವ |

ನೆವನದಿ ದಾಶರಥಿ ಸಂಗಡ ಯುದ್ಧ
ತವಕದಿ ಮಾಡಿ ಭೀತಿ ಬಟ್ಟವನಂತೆ
ಅವನಿಗೆ ತೋರ್ದ ರೀತಿ, ವರ್ಣಿಸಲಿನ್ನು
ಪವನ ಮುಖಾದ್ಯರಿಗವಶ ನಿನ್ನಯ ಖ್ಯಾತಿ ೫

ಗತಶೋಕ ಗಾಯಿತ್ರಿ ಪ್ರತಿಪಾದ್ಯ ತತ್ವಾಧಿ | ಪತಿಗಳೆನಿಸುವ ದೇವತೆ ಗಳೊಳಿದ್ದು ಮಾ | ರುತನಿಂದ ಒಡಗೂಡಿ ಪ್ರತಿದೇಹದಲಿ ಯೋ | ಗ್ಯತೆಯ ನರಿತು ಕರ್ಮಗತಿಗಳ ನೀವೆ ಸಾಂ | ಪ್ರತ ಬೇಡಿಕೊಂಬೆ ಆನತರ ಸಂತೈಸೆಂದು |

ಪ್ರಥಮಾಂಗ ಪ್ರಿಯಸತ್ತಮ-ಸೌಭಾಗ್ಯ ಸಂ
ಭೃತಸಾರ ಸರ್ವೋತ್ತಮ- ನೀನೇ ಪಾಂಡು
ಸುತರಾದ ಧರ್ಮ ಭೀಮ-ಪಾರ್ಥರ ಕಾಯ್ದೆ
ಪ್ರತಿಕಾಣೆ ನಿನಗೆ ಸಂತತ ಪರಂಧಾಮಾ ೬

ಆಪದ್ಬಾಂಧವ ಬಹುರೂಪ ರುಗ್ಮಿಣೀಶ | ತಾಪಸಜನಹೃತ್ತಾಪಾಪಹರ ಧರ್ಮ | ಸ್ಥಾಪಕ ಸ್ಥವಿರ ನಿರ್ಲೇಪ ಗುಣತ್ರಯ | ವ್ಯಾಪಕ ಸುಖಧರ್ಮ ಪ್ರಾಪಕ ಸುಜನ ಲೋ | ಕೋಪಕಾರಕ ಧರ್ಮಯೂಪ ಊರ್ಧ್ವಗನಿರ್ಗ |

ಣೋಪಾಸಕರ ಸಲಹ–ಲೋಸುಗದಿ ಸ
ಮಾಪದಲ್ಲಿರು ಶ್ರೀಸಹ–ದುರ್ಜನರ ಸ
ಲ್ಲಾಪದಿ ಬಹ ಕಲಹ–ಮಾಣಿಸೊ ಭವ
ಕೂಪಾರ ನಾವಿಕ ಭೂಪತಿ ವರಹ ೭

ಬಿಸಜಸಂಭವನ ನಿರ್ಮಿಸಿ ನಾಭಿ ಕಮಲದಿ | ಸ್ವಶರೀರದೊಳು ಸುಮನಸರ ಪಡೆದು ನಿನ್ನ | ಪೆಸರಿಂಟ್ಟು ಅವರವರೊಶನಾದೋಪಾದಿ ತೋ | ರಿಸಿದೆ ನೀ ಸ್ವತಂತ್ರ ಅಸಮನೆನಿಸಿಕೊಂಡು | ಬಸುರೊಳಗಿಟ್ಟು ಪೊಂಬಸುರಾದಿ ಸುರರ ಪಾ

ಲಿಸುವೆ ನೀ ಪ್ರತಿಕಲ್ಪದಿ ನರಕಸ್ವರ್ಗ
ವಸುಮತಿಯಲೋಕದಿ ವಾಸಿಸುವ ರ
ಕ್ಕಸರ ಅಂಧಂತಮದಿ-ದಣಿಸುತಿಪ್ಪೆ
ಪ್ರಸವಿತನಾಮ ವಂದಿಸುವೆ ಪ್ರಮೋದಿ ೮

ಪಣೆಗಣ್ಣ ನ್ವರದಿಂನಗ್ರಣಿಯಾದ ದುಷ್ಟ ರಾ| ವಣನ ಬಾಹುಬಲ ಗಣಿಸದೆ ನಿಶಿತವಮಾ | ರ್ಗಣದಿ ಸದೆದು ವಿಭೀಷಣಗೆ ನೀ ಲಂಕಾ ಪ | ಟ್ಟಣ ಭೋಗ ತತ್ಕಾಲ ಉಣಲಿತ್ತೆ ಭಕುತಗೆ | ಪ್ರಣತಕಾಮದನೆಂಬ ಗುಣ ನಿನ್ನಲ್ಲಿದ್ದ ಕಾ |

ರಣದಿ ಪ್ರಾರ್ಥಿಸುವೆ ನಿನ್ನ-ದಾಸರೊಳು
ಗಣಿಸೊ ನೀದಯದಿ ಎನ್ನ ತಪ್ಪುಗಳನು
ಎಣಿಸಲಾಗದು ಪ್ರಸನ್ನ-ಪಾಲಕನೆ ಕುಂ
ಭಿಣಿಸುರರನು ಕಾಯೊ ಕ್ಷಣಶಃ ಲಕ್ಷ್ಮ್ರಣನಣ್ಣ ೯

ಶಫರಕೂರ್ಮ ಕ್ರೋಢವಪುಷ ಹಿರಣ್ಯಕ | ಶಿಪುವಿನ ಸೀಳ್ದಿ ಕಾಶ್ಯಪಿ ಯಾಚಕನೆ ದುಷ್ಟ | ನೃಪರ ಸಂಹರಿಸಿದೆ ಕಪಿವರಪೂಜಿತ | ದ್ರುಪದಾತ್ಮಜೆಯ ಕಾಯ್ದೆ ತ್ರಿಪುರಾರಿ ಕಲಿಮುಖ | ರುಪಟಳ ಬಿಡಿಸಿದೆ ಕೃಪಣವತ್ಸಲ ಕಲ್ಕಿ |

ಅಪವರ್ಗಪ್ರದ ಅಮಿತ-ರೂಪಾತ್ಮಕ
ಸುಫಲ ಚಿತ್ಸುಖಭರಿತ ತ್ರೈಲೋಕ್ಯಾದಿ
ಪ್ರಪಿತಾಮಹನೆನಿರುತ-ಪ್ರಾರ್ಥಿಸುವೆ ನಿ
ನ್ನಪರೋಕ್ಷವಿತ್ತು ಪಾಲಿಪುದೆಮ್ಮ ಸ್ವರತ ೧೦

ವಟಪತ್ರಶಯನ ವೇಂಕಟಗಿರಿನಿಲಯ ನಿ | ಷ್ಕುಟಿಲ ದುರ್ವಿಷಯ ಲಂಪಟರ ಸದೆದು ನಿನ್ನ | ಭಟಜನರಿಗೆ ಧರ್ಮಘಟಕನಾಗುವೆ ನಿತ್ಯ | ವಟ ರೂಪಿಯಟ ಪಾದಾಂಗುಟದಿಂದಬ್ಜ ಜಾಂಡ | ಕಟಹಭೇದಿಸಿ ದೇವತಟನಿಯ ಪಡೆಯೆ ಧೂ |

ಜಟಿ ತಲೆಯೊಳು ಧರಿಸಿ-ಸಾಸಿರನಾಮ
ಪಠಿಸುತ್ತ ಸತಿವೆರೆಸಿ-ಕುಣಿದನೆಂದು
ತ್ರ್ಯಕಟದಿ ಕೈಗಳ ಬಾರಿಸಿ- ಜಗನ್ನಾಥ
ವಿಠಲ ಸರ್ವೋತ್ತಮ ದಿಟವೆಂದುದ್ಘಟಿಸಿ ೧೧

೬೦ ರಾಗ ಆನಂದಭೈರವಿ ತಾಳ

ಶೇಷಪರಿಯಂಕ ಶಯನ, ವಿಷಯದಭಿ | ಲಾಷೆ ಬಿಡಿಸೆನ್ನ ಕಾಯೊ ಪ
ಧನವೋದನಗಳ ಬಯಸಿ, ನೀಚೋಚ್ಚ | ರೆನದೆ ಮನೆಮನೆ ತಿರುಗಿದೆ
ಅನಿಮಿಷೋತ್ತಂಸ ನಿನ್ನ, ಪಾದವೊಂ | ದಿನ ಭಜಿಸಿದವನಲ್ಲವೊ ೧
ಗುರುಹಿರಿಯರನು ನಿಂದಿಪ, ನೀಚರನು | ಸರಿಸಿ ಅವರನು ನುತಿಸಿದೆ
ಪೊರೆಯಲೋಸುಗ ಉದರವ, ಜನರಿಂದ | ಹರಿದಾಸನೆನಿಸಿಕೊಂಡೆ ೨
ಉಪರಾಗಪರ್ವಗಳಲಿ, ಸ್ನಾನಜಪ | ತಪ ಅನುಷ್ಠಾನ ಜರಿದು
ನೃಪರ ಮಂದಿರವ ಕಾಯ್ದು ಧನತಂದು | ಉಪಜೀವಿಸಿದೆನೊ ದೇವ ೩
ಭಗವಂತ ನಿನ್ನ ಗುಣವ, ಭಜಿಸದಲೆ | ಭಗವತಿಯರವಯವಗಳ
ಸೊಗಸಿನಿಂದಲಿ ವರ್ಣಿಸಿ, ಎನ್ನ ನಾ | ಲಿಗೆ ಬರಡು ಮಾಡಿಕೊಂಡೆ ೪
ವೇದಶಾಸ್ತ್ರವನೋದದೆ, ಕು–ಶಾಸ್ತ್ರ | ವೋದಿ ಪಂಡಿತನೆನಿಸಿದೆ
ಮೋದತೀರ್ಥರಲಿ ಭಕುತಿ, ಮಾಡದಲೆ | ವಾದಿಸಿದೆ ಕೀರ್ತಿಗಾಗಿ ೫
ವೈರಾಗ್ಯ ಪುಟ್ಟಲಿಲ್ಲ, ಘೋರ ಸಂ | ಸಾರದೊಳು ಮಗ್ನನಾದೆ
ಸೂರಿಗಳ ಮಧ್ಯದಲ್ಲಿ, ಬುಧನಂತೆ | ತೋರಿದೆನು ನೋಳ್ಪಜನಕೆ ೬
ನಾ ಮಾಡಿದಪರಾಧವ ಎಣಿಸುವಡೆ | ತಾಮರಸಭವ ಗಸದಳ
ಸ್ವಾಮಿ ಎನಗೇನು ಗತಿಯೋ, ಭಾರಾದೆ | ಈ ಮಹಿಗೆ ಪ್ರತಿದಿನದಲಿ ೭
ಸರ್ವಪ್ರಕಾರದಲ್ಲಿ, ಹಗಲಿರುಳು | ದುರ್ವಿಷಯ ಕೊಳಗಾದೆನೊ
ಶರ್ವಾದಿವಂದ್ಯವೊಲಿದು, ನೀನೇವೆ | ಉರ್ವಿಯೊಳು ಸಲಹಬೇಕು ೮
ಭೂತಸಂಬಂಧದಿಂದ, ಬಹುವಿಧದ | ಪಾತಕವೆ ಸಮನಿಸಿದವೊ
ದಾತನೀ ಕಡೆಗೈದಿಸೊ, ಗುರು ಜಗ | ನ್ನಾಥ ವಿಠ್ಠಲ ಕೃಪಾಳೋ ೯

೬೧ ರಾಗ ಬೇಹಾಗ್ ಆದಿತಾಳ

ರೋಗಹರನೆ ಕೃಪಾಸಾಗರ, ಶ್ರೀಗುರು
ರಾಘವೇಂದ್ರ ಪರಿಪಾಲಿಸೋ ಪ
ಸಂತತ ದುರ್ಮತ ಧ್ವಾಂತ ದಿವಾಕರ
ಸಂತವಿನುತ ಮಾತ ಲಾಲಿಸೋ ೧

ಪಾವನಗಾತ್ರ ದೇವವರನೆ ತವ
ಸೇವಕಜನರೊಳಗಾಡಿಸೋ ೨
ಘನ್ನಮಹಿಮ ಜಗನ್ನಾಥವಿಠ್ಠಲ ಪ್ರಿಯ
ನಿನ್ನಾರಾಧನೆ ಮಾಡಿಸೊ ೩

೬೨ ರಾಗ ಕಾಂಬೋದಿ ಝಂಪೆತಾಳ

ಅತಿ ಶೋಭಿಸುತಿದೆ ಶ್ರೀಪತಿವಾಹನ ಪ.
ಚತುರದಶಲೋಕದಲಿ ಅಪ್ರತಿವಾಹನ ಅ.
ವಿನತೆ ಕಶ್ಯಪಮುನಿಗೆ ತನಯನೆನಿಸಿದವಾಹನ
ಅನುಜರನು ಕದ್ದೊಯ್ದ ಆಢ್ಯವಾಹನ
ವನದಿ ಮಧ್ಯದಿ ನಾವಿಕರ ಭಕ್ಷಿಸಿದವಾಹನ
ಜನಕನಾಜ್ಞದಿ ಕೂರ್ಮಗಜರ ನುಂಗಿದವಾಹನ ೧
ಕುಲಿಶಪಾಣಿಯ ಕೂಡೆ ಕಲಹಮಾಡಿದವಾಹನ
ಒಳಹೊಕ್ಕು ಪೀಯೂಷ ತಂದವಾಹನ
ಮಲತಾಯಿ ಮಕ್ಕಳನು ಮರುಳುಗೊಳಿಸಿದವಾಹನ
ಬಲಿರಾಯವ್ಯೆದ ಮುಕುಟವ ತಂದವಾಹನ ೨
ಕಾಲನಾಮಕನಾಗೆ ಕಮಲಭವನಲಿ ಜನಿಸಿ
ಕಾಲಾತ್ಮ ಹರಿಯ ಸೇವಿಪವಾಹನ
ಕಾಳಗದಿ ಕವಿವರರ ಕಟ್ಟುಬಿಡಿಸಿದವಾಹನ
ವಾಲಖಿಲ್ಯರ ಪಿಡಿದವರವಾಹನ ೩
ಕೂಪಾರದೆಡೆಗೆ ಮಂದರವ್ಯೆದವಾಹನ ನಿಜ
ರೂಪದಿಂದಲಿ ಸೇವೆಗೈದವಾಹನ
ಆ ಪಿತೃಗಳಿಗಮೃತ ಪ್ರಾಪ್ತಿಸಿದವಾಹನ
ಸೌಪರ್ಣಿಪತಿಯೆಂಬ ಹೊಂಬಣ್ಣವಾಹನ ೪
ಪನ್ನಗಾಶನವಾಹನ ಪತಿತಪಾವನವಾಹನ
ಸನ್ನುತಿಪ ಭಕ್ತರನು ಸಲಹುವವಾಹನ
ಪನ್ನಗಾದ್ರಿನಿವಾಸ ಜಗನ್ನಾಥವಿಠ್ಠಲಗೆ
ಉನ್ನತಪ್ರಿಯವಾದ ಗರುಡವಾಹನ ೫

೪೫ ರಾಗ ಶಂಕರಾಭರಣ ಅಟತಾಳ

ಪಾಲಿಸೊ ನರಸಿಂಹ ಪಾಲಿಸೊ ಪ.

ಪಾಲಿಸೊ ಪರಮ ಪಾವನ್ನ, ಕಮ। ಲಾಲಯ ನಂಬಿದೆ ನಿನ್ನ, ಆಹ। ಬಾಲೇಂದು ಕೋಟಿಯ ಸೋಲಿಪ ನಖತೇಜ। ಮೂರ್ಲೋಕದರಸನೆ ಪಾಲಯ ಬಿಡದಲೆ ಅ.

ಹಿಂದೆ ಪ್ರಹ್ಲಾದನ ಮೊರೆಯ ಕೇಳಿ। ಬಂದು ಕಾಯ್ದಿಯೊ ಭಕ್ತಪ್ರಿಯ ಸಖ। ಸಂದೋಹ ಮೂರುತಿ ಆಯ,-ತಾಕ್ಷ। ಎಂದೆಂದು ಬಿಡದಿರು ಕೈಯ-ಆಹ।

ವೃಂದಾರಕೇಂದ್ರರ ಬಂದ ದುರಿತಗಳ
ಹಿಂದೆ ಮಾಡಿ ಕಾಯ್ದ ಇಂದಿರಾರಮಣನೆ ೧

ಹರಣದಲ್ಲಿ ನಿನ್ನ ರೂಪ, ತೋರಿ। ಪರಿಹರಿಸೊ ಎನ್ನ ತಾಪ, ದೂರ। ಇರದಿರೊ ಹರಿ ಸಪ್ತದ್ವೀಪಾ-ಧಿಪ। ಸಿರಿಪತಿ ಭಕ್ತಸಲ್ಲಾಪ, ಆಹ।

ಕರಣಶುದ್ಧನ ಮಾಡಿಕರೆಯೊ ನಿನ್ನ ಬಳಿಗೆ
ನರಕಂಠೀರವ ನಿನ್ನ ಚರಣ ಆಶ್ರೈಸಿದೆ ೨

ಶರಣಪಾಲಕನೆಂಬೊ ಬಿರುದು, ಕೇಳಿ। ತ್ವರಿತದಿ ಬಂದೆನೊ ಅರಿದು, ಇನ್ನು। ಪರಿಪರಿ ಅಪರಾಧ ಮರೆದು ಪರ। ತರನೆ ನೋಡೆನ್ನ ಕಣ್ ತೆರೆದು, ಆಹ।

ಮರಣ ಜನನಗಳ ತಂದು ಬಿಸುಟು ನಿನ್ನ
ಶರಣರ ಸಂಗದಲ್ಲಿರಿಸಿ ಉದ್ಧರಿಸೆನ್ನ ೩

ಸಂಸಾರ ಸಾಗರದೊಳಗೆ, ಎನ್ನ। ಹಿಂಸೆಗೊಳಿಸುವರೆ ಹೀಗೆ, ಎಲೊ। ಕಂಸಾರಿ ಬಾಗೆ ಅನ್ಯರಿಗೆ, ಮತ್ತೆ। ಸಂಶಯವಿಲ್ಲೀ ಮಾತಿಗೆ, ಆಹ।

ಹಂಸಡಿಬಿಕರನ್ನು ಧ್ವಂಸಮಾಡಿದ ಶೌರಿ
ಶಿಂಶುಮಾರಮೂರ್ತಿ ದಿವಸ ದಿವಸದಲ್ಲಿ ೪

ಸಿರಿಬೊಮ್ಮ ಭವ ಶಕ್ರಸುರರ, ಕೈಯ। ನಿರುತ ಸ್ತುತಿಸಿಕೊಂಬ ಧೀರ, ಶುಭ। ಪರಿಪೂರ್ಣಗುಣ ಪಾರಾವಾರ, ಪೊರೆ। ವರ ಕಾಣೆನಂತ ಸುಂದರ, ಆಹ।

ಸ್ಮರನ ಕಾಂತಿಯ ನಿರಾಕರಿಸುವ ತೇಜನೆ
ಎರವು ಮಾಡದೆ ಹೃತ್ಸರಸಿಜದೊಳು ತೋರಿ ೫

ಮೊದಲು ಮತ್ಸ್ಯಾವತಾರದಿ, ವೇದ । ವಿಧಿಗೆ ತಂದಿತ್ತೆ ವಿನೋದಿ, ಆ ಶ । ರಧಿಯೊಳು ಸುರರಿಗೋಸ್ಕರದಿ, ನೀನು । ಸುಧೆಯ ಸಾಧಿಸಿ ಉಣಿಸಿದಿ, ಆಹ ।

ಅದುಭುತ ಭೂಮಿಯ ತೆಗೆದೊಯ್ದನ ಕೊಂದು
ಮುದದಿ ಹಿರಣ್ಯಕನುದರ ಬಗೆದ ಧೀರ ೬

ಬಲಿಯಮನೆಗೆ ಪೋಗಿ ದಾನ, ಬೇಡಿ । ತುಳಿದೆ ಪಾತಾಳಕ್ಕೆ ಅವನ, ಪೆತ್ತ । ವಳ ಶಿರತರಿದ ಪ್ರವೀಣ, ನಿನ್ನ । ಛಲಕೆಣೆಗಾಣೆ ರಾವಣನ, ಆಹ ।

ತಲೆಯ ನಿಳುಹಿ ಯದುಕುಲದಿ ಜನಿಸಿ ಮತ್ತೆ
ಲಲನೇರ ಪತಿವ್ರತವಳಿದ ಅಶ್ವಾರೂಢ ೭

ಮಾನಸಪೂಜೆಯ ದಯದಿ, ಇತ್ತು । ಶ್ರೀನಾಥ ಕಳೆ ಭವವ್ಯಾಧಿ, ಕಾಯೊ । ಅನಾಥಬಂಧು ಸುಮೋದಿ, ಚತು । ರಾನನ ಪಿತ ಕೃಪಾಂಬೋಧಿ, ಆಹ ।

ನಾನೊಬ್ಬರನರಿಯೆ ಗಾನ ವಿನೋದಿಯೆ
ಏನೇನು ಮಾಡುವ ಸಾಧನ ನಿನ್ನದು ೮

ನಿನ್ನ ಸಂಕಲ್ಪವಲ್ಲದೆ, ಇನ್ನು । ಅನ್ಯಥಾವಾಗಬಲ್ಲುದೆ, ಇದು । ಚೆನ್ನಾಗಿ ನಾ ತಿಳಿಯದೆ, ಮಂದ । ಮಾನವನಾಗಿ ಬಾಳಿದೆ, ಆಹ ।

ಎನ್ನಪರಾಧವ ಇನ್ನು ನೀ ನೋಡದೆ
ಮನ್ನಿಸಿ ದಯದಿ ಜಗನ್ನಾಥ ವಿಠ್ಠಲ ೯

೬೪ ರಾಗ ಮುಖಾರಿ ಅಟತಾಳ

ಕೃಷ್ಣರಾಯ ನಿನ್ನ ಕೃತ್ಯಗಳನು ನಾನು । ಸೃಷ್ಟಿಯೊಳಗಿನ್ನು ಬೀರಲ್ಯಾ ಪ
ಶಿಷ್ಟರೊಳಗಿಟ್ಟು ಚಿರಕಾಲದಲಿ ಎನ್ನ । ಕಷ್ಟವ ಬಿಡಿಸದೆ ಇದ್ದೀಯ ಅ
ಜನನ ಮರಣ ಶೂನ್ಯನೆನಿಸಿಕೊಂಡು ಗೋಪಿ । ತನಯನಾಗಿದ್ದದ್ದು ಹೇಳಲ್ಯಾ
ಸನಕಾದಿ ಸೇವ್ಯಮಾನನೆ ಇಂದು ತುರುಗಳ । ವನದಲ್ಲಿ ಕಾದದ್ದು ಹೇಳಲ್ಯಾ ೧
ದನುಜ ಭಂಜನನಾದ ಘನಮಹಿಮನೆ ಮಾನ । ಧನಿಗಂಜಿ ಓಡಿದ್ದು ಹೇಳಲ್ಯಾ
ಎಣೆಯಿಲ್ಲದ ಸತ್ವರಣದೊಳು ಪಾರ್ಥಗೆ । ಅಣುಗನಾಗಿದ್ದದ್ದು ಹೇಳಲ್ಯಾ ೨
ಶ್ರುತಿತತಿಗಳಭೇದ್ಯ ಪ್ರತಿಯಿಲ್ಲದ ದೈವ । ಸತಿ ನಿನ್ನ ಅಗಲಿದ್ದು ಹೇಳಲ್ಯಾ
ಶತಮೋದ ವಂದ್ಯನೆ ಸುತರಪೇಕ್ಷಿಸಿ ಭೂತ । ಪತಿಯನ್ನು ಬೇಡಿದ್ದು ಹೇಳಲ್ಯಾ ೩

ಸತತ ತೃಪ್ತನಾಗಿ ಕ್ಷಿತಿಯೊಳು ಬೆಣ್ಣೆಯ । ಮಿತಿಮೀರಿ ಮೆದ್ದದ್ದು ಹೇಳಲ್ಯಾ
ಕೃತಿದೇವಿರಮಣನೆ ಅತಿಪ್ರೀತಿಲಿ ಗೋಪ । ಸತಿಯರ ಕೂಡಿದ್ದು ಹೇಳಲ್ಯಾ ೪
ಭೂತಳದೊಳಗೆ ದೇವತೆಗಳೊಡನೆ ಈ । ರೀತಿ ಚರಿಸಿದ್ದು ಹೇಳಲ್ಯಾ
ಭೀತಿರಹಿತ ಜಗನ್ನಾಥವಿಠಲನೆ ಅ । ದ್ಭುತ ಮಹಿಮನೆಂದು ವೇಳಲ್ಯಾ ೫

೬೫ ರಾಗ ಶಂಕರಾಭರಣ ಅಟತಾಳ

ಭಾರತಿ ಮಜ್ಜನನೀ-ಭಾರತಿ ಪ

ಭಾರತಿ ಭರತನರ್ಧಾಂಗಿ–ಕರು । ಣಾರಸ ಪೂರಿತ ಪಾಂಗಿ, ಆಹ । ತಾರ್ಕ್ಷ್ಯ ಪ್ರಮುಖ ವೈಕಾರಿಕ ದೇವ ಗ । ಣಾರಾಧಿತಾಂಘ್ರಿ ಸರೋರುಹೆ ಪಾಲಿಸು ಅ

ವಿದ್ಯುನ್ನಾಮಕೆ ವಿಧಿಜಾತೆ, ಕೃತಿ । ಪ್ರದ್ಯುಮ್ನ ಜಠರಸಂಭೂತೆ, ಅನ । ವದ್ಯ ಸದ್ಗುಣ ಗಣವ್ರಾತೆ, ಬ್ರಹ್ಮ । ವಿದ್ಯವ ಪಾಲಿಸು ಮಾತೆ, ಆಹ ।

ಬುಧ್ಯಾಭಿಮಾನಿಯೆ ಸದ್ಯೋಜಾತನ ಪೆತ್ತ
ಶ್ರದ್ಧಾನಾಮಕೆ ಅನಿರುದ್ಧನ್ನ ತೋರಿಸೆ ೧

ಕಾಳಿ ದ್ರೌಪದಿ ಶಿವಕನ್ಯಾ, ಮನ್ಮ । ನಾಲಯದಲ್ಲಿ ನಿಲ್ಲೆ ಧನ್ಯ, ಪ್ರಾಜ್ಞ ಮೌಳಿ ಮಣಿಯೆ ನಿತ್ಯ ಎನ್ನ ಹರಿ । ಪಾಲಿಸೆ ನಂಬಿದೆ ನಿನ್ನ, ಆಹ ।

ಶೈಲಜಾ ಶ್ಯಾಮಲ ಪೌಲೋಮಿ ಉಷೇರಿಂದ
ವಾಲಗ ಕೈಕೊಂಬ ಕಾಲಾಭಿಮಾನಿಯೆ ೨

ವಂದಿಪೆ ನನಗಿಂದ್ರ ಸೇನಾ–ನಳ । ನಂದಿನಿ ಕರುಣಿಸು ಜ್ಞಾನ, ಶ್ರೀ ಮು । ಕುಂದನ ಪರಮ ಕಲ್ಯಾಣಿ, ಗುಣ । ಸಿಂಧುವಿನೊಳಗೆ ಪರೀಣ, ಆಹ ।

ದಂಧದಿ ಚರಿಸುವ ಗಂಧವಾಹನ ರಾಣಿ
ಸಿಂಧೂರ ಗಮನೆ ಪುರಂದರಾರಾಧಿತೆ ೩

ಗುಣತ್ರಯಾತ್ಮಕವಾದ ಲಿಂಗ ದೊಳು । ಅಣುರೂಪಳಾಗಿ ತುರಂಗ, ಮುಖ । ಅನಿಲಾಂತರ್ಗತ ಪಾಂಡುರಂಗ, ನಂಘ್ರಿ । ವನಜಯುಗಳ ಮತ್ತ ಭೃಂಗ, ಆಹ ।

ಎನಿಸಿ ತತ್ವಕಾರ್ಯ ಅನಿರುದ್ಧ ದೇಹಸ್ಥ
ಅನಿಮಿಷರೊಳು ಪೊಕ್ಕು ದ್ವಿನವ ರೂಪದಿ ಮಾಳ್ಪೆ ೪

ನಿಗಮತತಿಗಳಭಿಮಾನಿ, ನಿನ್ನ । ಪೊಗಳಲೆನ್ನೊಶವೆ ಕಲ್ಯಾಣಿ, ಆ ಪ ।
ನ್ನಗ ರಾಜ ಸಾಹಸ್ರವಾಣಿಯಿಂದ । ಬಗೆಬಗೆ ತುತಿಪ ಸುಶ್ರೋಣಿ, ಆಹ ।
ಮುಗಿವೆ ಕರಗಳೆನ್ನವಗುಣವೆಣಿಸದೆ
ಜಗನ್ನಾಥವಿಠಲನಂಘ್ರಿಗಳ ಧ್ಯಾನವನೀಯೆ ೫

೬೬ ರಾಗ ಕಾಂಬೋದಿ ಝಂಪೆತಾಳ

ಅಪರಾಧವೆಣಿಸದಲೆ ಕಾಯಬೇಕು ಪ.
ಕೃಪಣ ವತ್ಸಲನೆ ಶ್ರೀ ಮಧ್ವಮುನಿ ಗುರುರಾಯ ಅ.
ನೀ ಮಾಡಿದುಪಕಾರ ನಾ ಮರೆವುದೆಂತೊ ಲ
ಕ್ಷ್ಮೀ ಮನೋಹರನ ನಿಜ ದಾಸಾಗ್ರಣಿ
ಪಾಮರ ಲೋಕದೊಳು ಧೀಮಂತನೆನಿಸಿದೆ ಮ
ಹಾಮಹಿಮ ನಿನ್ನ ಕರುಣಾಮೃತದ ಮಳೆಗರೆದು ೧
ಅವಿನೀತ ನಾನು ನಿನ್ನವನೆಂದು ತಿಳಿದು ಎ
ನ್ನವಗುಣಗಳೆಣಿಸದಲೆ ನಿತ್ಯದಲ್ಲಿ
ಸುವಿವೇಕಿಯನು ಮಾಡು ಕವಿರಾಜ ತವ ಮನೋ
ತ್ಸವಕೆ ಎಣೆಗಾಣೆ ನಾನವನಿಯೊಳಗಾವಲ್ಲಿ ೨
ಏನು ಅರಿಯದ ಮೂಢ ಮಾನವನು ನಾನು ಸು
ಜ್ಞಾನಿವರ್ಯನು ನೀನೆ ಕಾಯಬೇಕು
ಮಾನನಿಧಿ ಜಗನ್ನಾಥ ವಿಠಲನ ಪದಯುಗಳ
ಧ್ಯಾನಮಾಡುವ ಧೀರ ಪ್ರಾಣ ಪಂಚಕರಾಯ ೩

೬೭ ರಾಗ ಆರಭಿ ಆದಿತಾಳ

ನೀಲಲೋಹಿತ ಪಾಲಯಮಾಂ, ನೀಲಲೋಹಿತ ಪ.
(ನೀಲಲೋಹಿತ, ಡಮರುಗ ತ್ರಿಶೂಲ ಶೋಭಿತ ಪಾ )
ಫಾಲನಯನ ಶುಂಡಾಲಚರ್ಮ ಸುದು
ಕೂಲ ಮೃಡ ಸತತ ಪಾಲಿಸು ಕರುಣದಿ ಅ.
ನಂದಿವಾಹನ, ನಮಿಪೆ ಖಳ । ವೃಂದ ಮೋಹನ
ಅಂಧಕರಿಪು ಶಿಖಿಸ್ಯಂದನ ಸನಕಸ । ನಂದನಾದಿ ಮುನಿವಂದಿತ ಪದಯುಗ ೧

ಸೋಮಶೇಖರ-ಗಿರಿಜಾ ಸು | ತ್ರಾಮಲೇಖರಾ
ಸ್ತೋಮವಿನುತ ಭವಭೀಮ ಭಯಂಕರ । ಕಾಮಾಹಿತ ಗುಣಧಾಮ
ದಯಾನಿಧೆ ೨
ನಾಗಭೂಷಣ, ವಿಮಲ ಸ । ದ್ರಾಗ ಪೋಷಣ
ಭೋಗಿಶಯನ ಜಗನ್ನಾಥ ವಿಠ್ಠಲನ । ಯೋಗದಿ ಭಜಿಸುವ
ಭಾಗವತರೊಳಿಡು ೩

೬೮ ರಾಗ ಭೈರವಿ (ಮಧ್ಯಮಾವತಿ) ಆದಿತಾಳ

ಪ್ರಾಣದೇವ ನೀನಲ್ಲದೆ ಕಾಯ್ವರ । *ಕಾಣೆನೊ ಜಗದೊಳಗೆ-ಮುಖ್ಯ ಪ
ಪ್ರಾಣಾಪಾನ ವ್ಯಾನೋದಾನ ಸ । ಮಾನನೆನಿಪ ಮುಖ್ಯಪ್ರಾಣ ನೀನಲ್ಲದೆ ಅ
ವಾಸವ ಕುಲಿಶದಿ ಘಾಸಿನೆ ಜೀವರ । ಶ್ವಾಸ ನಿರೋಧಿಸಿದೆ
ಆ ಸಮಯದಿ ಕಮಲಾಸನ ಪೇಳಲು । ನೀ ಸಲಹಿದೆ ಜಗವ-ಮುಖ್ಯ ೧
ಅಂಗದ ಪ್ರಮುಖ ಪ್ಲವಂಗರು ರಾಮನ । ಅಂಗನೆಯನು ಪುಡುಕೆ
ತಿಂಗಳು ಮೀರಲು ಕಂಗೆಡೆ ಕಪಿವರ । ಪುಂಗವ ಪಾಲಿಸದೆ-ಮುಖ್ಯ ೨
ಪಾವನಪಾಶದಿ ರಾವಣ ನೀಲ ಸು । ಗ್ರೀವ ಮುಖ್ಯರ ಬಿಗಿಯೆ
ಸಾವಿರದ್ವೈವತ್ತು ಗಾವುದದಲ್ಲಿಹ ಸಂ | ಜೀವನವನು ತಂದೆ-ಮುಖ್ಯ ೩
ಪರಿಸರ ನೀನಿರೆ ಹರಿ ತಾನಿರುವನು । ಇರದಿರೆ ತಾನಿರನು
ಕರಣ ನಿಯಾಮಕ ಸುರರ ಗುರುವೆ ನೀ | ಕರುಣಿಸೆ ಕರುಣಿಸುವ-ಮುಖ್ಯ ೪
ಭೂತೇಂದ್ರಿಯದಧಿನಾಥ ನಿಯಾಮಕ । ಆ ತೈಜಸ ಹರನ
ತಾತನೆನಿಪ ಜಗನ್ನಾಥ ವಿಠ್ಠಲನ । ಪ್ರೀತಿಪಾತ್ರನಾದೇ-ಮುಖ್ಯ ೫

೬೯ ರಾಗ ಆನಂದಭೈರವಿ ಅಟತಾಳ

ನಿಲ್ಲು ಬಾರೊ ದಯಾನಿಧೆ ಪ.
ನಿಲ್ಲು ಬಾರೊ ಸರಿಯಿಲ್ಲ ನಿನಗೆ ಲಕ್ಷ್ಮಿ
ವಲ್ಲಭ ಮನ್ಮನದಲ್ಲಿ ಬಿಡದೆ ಬಂದು ಅ.
ಅತಿ ಮೃದುವಾದ ಹೃತ್ಶತಪತ್ರ ಸದನದಿ
ಶಾ-ಶ್ವತವಾಗಿ ಭವ್ಯ ಮೂರುತಿ ಭಕ್ತವತ್ಸಲ ೧

---

*ಕಾಣೆ ಲೋಕದೊಳಗೆ (ಪಾ )

ನಾನಾ ವ್ರತಂಗಳ ನಾನುಕರಿಸಿದೆ
ಶ್ರೀನಿಧಿ ನಿನ್ನಂಘ್ರಿ ಕಾಣಬೇಕೆನುತಲಿ ೨

ತನಮನಧನ ಚಿಂತೆಯ ಬಿಟ್ಟು ತ್ವತ್ಪದ
ವನರುಹ ಧೇನಿವೆ ಮನುಮಥನೈಯ ೩

ಯಾತರ್ಯೋಚನೆ ಮನಸೋತಬಳಿಕ ಪುರು
ಹೂತವಂದಿತ ಜಗನ್ನಾಥ ವಿಠ್ಠಲರೇಯ ೪

೭೦ ರಾಗ ಮುಖಾರಿ ಝಂಪೆತಾಳ

ಯಾತರವ ನಾನಯ್ಯ ಇಂದಿರೇಶ
ಹೋತಾಹ್ವಯನೆ ನಿನ್ನಧೀನವೀ ಜಗವೆಲ್ಲ ಪ

ಕಾಲಗುಣಕರ್ಮ ಸ್ವಭಾವಗಳ ಮನೆಮಾಡಿ
ಶ್ರೀಲೋಲ ನೀ ಸರ್ವರೊಳಗೆ ಇದ್ದು
ಲೀಲೆಗೈಯುತೆ ಲಿಪ್ತನಾಗದೆ ನಿರಂತರದಿ
ಪಾಲಿಸುವೆ ಸಂಹರಿಪೆ ದಿವಿಜ ದಾನವ ತತಿಯ ೧

ತಿಳಿಸಿಕೊಂಬುವ ನೀನೆ ಶ್ರುತಿ ಸ್ಮೃತಿಗಳೊಳಗಿದ್ದು
ತಿಳಿಸುವವ ನೀನೆ ಉಪದೇಶಕರೊಳು
ತಿಳಿಯುವವನು ನೀನೆ ಬುಧ್ಯಾದಿಂದ್ರಿಯಗಳೊಳು
ನೆಲೆಗೊಂಡು ನಿಖಿಳ ವ್ಯಾಪಾರ ಮಾಡುತಲಿಪ್ಪ ೨

*ಜಗದಿ ಜನ್ಮಾದಿಗಳಿಗಿಂತು ಕಾರಣನೆಂದು
ನಿಗಮತತಿಗಳು ನಿತ್ಯ ಸ್ತುತಿಸುತಿಹುವು
ತ್ರಿಗುಣವರ್ಜಿತ ಜಗನ್ನಾಥ ವಿಠ್ಠಲ ನೀನು
ಅಗಣಿತ ಕುಯೋನಿ ಮುಖದಲ್ಲಿ ಬಂದವ ನಾನು ೩

---

*ಅಗಣಿತಮಹಿಮ ಜಗಜ್ಜನ್ಮಾದಿ ಕಾರಣನೆ
ತ್ರಿಗುಣವರ್ಜಿತ ತ್ರಿವಿಕ್ರಮ ತ್ರಿಧಾಮ
ಭೃಗುಮುನಿವಿನುತ ಜಗನ್ನಾಥ ವಿಠ್ಠಲ ನಿನ್ನ
ಪೊಗಳಿ ಹಿಗ್ಗುವ ಭಾಗ್ಯ ಕೊಡು ಜನುಮಜನುಮಕ್ಕು (ಪಾಠಾಂತರ)

೭೧ ರಾಗ ಶಂಕರಾಭರಣ ಅಟತಾಳ

ನರಸಿಂಹ ಪಾಹೀಲಕ್ಷ್ಮೀ ನರಸಿಂಹ ಪ.
ನರಸಿಂಹ ನಮಿಪೆ ನಾ ನಿನ್ನ, ಚಾರು
ಚರಣಕಮಲಕೆ ನೀನೆನ್ನ, ಆಹಾ
ಕರವ ಪಿಡಿದು ನಿಜಶರಣನೆಂದೆನಿಸು ಭಾ
ಸುರ ಕರುಣಾಂಬುಧೆ ಗರುಡವಾಹನ ಲಕ್ಷ್ಮೀ ಅ

ತರಳ ಪ್ರಹ್ಲಾದನ ನುಡಿಯ, ಕೇಳಿ । ತ್ವರಿತದಿ ಬಂದೆ ಎನ್ನೊಡೆಯ, ಏನು । ಕರುಣಾಳೊ ಭಕ್ತರ ಭಿಡೆಯ–ಮಾರ । ಲರಿಯೆನೆಂದೆಂದು ಕೆಂಗಿಡಿಯ, ಆಹ ।

ಭರದಿಂದುಗುಳುತ ಬೊಬ್ಬಿರಿದು ಬೆಂಬೊತ್ತಿ ಕ
ರ್ಬುರ ಕಶಿಪುವಿನ ಮುಂಗುರುಳು ಪಿಡಿದೆ ಲಕ್ಷ್ಮೀ ೧

ಪ್ರಳಯಾಂಬುನಿಧಿ ಘನಘೋಷ-ದಂತೆ । ಘುಳಿಘುಳಿಸುತಲಿ ಪ್ರದೋಷ ಕಾಲ । ತಿಳಿದು ದೈತ್ಯನ ಅತಿರೋಷ-ದಿಂದ । ಸ್ಫಳಿಸಿ ಮೇದಿನಿಗೆ ನಿರ್ದೋಷ ಆಹ ।

ಸೆಳೆಸೆಳೆಯುತ ಚರ್ಮಸುಲಿದು ಕನ್ನೆತ್ತರೋ
ಕುಳಿಯನಾಡಿದೆ ದಿಶಾವಳಿಗಳೊಳಗೆ ಲಕ್ಷ್ಮೀ ೨

ಕ್ರೂರದೈತ್ಯನ ತೋರಕರುಳ, ತೆಗೆ । ದ್ವಾರಮಾಡಿದೆ ನಿಜಕೊರಳ, ಕಂಡು । ವಾರಿಜಾಸನ ಮುಖ್ಯರರಳ, ಪುಷ್ಪ । ಧಾರೆಗರೆದರ್ವೇಗ ತರಳ, ಆಹ ।

ಧೀರ ಪ್ರಹ್ಲಾದಗೆ ತೋರಿತ್ವದಂಘ್ರಿ ಸ
ರೋರುಹವನು ಕಾಯ್ದೆ ಕಾರಣ್ಯನಿಧಿ ಲಕ್ಷ್ಮೀ ೩

ಜಯಜಯ ದೇವವರೇಣ್ಯ, ಮಹ । ದ್ಭಯ ನಿವಾರಣ ಅಗ್ರಗಣ್ಯ, ಗುಣ । ತ್ರಯದೂರ ದುರಿತಾರಣ್ಯ, ಧನಂ । ಜಯ ಜಗದೇಕ ಶರಣ್ಯ, ಆಹ ।

ಲಯವಿವರ್ಜಿತ ಲೋಕತ್ರಯ ವ್ಯಾಪ್ತ ನಿಜಭಕ್ತ
ಪ್ರಿಯ ಘೋರ ಭಯಹರ ದಯಮಾಡೆನ್ನನು ಲಕ್ಷ್ಮೀ ೪

ಕುಟಿಲ ದ್ವೇಷದವ ನೀನಲ್ಲ, ನಿನ್ನಾ । ರ್ಭಟಕಂಜಿದರು ಸುರರೆಲ್ಲ, ನರ । ನಟನೆ ತೋರಿದೆ ಲಕ್ಷ್ಮೀನಲ್ಲ, ಇದು । ಸಟೆಯಲ್ಲ ಅಪ್ರತಿಮಲ್ಲ, ಆಹ,

ವಟಪತ್ರಶಯನ ಧೂರ್ಜಟಿವಂದ್ಯ ಜಗನ್ನಾಥ
ವಿಠಲ ಕೃತಾಂಜಲಿ–ಪುಟದಿ ಬೇಡುವೆ ಲಕ್ಷ್ಮೀ ೫

೬೨ ರಾಗ ಪೀಲು ಆದಿತಾಳ

ದಾಸೋಽಹಂ ತವ ದಾಸೋಽಹಂ ತವ । ದಾಸೋಽಹಂ ತವ ದಾಸೋಽಹಂ ಪ.
ವಾಸುದೇವ ವಿಗತಾಘಸಂಘ-ತವ ಅ.
ಜೀವಾಂತರ್ಗತ ಜೀವ ನಿಯಾಮಕ । ಜೀವ ವಿಲಕ್ಷಣ ಜೀವನದ
ಜೀವಾಧಾರಕ ಜೀವರೂಪಿ ರಾ । ಜೀವ ಭವಜನಕ ಜೀವೇಶ್ವರ-ತವ ೧
ಕಾಲಾಂತರ್ಗತ ಕಾಲನಿಯಾಮಕ । ಕಾಲಾತೀತ ತ್ರಿಕಾಲಜ್ಞ
ಕಾಲಪ್ರವರ್ತಕ ಕಾಲನಿವರ್ತಕ । ಕಾಲೋತ್ಪಾದಕ ಕಾಲಮೂರ್ತಿ-ತವ ೨
ಕರ್ಮಕರ್ಮಕೃತ ಕರ್ಮಕೃತಾಗಮ । ಕರ್ಮಫಲಪ್ರದ ಕರ್ಮಜಿತ
ಕರ್ಮಬಂಧ ಮಹ ಕರ್ಮವಿಮೋಚಕ । ಕರ್ಮನಿಗ್ರಹ ಕರ್ಮಸಾಕ್ಷಿ-ತವ ೩
ಧರ್ಮಯೂಪ ಮಹ ಧರ್ಮವಿವರ್ಧನ । ಧರ್ಮವಿದೋತ್ತಮ ಧರ್ಮನಿಧೆ
ಧರ್ಮಸೂಕ್ಷ್ಮ ಮಹ ಧರ್ಮಸಂರಕ್ಷಕ। ಧರ್ಮಸಾಕ್ಷಿ ಯಮಧರ್ಮಪುತ್ರ-ತವ ೪
ಮಂತ್ರಯಂತ್ರ ಮಹ ಮಂತ್ರಬೀಜ ಮಹ । ಮಂತ್ರರಾಜಗುರು ಮಂತ್ರಧೃತ
ಮಂತ್ರಮೇಯ ಮಹ ಮಂತ್ರನಿಯಾಮಕ । ಮಂತ್ರದೇವ ಜಗನ್ನಾಥ
ವಿಠಲ-ತವ ೫

೬೩ ರಾಗ ಪಂತುವರಾಳಿ ಆದಿತಾಳ

ವಿಠಲಯ್ಯ ವಿಠಲಯ್ಯ ಪ.
ತಟಿಕ್ಕೋಟಿ ನಿಭಕಾಯ ಜಗನ್ನಾಥ ಅ.
ಭಜಿಸುವೆ ನಿನ್ನನು ಅಜಭವಸುರನುತ । ಭಜಕಾಮರತರು ಕುಜನ ಕುಠಾರಿ ೧
ನೀ ಕರುಣಿಸದೆ ನಿರಾಕರಿಸಲು ಎನ್ನ । ಸಾಕುವರಾರೊ ದಯಾಕರ ಮೂರುತಿ ೨
ಶರಣಾಗತರನು ಪೊರೆವೆನೆಂಬ ತವ । ಬಿರುದು ಕಾಣೊ ಸಿರಿವರದ ಜಗನ್ನಾಥ ೩

೬೪ ರಾಗ ಕಾಂಬೋದಿ ಝಂಪೆತಾಳ

ನಿನ್ನ ದಾಸರ ದಾಸನೆಂತಾಹೆನೋ ಪ
ಅನಂತ ಅಪರಾಧವನುಗಾಲ ಮಾಡುತಿಹೆ ಅ
ಸ್ನಾನ ಸಂಧ್ಯಾನ ಜಪ ಮೌನವೇ ಮೊದಲಾದ
ನಾನಾವಿಧದ ವಿಹಿತ ಧರ್ಮ ತೊರೆದು
ನಾನು ನನ್ನದು ಎಂಬ ಹೀನ ಬುದ್ಧಿಗಳಿಂದ
ಹೀನಜನರೊಡನಾಡಿ ಜ್ಞಾನಿಗಳ ನಿಂದಿಸಿದೆ ೧

ಏಕಾದಶಿಯ ಜರಿದು ಲೋಕವಾರ್ತೆಗಳಿಂದ
ಶ್ರೀಕಾಂತ ನಿನ್ನ ಸೇವೆಯನು ಮರೆದು
ಬೇಕಾದ ವೈಷಿಕವ ಸ್ವೀಕರಿಸಿ ಲೋಕದೊಳು
ಸಾಕಿದವರನು ನಾ ನಿರಾಕರಿಸಿ ಬಾಳುವೆನು ೨

ಎನಗಿಂದಧಿಕರಾದವರೊಡನೆ ದ್ವೇಷವನು
ಅನುಗಾಲ ಮಾಡುವೆನು ಅನಿಮಿಷೇಶ
ಎನಗೆ ಸರಿಯಾದವರ ಕಂಡು ಮತ್ಸರಿಸುವೆನು
ಎನಗಿಂತ ನೀಚರನು ನೋಡಿ ನಾ ನಗುತಿಪ್ಪೆ ೩

ಕಾಸಿನಾಸೆಗೆ ಪೋಗಿ ದಾಸವೇಷವ ಧರಿಸಿ
ಮೋಸ ಮಾಡುವೆ ಜನರ ಪಾಶ ಬೀರಿ
ವಾಸುದೇವನೆ ಸರ್ವದೇಶ ಕಾಲಾದಿಗಳಿ
ಗೀಶನೆಂದರಿಯದಲೆ ಮೋಸಹೋದೆನೊ ಸ್ವಾಮಿ ೪

ಸಕಲ ದುರ್ಗುಣಗಳಾಗಾರ ನಾನವನಿಯೊಳು
ಭಕುತಿ ವೈರಾಗ್ಯ ಪ್ರಸಕುತಿಯಿಲ್ಲ
ಭಕುತವತ್ಸಲ ಜಗನ್ನಾಥ ವಿಠ್ಠಲನೆ
ಅಕಳಂಕ ಮಹಿಮ ಮುಕುತಾಮುಕುತರಿಗೆ ಒಡೆಯ ೫

೭೫ ರಾಗ ಆನಂದಭೈರವಿ ಆದಿತಾಳ

ರಾಯ ಬಾರೋ ತಂದೆ ತಾಯಿ ಬಾರೋ ನಮ್ಮ ಕಾಯಿ ಬಾರೋ
ಮಾಯಿಗಳ ಮರ್ದಿಸಿದ ರಾಘವೇಂದ್ರ-ರಾಯ ಬಾರೋ ಪ

ವಂದಿಪ ಜನರಿಗೆ ಮಂದಾರ ತರುವಂತೆ
ಕುಂದದೆ-ಭೀಷ್ಟವ ಸಲಿಸುತಿಪ್ಪ-ರಾಯ ಬಾರೋ
ಕುಂದದೆ-ಭೀಷ್ಟವ ಸಲಿಸುತಿಪ್ಪ ಸರ್ವಜ್ಞ
ಮಂದನ್ನಮತಿಗೆ ರಾಘವೇಂದ್ರ-ರಾಯ ಬಾರೋ ೧

ಆರು ಮೂರು ಏಳು ನಾಲ್ಕು ಎಂಟು ಗ್ರಂಥ ಸಾರಾರ್ಥ
ತೋರಿದಿ ಸರ್ವರಿಗೆ ನ್ಯಾಯದಿಂದ-ರಾಯ ಬಾರೊ
ತೋರಿದಿ ಸರ್ವರಿಗೆ ನ್ಯಾಯದಿಂದ ಸರ್ವಜ್ಞ
ಸೂರಿಗಳರಸನೆ ರಾಘವೇಂದ್ರ-ರಾಯ ಬಾರೊ ೨

ರಾಮಪದ ಸರಸೀರುವ ಭೃಂಗ ಕೃಪಾಪಾಂಗ
ಭ್ರಾಮಕ ಜನರ ಮತಭಂಗ-ರಾಯ ಬಾರೊ
ಭ್ರಾಮಕ ಜನರ ಮತಭಂಗ ಮಾಡಿದ
ಧೀಮಂತರೊಡೆಯನೆ ರಾಘವೇಂದ್ರ-ರಾಯ ಬಾರೊ ೩

ಭಾಸುರ ಚರಿತನೆ ಭೂಸುರ ವಂದ್ಯನೆ
ಶ್ರೀ ಸುಧೀಂದ್ರಾರ್ಯರ ವರಪುತ್ರ-ರಾಯ ಬಾರೊ
ಶ್ರೀ ಸುಧೀಂದ್ರಾರ್ಯರ ವರಪುತ್ರನೆನಿಸಿದ
ದೈಶಿಕರೊಡೆಯನೆ ರಾಘವೇಂದ್ರ-ರಾಯ ಬಾರೊ ೪

ಭೂತಳನಾಥನ ಭೀತಿಯ ಬಿಡಿಸಿದ
ಪ್ರೇತತ್ವ ಕಳೆದಿ ಮಹಿಷಿಯ-ರಾಯ ಬಾರೊ
ಪ್ರೇತತ್ವ ಕಳೆದಿ ಮಹಿಷಿಯ ಶ್ರೀ ಜಗ
ನ್ನಾಥ ವಿಠ್ಠಲನ ಪ್ರೀತಿಪಾತ್ರ-ರಾಯ ಬಾರೊ ೫

೭೬ ರಾಗ ಕಾಂಬೋದಿ ಝಂಪೆತಾಳ

ಅರಿತವರಿಗತಿ ಸುಲಭ ಹರಿಯ ಪೂಜೆ ಪ
ಅರಿಯದವ ನಿರ್ಭಾಗ್ಯತರ ಲೋಕದೊಳಗೆ ಅ

ಹೈಮಾಂಡ ಮಂಟಪವು, ಭೂಮಂಡಲವೆ ಪೀಠ
ಸೋಮ ಸೂರ್ಯರೆ ದೀಪ, ಭೂರುಹಗಳು
ಚಾಮರಗಳತಿವಿಮಲ ವ್ಯೋಮಮಂಡಲ ಛತ್ರ
ಯಾಮಾಷ್ಟಕಗಳಷ್ಟದಳದ ಪದ್ಮವು, ಎಂದು ೧

ಮಳೆಯೆ ಮಜ್ಜನವು, ದಿಗ್ವಲಯಂಗಳೇ ವಸನ
ಮಲಯಜಾನಿಲವೆ ಶ್ರೀಗಂಧ ಧೂಪ
ಇಳೆಯೊಳಗೆ ಬೆಳೆದ ಧಾನ್ಯಗಳೆಲ್ಲ ನೈವೇದ್ಯ
ಥಳಥಳಿಪ ಮಿಂಚು ಕರ್ಪೂರದಾರತಿ, ಎಂದು ೨

ನಕ್ಷತ್ರ ಮಂಡಲವೆ ಲಕ್ಷ ದೀಪಾವಳಿಯು
ದಕ್ಷಿಣೋತ್ತರ ಆಯನಗಳೆರಡು ಬನವು (?)
ವೃಕ್ಷವಲ್ಲಿಜ ಸುಫಲ ಪುಷ್ಪಗಳೊಳಗೆ ಲಕ್ಷ್ಮಿ
ವಕ್ಷ ವ್ಯಾಪಕನಾಗಿ ತಾನೆ ಭೋಗಿಪ, ನೆಂದು ೩

ಗುಡುಗು ಸಪ್ತಸಮುದ್ರ ಶಿಡಿಲು ಘೋಷವೆ ವಾದ್ಯ
ಪೊಡವಿಪರಿಗೀವ ಕಪ್ಪವೆ ಕಾಣಿಕೆ
ಉಡುಪ ಭಾಸ್ಕರರ ಮಂಡಲಗಳಾದರ್ಶಗಳು
ನಡೆವ ನಡೆಗಳು ಹರಿಗೆ ಬಿಡದೆ ನರ್ತನ, ವೆಂದು ೪
ಯುಗ ಚತುಷ್ಟಯವೆ ಪರಿಯಂಕ ಪಾದಗಳ-ಬ್ದ
ಬಿಗಿವ ಪಟ್ಟಿಗಳು ಕಂದಾಯ ಕಶಿಪು (?)
ಗಗನಮೇಲ್ಕಟ್ಟು, ಸಂಕ್ರಮಣಗಳೆ ಬಡವುಗಳು (?)
ಭಗವಂತ ಗುಪಬರ್ಹಣ ಷಡೃತುಗಳೆಂದು ೫
ನಾಗವಲ್ಲಿಯೆ ದಿವಸಗಳು, ಕ್ರಮುಕ ಕರಣಗಳು
ಯೋಗಗಳೆ ಚೂರ್ಣ, ರಾತ್ರಿಯೆ ಕಾಂಶುಕ
ಭೋಗವತಿ ಜಲವೆ ಗಂಡೂಷೋದಕ, ಶುದ್ಧ
ಸಾಗರವೆ ಪಾದ್ಯ, ವಿರಾಟು ರೂಪನಿ, ಗೆಂದು ೬
ಶಾತಕುಂಭೋದ ರಾಂಡಂತಸ್ಥರೂಪ ಸಂ
ಪ್ರೀತಿಯಿಂದಲಿ ಯಜಿಸಿ ಮೋದಿಸುವರ
ವೀತಶೋಕರಮಾಡಿ ಸಂತೈಸುತಿಹ ಜಗ
ನ್ನಾಥ ವಿಠ್ಠಲ ಒಲಿದು ಸರ್ವಕಾಲಗಳಲ್ಲಿ ೭

೭೭ ರಾಗ ಕಾಂಬೋದಿ ಝಂಪೆತಾಳ

ಇದು ನಿನಗೆ ಧರ್ಮವೆ ಇಂದಿರೇಶ ಪ
ಬದಿಗ ನೀನಾಗಿದ್ದು ಭೀತಿ ಪಡಿಸುವುದು ಅ
ನಿನ್ನ ಗುಣಗಳ ತುತಿಸಿ ನಿನ್ನನೇ ಹಾರೈಸಿ
ನಿನ್ನವರ ಪ್ರೀತಿಯನು ಸಂಪಾದಿಸಿ
ಅನ್ಯರನು ಲೆಕ್ಕಿಸದೆ ಚನ್ನಾಗಿ ಬಾಳುವ
ಮಾನ್ನವನ ಈ ಪರಿಯ ಬನ್ನಬಡಿಸುವುದು ೧
ದುರುಳನಲ್ಲವೊ ನಿನ್ನ ಚರಣ ಸೇವಕರವನೊ
ಪರಿಪಾಲಿಪುದು ನಿನಗೆ ಪರಮ ಧರ್ಮ
ಗುರುಗಳಂತರ್ಯಾಮಿ ಕರಮುಗಿದು ಬಿನ್ನೈಪೆ
ಶರಣಪಾಲಕನೆಂಬ ಬಿರುದು ಸುಳ್ಳಾಗುತಿದೆ ೨

ಶೋಕನಾಶಕ ವಿಗತ ಶೋಕನೆಂಬೋ ನಾಮ
ನಾ ಕೇಳಿ ಮೊರೆಹೊಕ್ಕೆ ಲೋಕ ಬಂಧು
ನಿ-ರಾಕರಿಸದೆಮ್ಮನು ಸಾಕಬೇಕನುದಿನವು
ವಾಕು ಮನ್ನಿಪುದು ಲೋಕೈಕ ರಕ್ಷಾಮಣಿ ೩

ಗುಣವೆ ನಿನಗಿದು ಬರಿದೆ ದಣಿಸುವುದು ಶರಣರನು
ಪ್ರಣತಾರ್ತಿಹರ ವಿಭೀಷಣ ಪಾಲಕ
ಕ್ಷಣಕನಂತಪರಾಧ ಎಣಿಸುವಡೆ ಕಡೆವುಂಟೆ
ಮಣಿದು ಬಿನ್ನಹ ಮಾಳ್ಪೆ ದನುಜದಲ್ಲಣನೆ ೪

ನಮೋನಮೋ ಬ್ರಹ್ಮಣ್ಯದೇವ ದೇವರ ದೇವ
ನಮೋನಮೋ ಧನ್ವಂತ್ರಿ ದುರಿತ ಹಂತ್ರಿ
ನಮೋನಮೋ ಕಾರುಣ್ಯ ಶೀಲ ಸಜ್ಜನಪಾಲ
ನಮೋನಮೋ ಜಗನ್ನಾಥ ವಿಠಲ ವಿಖ್ಯಾತ ೫

೭೮ ರಾಗ ಪಂತುವರಾಳಿ ಆದಿತಾಳ

ಪತಿತಪಾವನ ಪೂರ್ಣಕಾಮ, ನೀನೇ ಪ.
ಗತಿ ಎನಗೆ ಸಂತತ ಪರಂಧಾಮ ಅ

ಕೃಪಣ ವತ್ಸಲನೆ ಎಮ್ಮಪರಾಧಗಳ ನೋಡಿ
ಕುಪಿತನಾಗುವರೇನೊ ಸುಫಲದಾಯಿ
ನೃಪಗನಿರುದ್ಧ ಬಿನ್ನಪವ ಮಾಡುವೆ ನಿನಗೆ
ಚಪಲರಾಗಿಹರೊ ಕಾಶ್ಯಪಿ ಸುರರನು ಕಾಯೊ ೧

ಮಾನ್ಯ ಮಾನದ ಬ್ರಹ್ಮಣ್ಯ ದೇವ ನೀನೆಂದು
ಉನ್ನತ ಶ್ರುತಿಗಳ ಬಣ್ಣಿಸುತಿಹವು
ಸನ್ನುತ ಮಹಿಮನೆ ನಿನ್ನ ಪೊಂದಿದವರ
ಬನ್ನ ಬಡಿಪುದು ನಿನಗಿನ್ನು ಧರ್ಮವಲ್ಲ ೨

ಹಲವು ಮಾತುಗಳಾಡಿ ಫಲವೇನು
ಬ್ರಾಹ್ಮಣರ ಕುಲಕೆ ಮಂಗಳವೀಯೊ ಕಲುಷದೂರ
ಸುಲಭ ದೇವೇಶ ನಿನ್ನುಳಿದು ಕಾಯ್ವರ ಕಾಣೆ
ಬಲಿಯ ಬಾಗಿಲ ಕಾಯ್ದ ಜಗನ್ನಾಥ ವಿಠಲ ೩

೭೯ ರಾಗ ಶಂಕರಾಭರಣ ಆದಿತಾಳ

ಆ ವೆಂಕಟಗಿರಿನಿಲಯನಂಘ್ರಿ ರಾ । ಜೀವ ಯುಗ್ಮಗಳಿಗಾ ನಮಿಸುವೆನು ಪ.

ಸೇವಿಪ ಜನರಿಗಮರತರುವೆನಿಸಿ, ಧ । ರಾವಲಯಾಖ್ಯ ದಿವಿಯೊಳೆಸವ ಅ

ಆವನಂಘ್ರಿ ಜಲ ಸಕಲ ಜಗತ್ತಿಗೆ । ಪಾವನಕರ ವೆಂದೆನಿಸುವುದು
ಶ್ರೀವಿಧಿ ಭವ ಶಕ್ರಾದ್ಯರು ಅವನ । ಸೇವಕ ಸೇವಕರೆನಿಸುವರು ೧

ದೇವೋತ್ತಮ ತಾನಾಗಿ ನಿಖಿಲ ಜಡ । ಜೀವ ಭಿನ್ನ ಕರ್ಮವ ಮಾಳ್ಪ
ಸ್ಥಾವರ ಜಂಗಮರೊಳಗೆ ನೆಲೆಸಿ ವೇ । ದಾವಳಿಯಿಂದ ಸ್ತುತಿಸಿಕೊಂಬ ೨

ಮಾತರಿಶ್ವನೊಡನಹಿಪ ನೊರೆದ ಸ । ತ್ವಾತಿಶಯವ ತೋರೆನುತಾಗ
ಜಾತರೂಪ ಶೈಲಾತ್ಮಜನೊಪ್ಪಿರೆ । ವೀತಹೋತ್ರ ಸಖ ಕಿತ್ತೊಗೆಯೆ ೩

ಪೀತಕರ್ಣನಳವಳಿದು ಸ್ತುತಿಸೆ ನಿ । ಕೇತನತ್ರಯವನಿಳಿದು ಬೇಗ
ಧಾತ ಮಹಿಳೆ ತೀರ್ಥದಿ ಲಕುಮಿ-ಸ । ಮೇತನಾಗಿ ಮೋದಿಸುತಿಪ್ಪ ೪

ಭೂಸುರನೋರ್ವನು ತೊಂಡಮಾನ ಧರ । ಣೀಶನ ನಿಲಯದಿರಿಸಿ ಸತಿಯ
ಕಾಶಿಗೆ ಪೋಗಲು ನೃಪತಿ ಮರೆಯೆ ನಿ । ಶ್ವಾಸವ ನೈದಿದಳಾ ಸತಿಯು ೫

ಆ ಸಮಯದಿ ದ್ವಿಜವರ್ಯನು ಬೆಸಗೊಳೆ । ಕ್ಲೇಶದಿ ಭೂಮಿಪ ಸಂಸ್ತುತಿಸೆ
ಕೇಶವ ತಾನಸ್ಥಿಗಳ ತರಿಸಿ ಸು । ವಾಸಿನಿ ಶಿಶುಸಹ ವಲಿದಿತ್ತ ೬

ವೃದ್ಧ ಭೂಸುರನ ಒಯ್ದು ಸಲಿಲದೊಳ । ಗದ್ದಿ ಕುಮಾರತ್ವವನಿತ್ತ
ಅಧ್ವರವೆಸಗುವ ಋಷಿಗಳ ವೇದಾ । ಪದ್ಧವ ತಿದ್ದಿ ಮುಖವ ಕಾಯ್ದ ೭

ಮಧ್ಯರಾತ್ರಿಯೋಳ್ಬೆಸಗೊಂಡ ನೃಪತಿಗೆ । ಸಿದ್ಧಿಸಿದರಿ ಶಂಖದ್ವಯವ
ಮೃದ್ಭಾಂಡವ ವಿರಚಿಸಿದವಗೊಲಿದು । ಚೋದ್ಯವ ನೃಪತಿಗೆ ತೋರಿಸಿದ ೮

ಮನವಾಕ್ಕಾಯದಿ ಕರ್ಮ ಜನ್ಯಫಲ । ದಿನದಿನಗಳಲಿ ಸಮರ್ಪಿಸುವ
ಮನುಜೋತ್ತಮರಾಧಿವ್ಯಾಧಿಗಳ, ದು । ರ್ಜನುಮಗಳಿಲ್ಲವ ಪರಿಹರಿಪ ೯

ಕುನರಗಲಭ್ಯನು ಕುವಲಯದೊಳು ಕಾ । ರುಣಿಕ ಧರ್ಮಕರ್ಮಾರ್ಥಗಳ
ಜನರಿಗೆ ಸಲಿಸುವ ಜಗನ್ನಾಥ ವಿಠ್ಠಲ । ಮನೆಮಾಡಿದ ಶೇಷಾಚಲವ ೧೦

೮೦ ರಾಗ ರೇಗುಪ್ತಿ ಝಂಪೆತಾಳ

ಶ್ರೀಮಧ್ವ ಚಿತ್ತಮಂದಿರನೆ ನಿನ್ನಯ ಚರಣ
ತಾಮರಸ ನೆರೆನಂಬಿದೆ ಪ.
ಕಾಮಕ್ರೋಧವ ಕಳೆದು ನಿನ್ನ ನಾಮಾಮೃತವ
ಪ್ರೇಮದಲಿ ಎನಗೆ ಕೊಡಿಸೋ ಸ್ವಾಮಿ ಅ

ಉಪರಾಗ ದಶಮಿ ದ್ವಾದಶಿ ದಿವಸ ಮೊದಲಾದು । ದುಪೇಕ್ಷೆ ಮಾಡಿ ಕಳೆದೆ ॥ ಉಪಕಾರವೆಂದು ನಿಜಯುಕ್ತಿ ಪೇಳಿದರೆನಗೆ । ಅಪಕಾರ ಕಾಣುತಿದಕೊ। ನಿಪುಣನೆನಿಸುವೆನೆಂದು ಅಜ್ಞಾನಿಗಳ ಮುಂದೆ । ತಪವೃದ್ಧರನು ಹಳಿದೆ । ಸ್ವಪನ ದೊಳಗಾದರೂ ವೈರಾಗ್ಯ ಬಯಸದಲೆ । ಕಪಟ ಮನುಜರೊಳಾಡಿ ನಿನ್ನ ಮರೆದೆನೊ ಸ್ವಾಮಿ ೧

ಮಾರನ್ನ ಉಪಟಳಕಾರದಲೆ ನಾನು ಬಲು । ಘೋರಬುದ್ಧಿಯನು ಮಾಡಿ। ಆರು ಇಲ್ಲದ ವೇಳೆ ಕಣ್ಣು ಸನ್ನೆಯೊಳವಳು । ಕೋರಿದ್ದು ತಂದು ನೀಡಿ ॥ ಬಾರಿ ಬಾರಿಗೆ ಅವಳ ಓರೆನೋಟಕೆ ಬೆರೆತು । ಕ್ರೂರಮಾನವರೊಳಾಡಿ । ವಾರಿಜನಾಭ ನಿನ್ನಾರಾಧನೆಯ ಮರೆದು । ಧಾರುಣಿಗೆ ಭಾರಾದೆ, ಪರಲೋಕ ಮರೆದೆ ೨

ಭೂಸುರರು ಚಂಡಾಲಜಾತಿ ಎನ್ನದೆ ಬಲು । ಹೇಸಿಕಿಲ್ಲದೆ ತಿರುಗುವೆ । ಈ ಸತೀಸುತರ ಸಾಕುವೆನೆಂದು ಪರಿಪರಿ । ವೇಷವನು ಧರಿಸಿ ಮೆರೆವೆ ॥ ಆಸೆಯುಳ್ಳ ಮಹಾ ಪಿಶಾಚಿಗೊಳಗಾಗಿ ಹರಿ । ದಾಸ ಸಹವಾಸ ಜರೆದೆ । ವಾಸುಕೀಶಯನ ವಸುದೇವ ತನಯನೆ ನಿನ್ನ । ದಾಸನೆನ್ನಿಸದೆ ಅಪಹಾಸ ಮಾನವನಾದೆ ೩

ಹರಿದಾಸರ ಬಳಿಯ ಅರೆಘಳಿಗೆ ಕುಳಿತಿರೆ । ಶಿರವ್ಯಾಧಿಯೆಂದ್ಹೇಳುವೆ । ದುರುಳ ದುರ್ವಾರ್ತೆಗಳ ಪೇಳಲು ಹಸಿತೃಷೆ । ಮರೆದು ಲಾಲಿಸಿ ಕೇಳುವೆ॥ ತರುಣಿ ಮಕ್ಕಳು ಎನ್ನ ಪರಿಪರಿ ಬೈದರೆ । ಪರಮ ಹರುಷವ ತಾಳುವೆ । ಗುರು ಹಿರಿಯ ರೊಂದುತ್ತರವ ನಾಡಲು ಕೇಳಿ । ಧರಿಸಲಾರದೆ ನಾನು ಮತ್ಸರಿಪೆನವರೊಡನೆ ೪

ನಾ ಮಾಡಿದಪರಾಧವೆಣಿಸಿ ಬರೆದರೆ ಈ । ಭೂಮಂಡಲವು ಸಾಲ ದಿಹುದೊ । ಸೀಮೆಯೊಳಗುಳ್ಳ ದುರ್ಮತಿಯೆಲ್ಲ ಕೂಡಿಡಲು । ಈ ಮತಿಯ ಅದು ಪೋಲದೋ ॥ ಹೋಮಜಪತಪಗಳನು ಎಷ್ಟು ಮಾಡಲು ಪಾಪ । ಸ್ತೋಮ ಎಂದಿಗು ಪೋಗದೊ । ಸಾಮಜವರದ ಜಗನ್ನಾಥ ವಿಠ್ಠಲ ನಿನ್ನ । ನಾಮ ವೊಂದಲ್ಲದೆ ಪ್ರಾಯಶ್ಚಿತ್ತವ ಕಾಣೆ ॥ ೫

೮೧ ರಾಗ ಭೈರವಿ ಝಂಪೆತಾಳ

ಸೋಮ ಶಿವ ಶರ್ವ ಭವ ಶ್ರೀಕಂಠ ನಿನ್ನ ಪದ
ತಾಮರಸ ಯುಗ್ಮಗಳಿಗಾ ನಮಿಸುವೆ ಪ
ಅ

ಮೃತ್ಯುಂಜಯ ಮೃಗಾಂಗ ಕೃತ್ತಿವಾಸ ಕೃಪಾಳೂ
ವಿತ್ತಪತಿಸಖ ವಿನಾಯಕನ ಜನಕ
ಭೃತ್ಯುವರ್ಗಕೆ ಬಹಾಪಮೃತ್ಯು ಪರಿಹರಿಸಿ ಸಂ
ಪತ್ತು ಪಾಲಿಪುದು ನಿವೃತ್ತಿ ಸಂಗಮವಾಸ ೧
ಗೋಪತಿಧ್ವಜ ಘೋರಪಾಪ ಸಂಹರಣ ಹರಿ
ತೋಪಲೋಪಮಕಂಠ ಚಾಪಪಾಣೆ
ಶ್ರೀಪತಿಯ ಶ್ರೀ ನಾಭಿಕೂಪ ಸಂಭವ ತನಯ
ನೀ ಪಾಲಿಸೆಮ್ಮನು ವಿರೂಪಾಕ್ಷ ಗುರುವೆ ೨
ಭಸಿತ ಭೂಷಿತ ಡಮರು *ತ್ರಿಸುಳ ಗೈಯನೆ ಶಂಭು
ಕಿಸಲಯೋಪಮ ರವಿ ಶಶಿಲೋಚನೆ
ಅಸುರರಿಪು ಸಿರಿ ಜಗನ್ನಾಥ ವಿಠಲನ ಪದ
ಬಿಸಜಧ್ಯಾನವನೀಯೊ ಹಸನಾಗಿ ಕಾಯೊ ೩

೮೨ ರಾಗ ಪಂತುವರಾಳಿ ಆಟತಾಳ

ಹಿಂದಿಲ್ಲ ಇಂದು ಮುಂದಿಲ್ಲ ಶ್ರೀ ಮು
ಕುಂದಗೆ ಸಮರೆನಿಸುವರು ಲೋಕದೊಳು ಪ.
ವನದಿ ಮಥನದಲ್ಲಿ ಅನಿಮಿಷರನು ಬಿಟ್ಟು
ಜನನಿಲಕುಮಿ ನಾರಾಯಣನೊಲಿಸಿದಳಾಗಿ ೧
ಪ್ರಪಿತಾಮಹನು ಲೋಕಾಧಿಪ ಚತುರ್ಮುಖನಿಗೆ
ತಪತಪವೆಂದ್ದೇಳ್ದಗುಪಮರೆನಿಸುವರು ೨
ಕಂಧರ ವರವೀಯೆ ಹಿಂದಟ್ಟಿದಸುರನ
ಕೊಂದು ಶಿವನನ ಕಾಯ್ದ ಇಂದಿರಾಪತಿಗೆಣೆ ೩

---

* ತ್ರಿಸುಳ=ತ್ರಿಶೂಲ
※ ಕಂ=ನೀರನ್ನು (ಗಂಗೆಯನ್ನು), ಧರ=ಧರಿಸಿದವನು, ಶಿವ

ಮಂದರಾದ್ರಿಯನೆತ್ತಿ ಸಿಂಧುಮಥನ ಮಾಡಿ
ವೃಂದಾರಕರಿಗೆ ಆನಂದವಿತ್ತಗೆ ಸರಿ ೪
ಭೃಗು ಮುನಿಪನು ಬ್ರಹ್ಮಾದಿಗಳ ಪರೀಕ್ಷಿಸಿ
ಜಗನ್ನಾಥವಿಠಲನೆ ತ್ರಿಗುಣವರ್ಜಿತನೆಂದ ೫

೮೩ ರಾಗ ಮಧ್ಯಮಾವತಿ ತ್ರಿಪುಟತಾಳ

ಪನ್ನಗಾದ್ರಿ ನಿವಾಸ, ಸುದರ್ಶನ ಪಾಂಚ । ಜನ್ಯಧರ ದೂರ್ವಾಸ,
ಪ್ರಮುಖಮುನಿ ಸ । ನ್ಮಾನ್ಯ ಕರುಣವಿಲಾಸ, ಶ್ರೀ ಶ್ರೀನಿವಾಸ ಪ
ಎನ್ನ ಅವಗುಣ ಸಹಸ್ರವೆಣಿಸದೆ । ನಿನ್ನವ–ರೊಳಗಾಡಿಸನುದಿನ । ಮನ್ಮ
ನಾಲಯದೊಳು ನೆಲಿಸಿ ಮೈ । ಗಣ್ಣನನುಜ ವರಾಹ ಶ್ರೀಕರ ಅ.
ಕಾಮಿತಪ್ರದ ಕೋಲ, ಅಂಜನ ಧರಾಧರ । ಧಾಮ ಭೂಮಿವಿಲೋಲ,
ಶಂಖ ನೃಪವರದ । ಹೇಮಲೋಚನ ಕಾಲ, ದ್ವಿಜಮಹಿಳೆಯುಳುಹಿದ ।
ಶ್ಯಾಮಲಾಂಗ ಸುಶೀಲ, ವೇಂಕಟ ಕುಲಾಲ ಭೀಮಗೊಲಿದ ಮಹಾ ಮಹಿಮ
ಪಿ । ತಾಮಹನ ನಾಸೋದ್ಭವ, ವಿಯ । ದ್ಭೂಮಿಪತಿ ಜಾಮಾತ, ಕಿಟಿ ಸು ।
ತ್ರಾಮಸುತಸೂತ ಪ್ರಮೋದಿ, ಸು । ಧಾಮ ಸೌಖ್ಯಪ್ರದ ವರ–ಹತ್ರ । ಯೀ
ಮಯ ಪ್ರಣತಾರ್ತಿ ಹರ ಬಲ । ರಾಮನಾನುಜ ದಂಷ್ಟ್ರ ಸಾಲಿ । ಗ್ರಾಮಸದನ
ಸಹಸ್ರನಾಮ ॥ ಸಾಮಜಪತಿ ಪೋಷಕ ರಿಪುವನ । ಧೂಮಧ್ವಜ ವಿಧಿಭವಾದಿ
ಸೇವಿತ । ವ್ಯೋಮಾಳಿತ ಸಖಸರ್ವಜ್ಞ ರ। ಮಾ ಮನೋಹರ ಮನ್ನಿಪುದೆನ್ನ॥ ೧
ದೀನಜನ ಮಂದಾರ, ದೇವಕಿಸುತ ಜನ । ತ್ರಾಣ ಗುಣಗಂಭೀರ,
ಪೃಥ್ವೀಶ ತೊಂಡ । ಮಾನವರದ ಉದಾರ, ಲುಬ್ಧಕನ ವಿಷ್ವ । ಕ್ಸೇನನೆನಿಸಿದ
ಧೀರ, ವೇಂಕಟ ವಿಹಾರ ॥ ವೈನತೇಯ ವರೂಥ ಖಳಸ್ವ । ರ್ಭಾನುವಿನ
ತಲೆಗಡಿದು ರವಿಶಶಿ । ಕ್ಷೋಣಿ ಬುಧಗುರುಕವಿ ಶನಿ । ಶ್ರೇಣಿಯಲಿ ಮಾನಿಗಳ
ಮಾಡ್ದ ಮ । ಹಾನುಭಾವ ಮನೋಜ ಶತ ಚಲು । ವಾನನಾಕಲಿಮಲಾಪಹರ
ಕೃ । ಶಾನುಸಖ ಸಂಪೂಜ್ಯ ಸುಮನಸ । ಧೇನು ಶರಣಜನರ್ಗೆ ಸಂತತ । ನಾ
ನಮಿಪೆ ನಳಿನಜನಪಿತ ನಿ । ರ್ವಾಣ ನಿರವದ್ಯ ನಿರಜ *ಬ್ರ । ಹ್ಮಾಣಿಸರ ತಟ
ನಿಲಯನು ಸಂ । ಧಾನಕೆ ಕೊಡು ಬಹುವಿಧದ ಕರ್ಮ (ಧರ್ಮ) ॥ ೨

* ಬ್ರಹ್ಮಾಣಿಸರ=ಸ್ವಾಮಿ ಪುಷ್ಕರಣಿ ಸರಸ್ಸು

ಸಾರಶ್ರೀಮದನಂತ, ಸಂಸಾರ ಪಾರಾ। ವಾರ ವಿಗತಾದ್ಯಂತ, ಸನಕಾದಿ ಸೇವ್ಯ ಪ। ದಾರವಿಂದ ಮಹಂತ, ಸತ್ವಾದಿ ತ್ರಿಗುಣ ವಿ। ದೂರ ದಿತಿಜ ಕೃತಾಂತ, ಶ್ರೀ ಭೂಮಿಕಾಂತ ‖ ಶೌರಿಶಫರ ಕಮಠ ವರಾಹ ಕ। ಖೂರ ಕಶಿಪುವಿದಾರಣನೆ ಭಾ। ಗೀರಥಿಯ ಪದನಖದಿ ಪಡೆದಂ। ಗಾರವರ್ಣನೆ ಭೃಗುಕುಲೋದ್ಭವ ‖ ವಾರಿನಿಧಿ ಬಂಧನವನೌಕಸ। ವಾರ ಪೋಷಕ ನಂದ ಗೋಪಕು। ಮಾರ ತ್ರಿಪುರಾಂತಕ–ತುರಂಗವ। ನೇರಿದ ಜಗನ್ನಾಥ ವಿಠ್ಠಲ ‖ ಸಾರಿದೆ ತವಪಾದ ಕಂಜ ಜಂ। ಭಾರಿ ಮದ ಭಂಜನನೆ ಭವ ಭಯ। ತಾರಕನೆ ನಿನ್ನವರೊಳ್ ತತ್ವವಿ। ಚಾರಕೊಡು ಚಿರಕಾಲದಲ್ಲಿ ‖ ೩

## ವೈಕುಂಠ ವರ್ಣನೆ

೮೪ ರಾಗ ಶಂಕರಾಭರಣ ಅಟತಾಳ

ಎಂಥಾದ್ದೊ। ಶ್ರೀ ವೈಕುಂಠ। ಎಂಥಾದ್ದೋ ಪ

ಎಂಥಾದ್ದೊ ವೈಕುಂಠವರಣ। ಅಲ್ಲಿ। ಕಂತುಪಿತನ ದೇಹ ಕಿರಣ। ಅದ। ರಂತರಂಗ ಹೇಮಾಭರಣ। ಕಾಂತಿ। ಗಂತು ನಾಚಿದ ರವಿ ಅರುಣ ‖ ಆಹಾ ‖ ನಂತ ಕಾಲದಲ್ಲಿ ಸಂತತ ತುತಿಪರ್ಗೆ। ಪ್ರಾಂತಕ್ಕೆ ನಾಲ್ಕು ನಿಶ್ಚಿಂತ ಮುಕ್ತಿಯ ಸ್ಥಾನ ‖ ೧

ಪಾಲಸಾಗರಮಧ್ಯೆ ಕೋಟೆ। ಒಳ। ಗೇಳು ಸುತ್ತಿನಾಗಾರ ದಾಟಿ। ತಾಳ। ಮೇಳದವರು ಮೂರು ಕೋಟಿ। ನಾಮ ಪೇಳ್ವನಾಯಕರ ಗಲಾಟೆ ‖ ಆಹಾ ‖ ಶೀಲ ಮುನಿಗಳು ಗಂಧರ್ವರು ಯಕ್ಷರು। ಮೇಲೆ ಜೀವನ್ಮುಕ್ತರುಗಳಿಪ್ಪ ಹರಿಪುರ ‖ ೨

ಹೇಮ ಪ್ರಾಕಾರದ ಪುರವು। ಅಲ್ಲಿ। ಆ ಮಹ ಬೀದಿಶೃಂಗರವು। ನೋಡೆ। ಕಾಮಧೇನು ಕಲ್ಪತರುವು। ಬಲು। ರಾಮಣೀಯಕವಾದ ಇರವು ‖ ಆಹಾ ‖ ಶ್ರೀಮೂರುತಿಯೆಂದು ವೇದಾಂತ ಶ್ರುತಸಾರೆ। ಆ ಮಹ ಮುಕ್ತರು ಸೇರಿಹ ಮಂದಿರ ‖ ೩

ಸುತ್ತಲು ಸನಕಾದಿ ಮುನಿಯು। ದಿವ್ಯ। ನರ್ತನ ಗಾಯನ ಧ್ವನಿಯು। ಪುಷ್ಪ। ವೃಷ್ಟಿ ಚಂಪಕಜಾಜಿಹನಿಯು। ಅಲ್ಲಿ। ಅಷ್ಟಮ ಸ್ತ್ರೀಯರ ಮನೆಯು ‖ ಆಹಾ ‖ ನಿತ್ಯಾವಿಯೋಗಿನಿ ಒತ್ತುತ್ತ ಪಾದ ಸಂ। ಪತ್ತಿಗೀಶನ ಸರ್ವೋತ್ತಮ ನಾಗೃಹ ‖ ೪

ಥಳಥಳಿಸುವ ದಿವ್ಯದ್ವಾರಾ | ಅಲ್ಲಿ | ಹೊಳೆವಂಥ ರಂಗಮಂದಿರ | ಮುತ್ತಿ | ನೆಳೆಗಳ ಗೊಂಚಲ ಭಾರ | ಹೇಮ ತುಳಸಿ ಸರದ ಶೃಂಗಾರ || ಆಹಾ || ಹೊಳೆವ ಮಾಣಿಕದ ಮಂಟಪದ ಮಧ್ಯದೊಳ್ಮೆರೆವ | ಚೆಲುವ ಜಗನ್ನಾಥ ವಿಠಲನ ನಿಜಸ್ಥಾನ || ೫

೮೫ ರಾಗ ತೋಡಿ ಆದಿತಾಳ

ಇಂದಿರೆ ಇಂದುವದನೆ ಸರಸಿಜಸದನೇ ನಿಂದಿತ ಜನಸೂದನೆ ಪ

ವಂದಿಸುವೆನೆ ಅರವಿಂದ ಗಂಧಿನಿ ಮನ
ಮಂದಿರದಲಿ ಗೋವಿಂದನ ತೋರಿಸೆ ಅ

ಮೂಲೋಕ ಮಾತೆ ವಿಖ್ಯಾತೆ | ಕೈವಲ್ಯದಾತೆ | ಪಾಲಗಡಲ ಸಂಭೂತೆ
ಕಾಲದೇಶದಿ ವ್ಯಾಪಿತೆ | ಭಜಕರ ಪ್ರೀತೆ | ಶೀಲೆ ಸಂಪೂರ್ಣ ಗುಣವ್ರಾತೆ
ಫಾಲನಯನ ತ್ರಿದಶಾಲಯ ಪ್ರಮುಖರ
ಪಾಲಿಸುತಿಹೆ ಮುದಜಾಲ ಜನಕೆ ರಮೆ
ಶ್ರೀಲತಾಂಗಿ ನಿನ್ನಾಳುಗಳೊಳು ಹರಿ
ಲೀಲೆಯ ಮನದಲಿ ಆಲೋಚನೆ ಕೊಡೆ ೧

ಲೋಕನಾಯಕಿ ಲಕುಮೆ | ಶ್ರೀ ಸಾರ್ವಭೌಮೆ | ಶೋಕರಹಿತ ಸುನಾಮೆ
ನಾಕಜವನಧಿ ಸೋಮೆ | ದೇವಲಲಾಮೆ | ಸಾಕಾರವಂತೆ ಗುಣಸ್ತೋಮೆ
ನೀ ಕರುಣಿಸಿ ಅವಲೋಕಿಸಿ ಎನ್ನಯ
ಕಾಕುಮತಿಯ ಕಳೆದೇಕಾಂತದಿ ನಿತ್ಯ
ಏಕಮನದಿ ಹರಿ ಶ್ರೀಕರ ಪದ ಧ್ಯಾನ
ನೀ ಕರುಣಿಸು ನಿರಾಕರಿಸದಲೆ ೨

ಜಾತರಹಿತೆ ಜಯವಂತೆ | ದೈತ್ಯಕೃತಾಂತೆ | ಶೀತಾಂಶುಕೋಟಿ ಮಿಗೆ ಶಾಂತೆ
ಪಾತಕದೂರೆ ನಿಜ ಪಂಥೆ | ನಿತ್ಯಾನಿಶ್ಚಿಂತೆ | ನೀತಾದೂರಾದಿ ಮಧ್ಯಾಂತೆ
ಭೂತನಾಥ ಪುರುಹೂತ ಮುಖಾಮರ
ವ್ರಾತವಿನುತೆ ಅತಿ ಪ್ರೀತಿಯಿಂದಲಿ ನಮ್ಮ
ವಾತಜನಕ ಜಗನ್ನಾಥ ವಿಠ್ಠಲನ
ಮಾತು ಮಾತಿಗೆ ನೆನೆವಾತುರವನು ಕೊಡೆ ೩

೮೬ ರಾಗ ಭೈರವಿ ಏಕತಾಳೆ

ರಾಮನ ನೋಡಿರೈ | ನಿಮ್ಮಯ | ಕಾಮಿತ ಪಾಡಿರೈ
ತಾಮರಸ ಸಖ ಸುವಂಶಾಬ್ಧಿ ಶರತ್ಸೋಮ ಕಮಲಧಾಮ ಪ

ಧಾತನನುಜ್ಞದಿ ದೇವತ್ವಷ್ಟ್ರ ನಿರ್ಮಿಸಿದ | ಅಜ ಪೂಜಿಸಿದ
ಜ್ಯೋತಿರ್ಮಯ ಜಾಬಾಲಿ ಮುನಿಯ ತಪವರಿದಾ । ಕಾಮಿತವೆರೆದಾ
ಭೂತಾಧಿಪ ಭುವನದೊಳಗರ್ಚನೆಗೊಂಡಾ । ಧೃತಕೋದಂಡಾ
ಮಾತಂಗಾರಿವರೂಧಿಯು ಜನಕನ ಮೇಧಾಗಾರಕೆ ಪೋದಾ ೧

ಸೌಭರಿ ಮುನಿಪಗೆ ಸೌಖ್ಯವ ಕರುಣಿಸಿ । ಕೊಟ್ಟಾ ಜಗತತಿ ಧಿಟ್ಟಾ
ನಾಭಿ ಜನ್ಮನಿಹನಗವರ ಸ್ಥಾನಕೆ ಬಂದಾ | ಶುಭ ಗುಣವೃಂದಾ
ವೈಭವದಿಂದಲಯೋಧ್ಯಾ ಪುರದಲಿ | ವಾಸಾ ಮಾಡಿದನೀಶಾ
ಸಾಭಿಮಾನದಿಂ ಸತಿಯಳಿಗಿತ್ತನು ವರವಾ, ದೇವರ ಗುರುವಾ ೨

ಜಾಂಬುವಂತನಿಗೆ ಜಾನಕಿರಮಣನು ಈತಾನಿತ್ತನ ಜಾತಾ
ಸಂಭ್ರಮದಿಂದಲಿ ವೇದಗರ್ಭನೊಡ ನಾಳ್ದಾ ಮುಕುತಿಯ ನೀಡ್ದಾ
ಕಂಭೀಶ್ವರನ ಸುಕೋಶದಿ ಬಹುದಿನ ಇದ್ದ, ಅಮಲನವದ್ಯಾ
ನಂಬಿ ತುತಿಸುತಿಹ ನರಹರಿ ಮುನಿಪಗೆ ವೊಲಿದಾ, ಮನದೊಳು ಪೊಳೆದಾ ೩

ಅಲವಬೋಧ ಮುನಿ ಅತಿ ಮೋದದಲರ್ಚಿಸಿದಾ ಸಲೆ ಮೆಚ್ಚಿಸಿದಾ
ಇಳೆಯೊಳು ಬಹು ಯತಿಗಳ ಕರ ಪೂಜಿತ ನಾದಾ, ಲೀಲಾ ವಿನೋದ
ಸಲೆ ನಂಬಿದ ಭಕುತರ ಕಲಿಮಲಗಳ ಕಳೆವಾ ಜಗಕತಿ ಚೆಲುವಾ
ಸುಲಲಿತ ಗುಣನಿಧಿ ವಸುಧೇಂದ್ರಾರ್ಯರ ಪ್ರಿಯಾ ಕವಿಜನಗೇಯಾ ೪

ವಾರಿಧಿ ಬಂಧನ ವಾನರನಾಯಕರಾಳ್ದಾ ದೈತ್ಯರ ಸೀಳ್ದಾ
ನಾರದ ಮುಖಮುನಿ ನಮಿತ ಪದಾಂಬುಜನೀತಾ–ತ್ರಿಗುಣಾತೀತಾ
ಆರಾಧಕರಿಗೆ ಅಖಿಳಾರ್ಥಗಳನು ಕೊಡುವಾ । ಅಘಗಳ ಕಡಿವಾ
ನೀರಜಾಕ್ಷ ಜಗನ್ನಾಥ ವಿಠ್ಠಲ ನಿಶ್ಚಿಂತಾ । ಸೀತಾಕಾಂತಾ ೫

ಅ೭ ರಾಗ ಸಾದನಾಮಕ್ರಿಯ ಅದಿತಾಳ

ಶ್ರೀವೇಂಕಟ ಶೈಲಾಧಿಪ ನಮೊ । ರಾಜೀವ ಭವಭವಾರಾಧ್ಯ ನಮೋ
ಭೂವರಹಾದ್ಯವತಾರ ನಮೋ ನಮೊ । ಭೂ ವೈಕುಂಠವಿಹಾರ ನಮೋ
ಕೇವಲ ನಿರ್ಗುಣ ಬೋಧಾನಂದ ಮ । ಯಾವತಾರ ತೇ ನಮೋ ನಮೋ
ಗೋವಿಂದ ಜಗಜ್ಜೀವನ ಜಿತಮದ । ದೇವಕಿನಂದನ ದೇವ ನಮೋ ೧

ಸ್ವಾಂತಧ್ವಾಂತ ನಿಕೃಂತನ ಕಮಲಾ । ಕಾಂತ ಶ್ರೀಮದನಂತ ನಮೋ
ಚಿಂತಿತಫಲದ ಮದಂತರ್ಯಾಮಿ ದು । ರಂತ ಶಕ್ತಿ ಜಯವಂತ ನಮೋ
ದಂತಿವರವರದಾಚಿಂತ್ಯ ಮಹಿಮ ಸ । ತ್ವಾಂಥ ಜನಾಪ್ತ ಮಹಾಂತ ನಮೋ
ಸಂತತಾದಿ ಮಧ್ಯಾಂತ ವಿವರ್ಜಿತಾ । ನಂತಾಸನ ಸತ್ಕೃತಾಂತ ನಮೋ ೨

ಕುಸ್ಥ ನಮೋ ಆಪಸ್ಥ ನಮೋ ತೇ । ಜಸ್ಥ ನಮೋ ವಾಯುಸ್ಥ ನಮೋ
ಖಸ್ಥ ನಮೋ ಆಶಾಸ್ಥ ನಮೋ ವ । ಧ್ವಸ್ಥ ನಮೋ ನಮೋ ಸ್ವಸ್ಥ ನಮೋ
ಮಸ್ಥ ನಮೋ ಕಮಲಸ್ಥ ನಮೋ ಕರ । ಣಸ್ಥ ನಮೋ ಕ್ರಿಯಾಸ್ಥ ನಮೋ
ಗೋಸ್ಥ ನಮೋ ಕಾಲಸ್ಥ ನಮೋ ದೇ । ವಸ್ಥ ನಮೋ ಸರ್ವಸ್ಥ ನಮೋ ೩

ಶ್ರೀಶ ನಮೋ ಬ್ರಹ್ಮೇಶ ನಮೋ ವ್ರಾ । ಣೇಶ ನಮೋ ವಾಣೀಶ ನಮೋ
ವೀಶ ನಮೋ ಫಣಿಪೇಶ ನಮೋ ರು । ದ್ರೇಶ ನಮೋ ಉಮೇಶ ನಮೋ
ವಾಸವ ಮುಖ ದೇವೇಶ ನಮೋ ದೂ । ರ್ವಾಸ ಮುನಿ ಹೃದಯವಾಸ ನಮೋ
ಭಾಸಬಿಂದು ಕ್ಷಿತಿವೇಶ ನಮೋ ಹರಿ । ವ್ಯಾಸ ಋಷಭ ಮಹಿದಾಸ ನಮೋ ೪

ಲೋಕಾಂತರ್ಗತ ಲೋಕನಿಯಾಮಕ । ಲೋಕ ವಿಲಕ್ಷಣ ಪಾಲಯಮಾಂ
ಲೋಕಾಲೋಕಾಲೋಕನ ವಿಷಯ ದ್ಯು । ಲೋಕಾಧಾರಕ ಪಾಲಯಮಾಂ
ಲೋಕಮಹಿತ ಪರಲೋಕಪ್ರದ ವರ । ಲೋಕೈಕೇಶ್ವರ ಪಾಲಯಮಾಂ
ಲೋಕಜನಕ ತ್ರೈಲೋಕ್ಯ ಬಂಧು ಕರು । ಣಾಕರ ವೇಂಕಟ ಪಾಲಾಯಮಾಂ ೫

ಮುಕ್ತಾಮುಕ್ತ ನಿಷೇವಿತಾವಯ ವಾ । ಸಕ್ತ ಜನಪ್ರಿಯ ಪಾಲಯಮಾಂ
ಉಕ್ತನಿಗಮತತಿ ಸೂಕ್ತ ಸಿತಾಸಿತ । ರಕ್ತಪೀತನಿಭ ಪಾಲಯಮಾಂ
ವ್ಯಕ್ತಾವ್ಯಕ್ತ ಸ್ವಾಂತಮಹಿಮ ಸಂ । ಯುಕ್ತ ಸದಾಹೇ ಪಾಲಯಮಾಂ
ಯುಕ್ತಾಯುಕ್ತ ನ ಜಾನೆ ರಮಾಪತೆ । ಭಕ್ತ್ಯುತ್ಕಹಂತವ ಪಾಲಯಮಾಂ ೬

ವೇದಸ್ತೇಯಖಳಾಂತಕ ಕಮಠ ಧ । ರಾಧರ ನರಹರಿ ಪಾಲಯಮಾಂ
ಸಾಧಿತ ಲೋಕತ್ರಯ ಬಲಿಮದ ಹಯ | ಮೇಧ ವಿಭಂಜನ ಪಾಲಯಮಾಂ
ಭೂಧರ ಭುವನ ನಿರೋಧಿ ಯದುಕುಲ ಮ । ಹೋದಧಿ ಚಂದ್ರಮ ಪಾಲಯಮಾಂ
ಬೋಧ ಬುದ್ಧ ತನುಶ್ರೀದ ಕಲ್ಕಿ ಕಪಿ । ಲಾದಿರೂಪ ಹೇ ಪಾಲಯಮಾಂ　೭
ಶರಣಾಗತ ರಕ್ಷಾಮಣಿ ಶಾರ್ಙ | ಅರಿದರಧರ ತವ ದಾಸೋಹಂ
ವರಪುರುಷೋತ್ತಮ ವಾಙ್ಮನೋಮಯ ಭಾ | ಸ್ಕರ ಸನ್ನಿಭ ತವ ದಾಸೋಹಂ
ಗರುಡಸ್ಕಂಧ ಕರಾರೋಪಿತ ಪದ | ಸರಸಿಜಯುಗ ತವ ದಾಸೋಹಂ
ಉರಗಾಧಿಪ ಪರ್ಯಂಕಶಯನ ಮಂ | ದರಗಿರಿಧರ ತವ ದಾಸೋಹಂ　೮
ಸೃಷ್ಟಿ ಸ್ಥಿತಿ ಲಯ ಕಾರಣರೂಪ ಪ್ರ । ಹೃಷ್ಟತುಷ್ಟ ತವ ದಾಸೋಹಂ
ಪುಷ್ಟ ಮಹಿಮ ಪರಮೇಷ್ಟಿ ಜನಕ ಶಿ | ಷ್ಟೇಷ್ಟ ಹೃಷ್ಟ ತವ ದಾಸೋಹಂ
ಜ್ಯೇಷ್ಠ ಶ್ರೇಷ್ಠ ತ್ರಿವಿಷ್ಟ ಪದಾರ್ಚಿತ | ವೃಷ್ಣಿವರ್ಯ ತವ ದಾಸೋಹಂ
ಅಷ್ಟಾಪದ ಪ್ರದ ಪಕ್ಷಿಧ್ವಜ ಜಗನ್ನಾಥ ವಿಠಲ ತವ ದಾಸೋಹಂ　೯

೮೮　ರಾಗ　ವಸಂತ　ಆದಿತಾಳ

ಆ ವೇಂಕಟಗಿರಿ ನಿಲಯನಂಘ್ರಿ ರಾ
ಜೀವಯುಗಳಿಗಾ ನಮಿಸುವೆನು
ಸೇವಿಪ ಜನರಿಗಮರ ತರುವೆನಿಸಿ ಧ
ರಾವಲಯಾಖ್ಯ ದಿವಿಯೊಳಿಸೆವ　ಪ

ಆವನಂಘ್ರಿ ಜಲ ಸಕಲ ಜಗತ್ತಿಗೆ | ಪಾವನಕರವೆಂದೆನಿಸುವುದು | ಶ್ರೀ ವಿಧಿಭವ ಶಕ್ರಾದ್ಯಮರಾವನ | ಸೇವಕಜನರೆಂದೆನಿಸುವರು || ದೇವೋತ್ತಮ ತಾನಾಗಿ ನಿಖಿಳ ಜಡ | ಜೀವ ಭಿನ್ನ ಕರ್ಮವ ಮಾಳ್ಪ | ಸ್ಥಾವರ ಜಂಗಮ ದೊಳಗೆ ನಿಂತು ವೇ | ದಾವಳಿಯಿಂದ ತುತಿಸಿಕೊಂಬ　೧

ವಾತನೊಳಹಿಪ ವಿರೋಧಿಶಾತನ ಸ | ತ್ಪಾತಿಶಯವ ತೋರೆನಲಾಗ | ಜಾತರೂಪ ಶೈಲಾತ್ಮಜನಪ್ಪಿರೆ | ವೀತಿಹೋತ್ರ ಸಖ ಕಿತ್ತೊಗೆಯೆ || ವೀತಕರ್ಣ ನಳವಳಿದು ಸ್ತುತಿಸಲು ನಿ | ಕೇತನತ್ರಯದೊಳುಳುಹಿ ಬೇಗ || ಧಾತಮಹಿಳೆ ತೀರ್ಥದಿ ಭೂಲಕ್ಷ್ಮಿ ಸ | ಮೇತನಾಗಿ ಮೋದಿಸುತಿಪ್ಪ　೨

ವೃದ್ಧ ಭೂಸುರನ ನೈದು ಸಲಿಲದೊ | ಳದ್ದಿ ಕುಮಾರತ್ವವನಿತ್ತ | ಅಧ್ವರ ವೆಸಗಿದ ಋಷಿಗಳ ಮಂತ್ರದ | ಬದ್ಧ ತಿದ್ದಿ ಮಖವನು ಗೈದ || ಮಧ್ಯ ರಾತ್ರಿಯೊಳ್ಪೆಸಗೊಂಡ ನೃಪನ ಉಪದ್ರವ ಕಳೆದಾಯುಧವಿತ್ತ | ವೃದ್ಧಾಂಡವ ರಚಿಸುವನಿ ಗೊಲಿದವನ | ಚೋದ್ಯ ತೋಂಡಮಾನಗೆ ತೋರ್ದ ೩

ಭೂಸುರನೋರ್ವನು ತೋಂಡಮಾನ ಧರ | ಣೀಶನ ನಿಲಯದಿರಿಸಿ ಸತಿಯ | ಕಾಶಿಗೆ ಪೋಗಲು ನೃಪತಿ ಮರೆಯೆ ನಿ | ಶ್ವಾಸವನೈದಿದಳಾ ಸತಿಯು || ಆ ಸಮಯದಿ ದ್ವಿಜವರ್ಯನು ಬೆಸಗೊಳೆ | ಕ್ಲೇಶದಿ ಭೂಮಿಪ ಸಂಸ್ತುತಿಸೆ | ಕೇಶವ ತಾನಸ್ಥಿಗತರಿಸಿ ಸು | ವಾಸಿನಿ ಶಿಶುಸಹ ಒಲಿದಿತ್ತ ೪

ಮನೋ ವಾಕ್ಕಾಯದಿ ಕರ್ಮಜನ್ಯಫಲ | ದಿನ ದಿನಗಳಲಿ ಸಮರ್ಪಿಸುವ | ಮನುಜೋತ್ತಮರ ಆಧಿವ್ಯಾಧಿ ದು | ರ್ಜನ್ಮಗಳೆಲ್ಲವ ಪರಿಹರಿಪ ಈ ನರರಿಗ ಲಭ್ಯನು | ಕುವಲಯದೊಳು ಕಾ | ರುಣಿಕ ಧರ್ಮ ಕರ್ಮಾರ್ಥಗಳ | ಜನರಿಗೆ ಸಲಿಸುವ ಜಗನ್ನಾಥ ವಿಠ್ಠಲ | ಮನೆಮಾಡಿ ತಾ ಶೇಷಾಚಲವ ೫

# ಭಯ ಪರಿಹಾರ ಸುಳಾದಿ

ಧ್ರುವತಾಳ

ದುರಿತವನ ಕುಠಾರಿ ದುರ್ಜನ ಕುಲವೈರಿ
ಶರಣಾಗತ ವಜ್ರಪಂಜರ ಕುಂಜರ
ವರಸಂರಕ್ಷಕ ಜನ್ಮ ಮರಣರಹಿತ ಮಹಿತ
ಪರಮ ಕರುಣಾಸಿಂಧು ಭಕ್ತಬಂಧು
ಸ್ವರತ ಸ್ವತಂತ್ರ ಜಗದ್ಭರಿತ ಚಿತ್ಸುಖಪೂರ್ಣ
ಹರಿಯೆ ಕ್ಷರಾಕ್ಷರ ಪುರುಷೋತ್ತಮ
ಉರುಗಾಯಿ ವೈಕುಂಠ ವರಮಂದಿರ ಚಂದಿರ
ತರಣಿ ಕೋಟಿ ಸಂಕಾಶ ವಿಮಲಕೇಶ
ಧುರದೊಳಗರ್ಜುನನ ತುರಗ ನಡೆಸಿದ ಸಂ
ಗರ ಭಯಂಕರ ಲೋಕೈಕ ವೀರ
ನರಸಿಂಹ ನಿನ್ನ ಪಾದಕ್ಕೆರಗಿ ಬಿನ್ನೈಸುವೆ
ಮೊರೆಹೊಕ್ಕ ದಾಸಗೆ ಬಂದ ಭಯವ ಪರಿ

ಹರಿಸಿ ಸೌಖ್ಯವ ಕರುಣಿಸು ದಯದಿಂದ
ಸರ್ವರಂತರ್ಯಾಮಿ ಲೋಕಸ್ವಾಮಿ
ಸ್ಮರಣೆಮಾತ್ರದಿ ಅಜಾಮಿಳಗೆ ಮುಕ್ತಿಯನಿತ್ತೆ
ಅರಿದೆನೊ ನೀನೆಮ್ಮ ಪೊರೆವೋದೀಗ
ಸರುವಕಾಮದ ಜಗನ್ನಾಥ ವಿಠ್ಠಲ ಭಕ್ತ
ಪರಿಪಾಲಕನೆಂಬ ಬಿರುದು ನಿನ್ನದಿದೆ ೧

ಮಠ್ಯತಾಳ

ವಿಧುಪಿತ ನೀನಲ್ಲದೆ ನಿಧಿಪತಿಗಳುಂಟೆ
ಸಧನನಾಗಿ ಇಪ್ಪೆ ನಿನ್ನ ದಾಸರಿಗಾಗಿ
ಮಧುಸೂದನ ಜಗನ್ನಾಥ ವಿಠ್ಠಲರೇಯ
ನಿಧನನೆನಿಸಿಕೊಂಬೆ ನಿನ್ನ ದ್ವೇಷಿಗಳಿಗೆ ೨

ರೂಪಕ ತಾಳ

ಮೂರುಲೋಕಸ್ವಾಮಿ ಸರ್ವಜ್ಞ ಸುಖಪೂರ್ಣ
ಪ್ರೇರಕ ಸಾಕ್ಷಿ ಕಾರಣಕಾರ್ಯ ದೋಷವಿ
ದೂರ ಸದ್ಗುಣಸಾಂದ್ರ ಸಜ್ಜನಾಂಬುಧಿ ಚಂದ್ರ
ಭಾರಕರ್ತ ಜಗಕೆ ನೀನಿರೆ ಎಮ್ಮ ಮ
ನೋರಥ ಸಲಿಸುವದೇನಸಾಧ್ಯವೊ ನಿನಗೆ
ಕ್ರೂರ ಮಾನವರ ಸಂಹಾರ ಮಾಡಿಸು ಗುರು
ಮಾರುತಿವಲ್ಲಭ ಪ್ರಾರ್ಥಿಸುವ ಭಕ್ತರಿಗೆ
ಭೂರಿಭಾಗ್ಯವನಿತ್ತು ನೀ ರಕ್ಷಿಸನುದಿನ
ಶೂರ ಜಗನ್ನಾಥ ವಿಠ್ಠಲ ನೀನಲ್ಲದಿ
ನ್ನಾರು ಭಕ್ತರ ಕಾವ ಕರುಣಿಗಳು ಜಗದಿ ೩

ಝಂಪೆತಾಳ

ಪಿತನಿಂದ ನೊಂದ ಪ್ರಹ್ಲಾದನ ಕಾಯ್ದೆ ದೇ
ವತೆಗಳಿಗೆ ಬಂದ ಭಯವ ಪರಿಹರಿಸಿದೆ ದ್ರೌ
ಪದಿಯ ಮೊರೆಯ ಕೇಳಿ–ದಿವ್ಯಾಂಬರವ ಕರುಣಿಸಿದೆ

ಕ್ಷಿತಿಜನಾಲಯದಿ ಬಳಲುವ ಬಾಲೆಯರ ದ್ವಾರಾ
ವತಿಗೆ ಕರೆದೊಯ್ದು ಒಲಿದವರ ಪೋಷಿಸಿದೆ ಮಾ
ರುತಿಯ ಕರದಿಂ ಬೃಹದ್ರಥನ ಕುವರನ ಕೊಲಿಸಿ
ಪೃಥಿವಿಪರ ಬಿಡಿಸಿ ಪಾಲಿಸಿದೆ ಕರುಣದಲಿ ಮರು
ಪೃಥನದೊಳು ಪಾಂಡವರ ಸೇವಿಸಿ ಕೀರ್ತಿಯ ಪಡೆದೆ
ಶತಮೋಹನಾಸ್ತ್ರದಿಂದಲಿ ಗರ್ಭದೊಳಗೆ ಪೀ
ಡಿತನಾದ ಶಿಶುಪರೀಕ್ಷಿತನ ಸಂತೈಸಿದೆ
ಶಿತಿಕಂಠಗೊಲಿದು ಸಾಯಕನಾಗಿ ಮುಪ್ಪುರದ
ಸತಿಯರನೊಲಿಸಿ ಕೀರುತಿಯಿತ್ತೆ ಭಕ್ತನಿಗೆ
ಮಿತಿಯುಂಟೆ ನಿನ್ನ ಕರುಣಕೆ ದೇವವರ್ಯ ಸಾಂ
ಪ್ರತ ಬೇಡಿಕೊಂಬೆ ಬಿನ್ನಪವ ಕೇಳಜಸ್ರ ಸಂ
ಸ್ತುತಿಪ ಭಕುತರ ಮನೋರಥವ ಪೂರೈಸು ಸು
ವ್ರತನಾಮ ಶ್ರೀ ಜಗನ್ನಾಥ ವಿಠಲ ಭಾಗ
ವತ ಜನಪ್ರಿಯ ನೀನೇ ಗತಿ ಎಮಗೆ ಇಹಪರದಿ ೪

ತ್ರಿಪುಟತಾಳ

ನೀ ಸಲಹಲಿನ್ನಾರು ಬಂದಡ್ಡೈಸುವರು
ಮೂಲೋಕದೊಳಹೊರಗೀ ಸಮಸ್ತ ದಿವೌ
ಕಸರು ನಿನಗೆ ಸಮರ್ಪಕವಾದ ಕಾರ್ಯ ಮ
ಹಾಸುಖದಿ ನಡೆಸುವರು ಲಕ್ಷ್ಮಿ
ದಾಸಿ ಎನಿಪಳು ನಿನ್ನರಮನೆಯಲ್ಲಿ
ದೇಶಕಾಲಾದಿಗಳು ನಿನಗಾ
ವಾಸಯೋಗ್ಯಸ್ಥಾನವೆನಿಪವು
ಈಶ ಲೋಕತ್ರಯಕೆ ಲೇಶಾ
ಯಾಸವೆಂಬುದ ಕಾಣೆನು ಕರು
ಣಾಸಮುದ್ರನೆ ಒಲಿದು ಎಮ್ಮಭಿ
ಲಾಷೆ ಪೂರೈಸಿಂದು ವೇದ

ವ್ಯಾಸ ಕೀಟಗೆ ಒಲಿದು ಮಹಾ ಸಿಂ
ಹಾಸನವೇರಿಸಿ மೆರೆದೆ ಪ
ರಾಶರಾತ್ಮಜ ನಿನ್ನ ಬಣ್ಣಿಸೆ
ನಾ ಸಮರ್ಥನೆ ಎಂದಿಗಾದರು
ನೀ ಸುಲಭನೆಂದರಿದು ನಾ ಬಿ
ನ್ನೈಸಿದೆನೊ ಈ ಪಂಯಲಿ ಸ
ರ್ವಾಸು ನಿಲಯ ಜಗನ್ನಾಥ ವಿಠ್ಠಲ
ಲೇಸು ಮಾತುಗಳ್ಯಾಕೆ ಮನ್ಮನ
ದಾಸೆ ಪೂರ್ತಿಯಮಾಡಿ ಎಮ್ಮನು
ದಾಸಿಸದೆ ದಯದಿಂದ ನೋಳ್ಪದು ೫

ಅಟತಾಳ

ನಿಗಮತತಿಗಳಿಗವೇದ್ಯವಾದ ನಿನ್ನ
ಅಗಣಿತ ಮಹಿಮೆ ಲಕುಮಿ ಬೊಮ್ಮ ಭವಾ
ದಿಗಳು ತಾವರಿಯರು ಸಾಕಲ್ಯ ಮಂದಜೀ
ವಿಗಳಿಗೆ ಗೋಚರಿಸುವುದೆ ನಿನ್ನ ರೂಪ
ಭಗವಂತ ನೀನೆ ದಯಾಳುವೆಂದರಿದು ನಾ
ಪೊಗಳಿದೆನೊ ಯಥಾಮತಿಯೊಳಗೆ ಲೇಶ
ಬಗೆಯದಿರೆನ್ನಪರಾಧಕೋಟಿಗಳನ್ನು
ಜಗತೀಪತಿ ತನ್ನ ಮಗುವಿನ ತೊದಲು ಮಾ
ತುಗಳನೆ ಕೇಳಿ ತಾ ನಗುತ ಕಾಮಿತ ಬಗೆ
ಬಗೆಯಿಂದ ಪೂರ್ತಿಸಿ ಮಿಗೆ ಹರುಷದಿಂ
ಬಿಗಿದಪ್ಪಿ ಮೋದಿಪನಲ್ಲದೆ ಶಿಶುವಿನ
ತೆಗೆದುಬಿಸುಟು ಮತ್ತೆ ಹಗೆಗೊಂಬನೇನೋ ತ್ರೈ
ಯುಗನೆ ಬಿಡದೆ ಪಾಡಿ ಪೊಗಳುವ ದಾಸಗೀ
ಬಗೆ ಬಡತನವ್ಯಾಕೊ ಸಂಸಾರದೊಳಗೆ ನಾ
ಲ್ಮೊಗನಯ್ಯ ಅರ್ಥಕಾಮಗಳೊಳಗಿಪ್ಪ ಈ

ರ್ಬಗೆ ರೂಪವೊಂದಾಗೆ ಆವುದಸಾಧ್ಯವೊ
ಗಗನಭೂಪಾತಾಳ ವ್ಯಾಪ್ತರೂಪನೆ ಕರ
ಮುಗಿವೆ ಗೋಚರಿಸೆಮ್ಮ ದೃಗುಯುಗಗಳಿಗೆಂದು
ಯುಗವರ್ತನಾ ಶ್ರೀ ಜಗನ್ನಾಥ ವಿಠ್ಠಲ ನರ
ಮೃಗನಾಗಿ ಕಂಭದಿಂದೊಗೆದು ಬಂದೊದಗಿದೆ ೭

ಏಕತಾಳ

ಶ್ರೀನಿಧಿಪತಿ ದೇಹಂಗಳಲ್ಲಿ ನೀ ಗತಿ
ನೀನಲ್ಲದೆ ಎಮಗಾರಿಹಪರದಲ್ಲಿ
ಆ ನಳಿನಭವ ಭವಾದ್ಯನಿಮಿಷರ ನಿ
ಜಾನಂದವರಿತು ಫಲಗಳ ಕೊಡುವಿ ಮ
ಹಾನುಭಾವ ಎಮ್ಮಭಿಮತ ಸಲಿಸುವ
ದೇನಚ್ಚರಿ ನಿನ್ನರಸಿ ಲಕುಮಿ ಕಡೆ
ಗಾಣಳು ಪರಮೈಶ್ವರ್ಯದ ಪ್ರಾಂತ ಚಿ
ದಾನಂದಮಯನೆ ಪ್ರಣತರ ಅಧಿಕಾ
ರಾನುಸಾರವೆ ಪ್ರಾಪ್ತನಾಗಿ ಸುಖಪ
ಯೋನಿಧಿಯೊಳು ಲೋಲ್ಯಾಡಿಸುತಿಹೆ
ದಾನಿಗಳರಸ ಮನಾದಿ ಕರಣಂಗಳ
ಮಾನಿಗಳೊಡೆಯನೆನಿಸುವ ಮುಖ್ಯ
ಪ್ರಾಣಪತಿಗೆ ನೂತನ ವಿಜ್ಞಾಪನ
ವೇನುಂಟೆನ್ನನುದಿನದಲಿ ಪಾಳ್ಪುದು
ಮಾನದ ಗುರು ಜಗನ್ನಾಥ ವಿಠ್ಠಲ ಕರು
ಣಾನಿಧೆ ಸರ್ವದ ಸುಲಭ ನೀನಲ್ಲದೆ ೭

ಜೊತೆ

ಚಟುಲ ಕಾರ್ಯಗಳ ಸಂ
ಘಟನೆ ಮಾಡಿಸುವೆ ನಿ
ಷ್ಕುಟಿಲ ಜಗನ್ನಾಥ ವಿಠ್ಠಲ ದೇವೋತ್ತಮ ೮

## ಸುಳಾದಿ

ಧ್ರುವತಾಳ

ಶುಭದ ಸುಂದರಕಾಯ ವಿಬುಧ ಸನ್ಮುನಿಗೇಯ | ಅಬುಜ ಜಾಂಡೋದರ ನಿರ್ವಿಕಾರ | ತ್ರಿಭುವನಾತ್ಮ ಭವನ ತ್ರಿಗುಣಾತೀತ ನಿತ್ಯ ದು । ರ್ಲಭ ದುರ್ವಿಭಾವ್ಯ ದೂರೀಕೃತ ದುರಿತ । ನಭಗ ವರವಾಹನ್ನ ನಳಿನ ಲೋಚನ ಚನ್ನ | ಇಭರಾಜವರದ ಇಂದಿರೆಯರಸ | ಉಭಯಸ್ಥಾನದಿ ವ್ಯಾಪ್ತ ತತ್ತದ್ದೋಷ ನಿರ್ಲಿಪ್ತ | ಸಭೆಯೊಳು ದ್ರೌಪದಿಯ ಕಾಯ್ದ ಕರುಣಿ | ನಿಬಿಡ ಕರ್ಮಪಂಕದಿ ಸಿಗಬಿದ್ದು ಬನ್ನಬಡುವ । ಅಬಲರನುದ್ಧರಿಸು ಉದಧಿಶಯನ | ಸುಭಜ ನಾಮಕ ಜಗನ್ನಾಥ ವಿಠ್ಠಲ ನಿನ | ಗಭಿವಂದಿಸುವೆ ಎನಗಭಯವಿತ್ತು ಸಲಹೊ ೧

ಮಠ್ಯ ತಾಳ

ಪ್ರತಿಪ್ರತಿಕಲ್ಪಸ್ಥ ಪ್ರತಿಪ್ರತಿ ಜೀವರಿಗೆ | ಪ್ರತಿಪ್ರತಿಯುಗಗಳಲ್ಲಿ ಪ್ರತಿಪ್ರತಿ ದೇಹಕ್ಕೆ | ಕೃತ ಕರ್ಮಗಳರಿತು ಗತಿ ತಪ್ಪಲಿಗೊಡದೆ | ಪಿತ ಜನನಿ ಭ್ರಾತ ಸತಿ ಸುತ ಮುಂತಾದ | ಇತರ ಜನರೊಳಿದ್ದು ಒಬ್ಬರೊಬ್ಬರಿಗೆ । ಹಿತವನೆ ಪುಟ್ಟಿಸಿ ಪೋಷ್ಯ ಪೋಷಕನೆನಿಸಿ । ವ್ರತತಿ ಜಾಂಡವ ಪೊರೆವೆ ನಿರ್ವ್ಯಾಜದಿ ನಿರುತ | ಪತಿತ ಪಾವನ ಜಗನ್ನಾಥ ವಿಠ್ಠಲ ನಿನ್ನ । ದ್ಭುತ ಮಹಿಮೆಯ ತಿಳಿಯೆ ಶತಮೋದಗೆ ವಶವೆ ೨

ತ್ರಿಪುಟತಾಳ

ಕಂಥಾಪಟಂಗಳಿಗೆ ತಂತು ಜೋಡಿಸಿದಂತೆ | ಪಿಂತೆಮಾಡಿದ ಕರ್ಮ ತಂತುಗಳಿಂದಲಿ । ಅಂತವಿಲ್ಲದ ಜೀವ ತಿಂಥಿಣಿಗಳ ಕಟ್ಟಿ | ಸಂತೆ ನೆರಹಿ ಜನರ ಅಂತರಂಗದಿ ನೆಲೆಸಿ | ಕಾಂತೇರೊಡನೆ ರಮಿಸಿ ಸಂತೋಷಗಳ ನೀವೆ | ಸಂತರಿಗೆ ಸರ್ವಕಾಲದಲ್ಲಿ ನೀನು | ಎಂತೆಂತು ಸೇವಿಪ ಜಂತುಗಳಿಗೆ ಗತಿ | ಪ್ರಾಂತಕ್ಕೆ ಕೊಡುತಿಪ್ಪೆ ಶ್ರೀಕಾಂತ ನೀನೆ | ಇಂಥಾ ವ್ಯಾಪಾರವ ನೀ ಮಾಡುತಿರಲಾಗಿ | ಚಿಂತೆ ಬಡುವದ್ಯಾಕೋ ಜೀವರಿಗೆ | ಹೊಂತಕಾರಿ ಜಗನ್ನಾಥ ವಿಠ್ಠಲನ ಬೊಮ್ಮ | ಕಂತುಹರಾದ್ಯರ ಸ್ವಾಂತಕೆ ನಿಲುಕೆ ೩

ಅಟತಾಳ

ಆರಿಗೆ ಚಿಂತಿಸಲಾರಿಗೋಸುಗ ಪೋಗಿ । ಆರಿಗಾಲ್ಪರಿಯಲಿ ಆರೆನ್ನ ಸಲಹುವ | ರಾರೀವರೆನಗೆ ನಾನಾರೋ ಜೀವರಿಗೆ ಸ | ರೋರುಹ ಭವನ

ಸುಚಾರು ಸೃಷ್ಟಿಯೊಳು । ದಾರುಕ ನಾನೋರ್ವ ಭಾರಕರ್ತ ನೀನು । ಈರೇಳು ಲೋಕದಿ ವ್ಯಾಪಾರಮಾಡುವ ಸರ್ವಾ । ಧಾರ ನೀನಿರೆ ಬಡಿವಾರವ್ಯಾಕೆನಗೆ ರ । ಮಾರಮಣನೆ ಜಗನ್ನಾಥ ವಿಠ್ಠಲ ಹರಿ । ವಾರ ನಿನ್ನದು ಕಾಯೊ ಕಾರುಣ್ಯ ನಿಧಿ ಬೇಗ ೪

ಏಕತಾಳ

ಏಸೇಸು ಕಲ್ಪದಲ್ಲಿ ಶ್ರೀಸತ್ಯಾದಿ ಜಗತ್ತು । ಈಶಾವಾಸ್ಯವೆಂದು ಭೂಸುರೋತ್ತಮರು ಪೇಳ್ವ । ರೈಸೆ ಅನ್ಯಥಾವುಂಟೆ ವಾಸುದೇವನೆ ಜೀವ । ರಾಶಿಗಳಿಗೆ ಪುಣ್ಯ ದೋಷಫಲಗಳುಣಿಸ । ಲೋಸುಗ ಸ್ಥೂಲದೇಹನೀ ಸಮ್ಮಂಧಿಸಿ ಹೃದಯಾ । ಕಾಶದೊಳು ನೀನಿದ್ದು ಕ್ಲೇಶಸುಖಗಳನೀವೆ । ನೀ ಸ್ವತಂತುರನಾಗಿ ಅಜಭವಸುರಾದಿಗಳಾ । ಯಾಸವಿಲ್ಲದೆ ಪೊರೆವೆ ಶಾಶ್ವತ ಮೂರುತಿ । ವಾಸವಾನುಜ ಜಗನ್ನಾಥ ವಿಠ್ಠಲ ನಿನ್ನ । ದಾಸನ್ನ ಅಪರಾಧ ಲೇಶನೋಡದೆ ಕಾಯೊ ೫

ಜೊತೆ

ಅನಂತಜೀವರು ನಿನ್ನಾಧೀನರು ಶ್ರೀ ಜಗ । ನ್ನಾಥ ವಿಠ್ಠಲ ಪ್ರಸನ್ನ ವತ್ಸಲ ನೀನು

## ತಂತ್ರಸಾರ

ಪದ — ಝಂಪೆತಾಳ

ಪಾಹಿ ಪಂಕೇರುಹೇಕ್ಷಣ ಸರ್ವಕಾಮದ
ಪಾಹಿ ಪದ್ಮಾಲಯ ನಿಕೇತನ ಸದಾ ॥ ಪಾಹಿಪಾಹಿ ಪ

ಜಯತು ಚತುರಾನನ ಭವೇಂದ್ರಾದಿ ಬುಧವಿನುತ
ಜಯತು ಚತುರಾನನ ರಮಾವಲ್ಲಭ
ಜಯತು ಸಂಪೂರ್ಣ ಚಿತ್ಸುಖಮಯ ಸುಗುಣನಿಲಯ
ಜಯತು ಜನ್ಮಾದಿಕಾರಣ ದೋಷಹಾ ೧

ಕಮಲಾಕ್ಷ ಪರಮ ಸಂಭ್ರಮದಿಂದ ಲಕ್ಷ್ಮಿಕರ
ಕಮಲದಿಂ ಸೇವೆಗೊಳುತಿರಲು ಆಗ
ಅಮರನಿವಹಾರಾಧ್ಯ ಕಮಲಾಸನನು ಬಂದು
ನಮಿಸಿ ಬಿನ್ನೈಸಿದನು ತನ್ನ ಪಿತಗೆ ೨

ಆವ ದೇವೋತ್ತಮನು ಆವಾವ ಗುಣಗಳಿಹ
ವಾವಾವಶಬ್ದ ವಾಚ್ಯಾವರೀತಿ
ಈ ವಿಚಾರವನು ಪೇಳೆನಲು ನಗುತ ರಾ
ಜೀವಸಂಭವಗೆ ಇಂತೆಂದು ನುಡಿದ ೩

ವನಜಸಂಭವ ಕೇಳು ನಾನೆ ಸರ್ವೋತ್ತಮನು
ಎನಗನಂತಾನಂತ ಮಂಗಳಗುಣ
ಪ್ರಣವ ವಾಚ್ಯನು ನಾನು ಅಷ್ಟವರ್ಣೋಪೇತ
ಪ್ರಣವದ ವಿಚಾರವನು ಪೇಳ್ವೆ ನಿನಗೆ ೪

ಸಾದರದಿ ಕೇಳು **ಅ**ಕಾರ **ಉ**ಕಾರ **ಮ**ಕಾರ
ನಾದಬಿಂದು ಘೋಷಶಾಂತತಿಶಾಂತರು
ಈ ದಿವ್ಯವರ್ಣದಲಿ ವಿಶ್ವತೈಜಸ ಪ್ರಾಜ್ಞ
ಮೋದಮಯ ತುರ್ಯಾತ್ಮ ಅಂತರಾತ್ಮ ೫

ಪರಮಾತ್ಮ ಜ್ಞಾನಾತ್ಮನೆಂಬಷ್ಟರೂಪದಿಂ
ದಿರುತಿಹೆನು ವೇದಾದಿಯಲಿ ಸರ್ವದಾ
ಪರಮಋುಷಿಗಳು ಈ ಮಹಾಮಂತ್ರ ಜಪಮಾಡಿ ಮು
ತ್ಪುರವನೈದುವರು ಸತ್ವರದಿಂದಲಿ ೬

ವಾರಿರುಹ ಸಂಭವನೆ ಕೇಳಕಾರದಲಿ ಹದಿ
ನಾರು ಅಚ್ಚುಗಳು ಜನಿಸಿದವು ಕ್ರಮದಿ
ಚಾರು ಅಜ ಆನಂದ ಇಂದ್ರೇಶ ಮೊದಲಾದ
ಈರೆಂಟು ಮೂರ್ತಿಗಳು ವಿಶ್ವಜನಿತ ೭

**ಉ, ಮ, ನಾದ, ಬಿಂದು,** ಘೋಷಗಳಿಂದ **ಕಚಟತಪ**
ವಿಮಲವರ್ಗಗಳು ಪುಟ್ಟಿದವು ಐದು
ಕಮಲಭವ ಕೇಳು ತೈಜಸಪ್ರಾಜ್ಞತುರ್ಯ ಆ
ತುಮ ಅಂತರಾತ್ಮ ಮೂರ್ತಿಗಳಿಂದಲಿ ೮

ಪಂಚವಿಂಶತಿರೂಪ ಅಭಿವ್ಯಕ್ತವಾದವು ವಿ
ರಿಂಚಿ ಕೇಳ್ ಶಾಂತಿಯಿಂ ಯೆರಲವಗಳು
ಸಂಚಿಂತಿಸತಿ ಶಾಂತದಿಂದ ಶಷಸಹಳ ಕೇಳ್
ಪಂಚಾಕ್ಷರಂಗಳು ಜನಿಸಿದಾವು ೯

ಪರಮಾತ್ಮ ಜ್ಞಾನಾತ್ಮ ರೂಪದಿಂ ಒಂಭತ್ತು
ನಿರುಪಮ ಮೂರ್ತಿಗಳು ಶೋಭಿಸಿದವು
ಪರಮೇಷ್ಠಿ ನಾರಾಯಣಾಷ್ಟಾಕ್ಷರ ಮಂತ್ರ
ಒರೆದೆ ನಿನಗಾನು ಸಾಂಗೋಪಾಂಗದಿ ೧೦

ತಾರಗತ ಅಷ್ಟವರ್ಣಂಗಳಿಂ ಓಂ ನಮೋ
**ನಾರಾಯಣಾಯ** ಎಂಬೀ ಮಂತ್ರವು
ಚಾರು ಅಷ್ಟಾರ್ಣ ತದ್ವಾಚ್ಯ ಮೂರ್ತಿಗಳೆಂಟು
ಸಾರ ವಿಶ್ವಾದಿ ಪ್ರಣವಸ್ಥ ಭಿನ್ನ ೧೧

**ಓಂ ಭೂಃ ಓಂ ಭುವಃ ಓಂ ಸ್ವಃ ಓಂ ಮಹಃ**
**ಓಂ ಭೂರ್ಭುವಸ್ಸುವಃ** ಈ ವ್ಯಾಹೃತೀ
ಅಂಬುಜೋದ್ಭವ ಪ್ರಣವದಾದಿ ನಾಲ್ವರ್ಣದಿಂ
ಸಂಭವಿಸಿತೀ ಮಂತ್ರ ಸುಲಭದಿಂದ ೧೨

ತನಯ ಕೇಳೀ ಮಂತ್ರಗತ ನಾಲ್ಕು ರೂಪಗಳು
ಅನಿರುದ್ಧ ಪ್ರದ್ಯುಮ್ನ ಸಂಕರುಷಣ
ಅನಘ ಶ್ರೀ ವಾಸುದೇವನ ಮೂರ್ತಿ ಚಿಂ
ತನೆಮಾಡು ಈ ವ್ಯಾಹೃತಿಯಲಿ ಬಿಡದೆ ೧೩

ನಿಗಮಾದಿ ಮೊದಲು ನಾಲ್ವರ್ಣದಿಂ **ಓಂ ನಮೋ**
**ಭಗವತೇ ವಾಸುದೇವಾಯ** ಎಂಬ
ಯುಗಳಾಕ್ಷರಾತ್ಮಕ ಮಂತ್ರ ಪ್ರತಿಪಾದ್ಯ
ಭಗವದ್ರೂಪಗಳ ಪೇಳುವೆನು ನಿನಗೆ ೧೪

ಕೇಶವ ನಾರಾಯಣ ಮಾಧವ ಗೋವಿಂದ
ಕ್ಲೇಶನಾಶನ ವಿಷ್ಣು ಮಧುಸೂದನ
ಶ್ರೀಶ ಶ್ರೀತ್ರಿವಿಕ್ರಮನು ವಾಮನ ಶ್ರೀಹೃಷೀ
ಕೇಶಾಂಬುರುಹನಾಭ ದಾಮೋದರ ೧೫

ತೃತಿಯ ಆವರ್ತ್ಯ ಅಷ್ಟಾರ್ಣದಿಂ ನೂರು ವ್ಯಾ
ಹೃತಿಯಿಂದ ದ್ವಿಷಡಕ್ಷರೆರಡರಿಂದ
ಚಾತುರಾಸ್ಯ ಕೇಳು ಗಾಯಿತ್ರಿ ಉತ್ಪನ್ನವಾ
ಯಿತು ಕೇಶವಾದಿ ಕೃಷ್ಣಾಂತರೂಪ ೧೬

ವಿತತವಾದವು ಪುರುಷಸೂಕ್ತ ಗಾಯಿತ್ರಿಯಿಂ
ದತುಳ ಈ ಪುರುಷಸೂಕ್ತದಲಿ ವೇದ
ತತಿಗಳುದಿಸಿದವು ನಿಗಮ ಬ್ರಹ್ಮಸೂತ್ರ ಭಾ
ರತ ಪಂಚರಾತ್ರ್ಯಾದಿ ಆಗಮಗಳು ೧೭

ಶತಕೋಟಿ ಮೂಲರಾಮಾಯಣ ಪುರಾಣಗಳು
ಸ್ಮೃತಿಸಮೂಹಗಳು ಪುರಾಣಂಗಳು
ಇತರ ವೈದಿಕ ಸುಶಬ್ದಗಳು ಜನಿಸಿದವು ಸಂ
ತತವಾಚ್ಯ ನಾನು ಸಂದೇಹವಿಲ್ಲ ೧೮

ಉದಯಿಸುವ ರವಿಯುವೋಲ್ಕಾಂತಿ ಜ್ಞಾನಾನಂದ
ಮೊದಲಾದ ದಿವ್ಯಗುಣಮಯ ಶರೀರ
ಸುದರುಶನದರ ಗದಾಂಬುಜಗಳಾಯುಧವೆನಗೆ
ತ್ರಿದಶಗಣಮೇಯ ಸರ್ವೇಶ ನಾನು ೧೯

ಇದ್ದೆಸೆಯಲೆನ್ನ ಸೇವಿಪರು ಶ್ರೀಭೂದೇವಿ
ಕೃದ್ಧೋಲ್ಕ ವಿಶ್ವಕೇಶವ ಮತ್ಸ್ಯಕಾದಿ
ಮದ್ರೂಪಗಳ ಮಧ್ಯಗನು ನಾನು ಬ್ರಹ್ಮಫಣಿ
ಪಾದ್ಯರತಿಭಕ್ತಿ ಸೇವ್ಯನು ಸಮರ್ಥ ೨೦

ಅರಿದರವರ ಭಯಾಂಕಿತ ಚತುರ್ಭುಜನ ನಾ
ಲ್ಕೆರಡು ರೂಪಂಗಳು ಪ್ರದೀಪವರ್ಣ
ಸರುವಾಭರಣ ವಿಭೂಷಿತವಾದ ಮದ್ರೂಪ
ನಿರುತಮೇಯವು ಮುಮುಕ್ಷುಗಳಿಂದಲಿ ೨೧

ತಾರ ನಾರಾಯಣಾಷ್ಟಾಕ್ಷರವು ವ್ಯಾಹೃತಿಯು
ಈರಾರುವರ್ಣ ಗಾಯಿತ್ರಿ ಮಂತ್ರ
ಸಾರಮಾತೃಕ ಪುರುಷಸೂಕ್ತ ವೈಷ್ಣವಗಳಿವು
ನೀರಜಾಸನ ಕೇಳು ಮಹಮಂತ್ರವು ೨೨

ಸೀತಾರಮಣ ಮೂಲರಾಮನತಿ ಹರುಷದಲಿ
ಧಾತಗುಪದೇಶಿಸಿದನೀ ತೆರದಲಿ
ಪ್ರೀತಿಯಿಂದಲಿ ದ್ವಾದಶಾವರ್ತಿ ಪಠಿಸೆ ಶೀ
ಘ್ರಾತಪತ್ರನು ಕಾಮಿತಾರ್ಥವೀವ ೨೩

ಕರುಣಾಬ್ಧಿ ವಸುಧೇಂದ್ರರಾಯರ ಕೃಪಾಬಲದಿ
ವಿರಚಿಸಿದೆನೀ ಗ್ರಂಥಪದರೂಪದಿ
ಅರಸಿಕರು ನಿಂದಿಸಲು ಕುಂದಾವುದಿದಕೆ ಭಾ
ಸ್ಕರನುದಯ ಘೂಕ ದೂಷಿಸುವ ತೆರದಿ ೨೪

ಧರ್ಮಾರ್ಥಕಾಮಮೋಕ್ಷಗಳೀವ ಗ್ರಂಥವಿದು
ನಿರ್ಮಾಣಮಾಡಿಸಿದ ರಾಮಚಂದ್ರ
ಭರ್ಮಗರ್ಭಗೆ ಒಲಿದು ಪೇಳಿದ ಮಹಾಮಂತ್ರ
ಮರ್ಮಗಳನರಿತು ಜಪಿಸುವನು ಧನ್ಯ ೨೫

ಮಂಗಳ ರಮಾಪತಿಗೆ ಮಂಗಳ ದ್ರುಹಿಣಪತಿಗೆ
ಮಂಗಳ ದಶಪ್ರಮತಿ ಮುನಿಮಾನ್ಯಗೆ
ಮಂಗಳ ಶಿವೇಂದ್ರಾದಿ ಸುರನಿಕರ ಪೂಜ್ಯನಿಗೆ
ಮಂಗಳ ಜಗನ್ನಾಥವಿಠಲಯ್ಯಗೆ ೨೬

ಇಪ್ಪತ್ತರೇಳೆನಿಪ ಪದಗಳೆಂಬತಿ ವಿಮಲ
ಪುಷ್ಪಮಾಲಿಕೆ ಮೂಲರಾಮನಡಿಗೆ
ಅರ್ಪಿಸಿದನೀ ಸುಮನದಾಮವನು ದಿನವಲ್ಲಿ
ಒಪ್ಪದಿಹಡೇ ಬುಧರ ಮಸ್ತಕದಲಿ ೨೭

## ತತ್ವಸುವಾಲಿಯು ಕೆಲ ಪದಗಳು

ಎನ್ನಪ್ಪ ಎನ್ನಣ್ಣ ಎನ್ನಯ್ಯ ಎನ್ನರಸ
ಎನ್ನ ಕುಲದೈವ ಸುಖದೋರೊ । ಸುಖದೋರೋ ಇಹಪರದಿ
ಎನ್ನ ಬಿಟ್ಟಗಲದಿರು ಕಂಡ್ಯ
ಆವ ಯೋನಿಯೊಳಿರಿಸು ಆವಲೋಕದೊಳಿರಿಸು
ಆವಾಗ ನಿನ್ನ ನೆನೆವಂತೆ । ನೆನೆವಂತೆ ಕರುಣಿಸೊ
ದೇವಕಿ ಕಂದ ದಯದಿಂದ
ಒಪ್ಪಿಡಿಯವಲಕ್ಕಿಗೊಪ್ಪಿಕೊಂಡು ಮುಕುಂದ
ಮಿತ್ರನಿಗೆ ಕೊಟ್ಟ ಸೌಭಾಗ್ಯ । ಸೌಭಾಗ್ಯ ಕೊಟ್ಟ ನ
ಮ್ಮಪ್ಪಗಿಂತಧಿಕ ಧೊರೆಯುಂಟೆ
ಕನಸಿಲಾದರು ವಿಷಯ ನೆನೆಯದಲೆ ಎನ್ನ
ಮನದಲ್ಲಿ ನೀನೆ ನೆಲೆಗೊಳ್ಳು । ನೆಲೆಗೊಳ್ಳೊ ಲೋಕ ಪಾ
ವನ ಚರಿತ ಪಾರ್ಥಸಖ ಶ್ರೀಕೃಷ್ಣ
ಪತಿತ ನಾನಾದರೂ ಪತಿತಪಾವನ ನೀನು
ರತಿನಾಥ ಜನಕ ನಗಪಾಣಿ । ನಗಪಾಣಿ ನೀನಿರಲು
ಇತರ ಚಿಂತ್ಯಾಕೋ ಎನಗಿನ್ನು
ನಡೆನುಡಿಗಳಪರಾಧ ಒಡೆಯ ನೀನೆಣಿಸಿದರೆ
ಬಡವ ನಾನೆಂತು ಬದುಕಾಲೊ । ಬದುಕಾಲೊ ಕರುಣಾಳು
ಕಡೆ ಬೀಳ್ವುದೆಂತೋ ಭವದಿಂದ
ಏಸೇಸು ಕಲ್ಪದಲಿ ದಾಸನಾ ನಿನಗಯ್ಯ
ಈಶ ನೀನೆಂಬ ನುಡಿಸಿದ್ಧ । ನುಡಿಸಿದ್ಧವಾಗಿರಲು
ದಾಶೀನ ಮಾಡಲುಚಿತವಲ್ಲ

ಶಿಷ್ಟನೆಂದೆನಿಸೆನ್ನ ಭ್ರಷ್ಟನೆಂದೆನಿಸು ಸ
ರ್ವೇಷ್ಟ ಮೂರುತಿಯೆ ಜನರಿಂದ | ಜನರಿಂದ ನುಡಿಸಿದ್ದು
ಇಷ್ಟವೆ ಕಾಣೊ ಎನಗಿನ್ನು
ಶರಣಪಾಲಕನೆಂಬ ಬಿರುದಿದ್ದ ಕಾರಣ
ಪೊರೆಯದಿರೆ ಎನ್ನ ನಗರೇನೊ । ನಗರೇನೊ ಮೂಲೋಕ
ದರಸಾ ನಾ ನಿನ್ನ ಬಿಡೆ ಕಂಡ್ಯ
ಪಾಪಪುಣ್ಯಗಳು ಬರಲಾಪವೇ ನಿನ್ನುಳಿದು
ಪ್ರಾಪಕನು ನೀನು ಇರಲಾಗಿ | ಇರಲಾಗಿ ತಿಳಿಯದುಪೆ
ಪಾಪ ತಿಳಿಯುವುದೇ ಮಹಾ ಪುಣ್ಯ
ವಿಧಿನಿಷೇಧಗಳೆಂಬುದಧಮಾಧಿಕಾರಿಗ
ಲ್ಲದೆ ನಿನ್ನ ನಾಮ ಸರ್ವತ್ರ | ಸರ್ವತ್ರ ಚಿಂತಿಸುವ
ಬುಧರಿಗಿನ್ನುಂಟೆ ಜಗದೊಳು
ಜಲದೊಳು ಮಿಂದು ನಿರ್ಮಲರಾದೆವೆಂದು ತ
ಮ್ಮೊಳು ತಾವೇ ಹಿಗ್ಗೀ ಸುಖಿಸುವರು | ಸುಖಿಸುವರು ಪರಮ ಮಂ
ಗಳ ಮೂರ್ತಿ ನಿನ್ನ ನೆನೆಯಾದೆ
ಜಡ ಭೂತ ಜಲ ಜನರ ಮಡಿ ಮಾಡಲಾಯಿತೇ
ಜಡಧಿ ಮಂದಿರನ ಶುಭನಾಮ | ಶುಭನಾಮ ಮೈಲಿಗೆಯ
ಕೆಡಿಸಿ ಮಂಗಳವ ಕೊಡದೇನೊ
ಓಡಿಹೋಗುವ ಮಡಿಯ ಮಾಡಿ ದಣಿಯಲಿ ಬೇಡ
ನೋಡು ಸರ್ವತ್ರ ಹರಿರೂಪ । ಹರಿರೂಪ ನೋಡಿ ಕೊಂ
ಡಾಡು ಮನವುಬ್ಬೀ ಸುಖಿಸುತ್ತ
ಮನವೆ ಆಲೋಚಿಸಿಕೊ ನಿನಗಿದ್ದ ಚಿಂತೆ | ನ
ಮ್ಮನಿರುದ್ಧನಿಗಿಲ್ಲೀ ಅನುಗಾಲ | ಅನುಗಾಲ ಸಲಹುವ
ಬಿನುಗು ಮಾನವರಾ ಬಿಡುವೋನೆ
ಭಂಡ ಮನವೇ ಕೇಳು ಕಂಡಕಂಡವರಿಗಿ
ನ್ನಂಡಲದರೇನೋ ಪುರುಷಾರ್ಥ | ಪುರುಷಾರ್ಥ ಸ್ವಾಮಿಪದ
ಪುಂಡರೀಕವನೇ ನೆರೆನಂಬು

ಅಶನ ವಸನಗಳೀವ ವಸುದೇವಸುತನಿರಲು
ಹುಸಿಯಾಗಿ ಬದುಕೋ ನರರೀಗೆ । ನರರಿಗಾಲ್ಪರಿದರೆ
ಹಸಿವೆಯಡಗುವುದೇ ಎಲೆ ಜೀವಿ
ಹಿಂದೆ ಜನ್ಮಾಂತರದಿ ತಂದುಕೊಟ್ಟವರಾರು
ಇಂದು ಮುಂದೀವ ಧೊರೆಯಾರು । ಧೊರೆಯಾಗು ಎಲೆಮನವೆ
ಮಂದಮತಿಯಾಗಿ ಕೆಡಬೇಡ
ಭೂಮಂಡಲವೆ ಪೀಠ ವ್ಯೋಮಮಂಡಲವೆ ಛತ್ರ
ಸೋಮಸೂರ್ಯರೆ ಮಹದೀಪ । ಮಹದೀಪ ನಕ್ಷತ್ರ
ಸ್ತೋಮಗಳೆ ನಿನಗೆ ಮಹದೀಪ
ಮಳೆಯೆ ಮಜ್ಜನವು ದಿಗ್ವಲಯಗಳು ವಸನಗಳು
ಬೆಳೆವ ಬೆಳಸುಗಳೇ ನೈವೇದ್ಯ । ನೈವೇದ್ಯ ಜನರ ಕಂ
ಗಳ ಕಾಂತಿ ನಿನಗೆ ಆರಾರ್ತಿ
ಭೂರುಹವ ಚಾಮರವ ಮಾಡುವೆನು ಶರಧಿಯು
ಘೋರಗರ್ಜನೆಯೇ ಮಹವಾದ್ಯ । ಮಹವಾದ್ಯ ಜೀವರ
ಸಾರ ಸುಸ್ವರವೇ ಸಂಗೀತ
ಪಾತಾಳ ಪಾದುಕ ವಿಧಾತಲೋಕವೆ ಮಕುಟ
ಶ್ವೇತದ್ವೀಪಗಳೇ ಒಡ್ಯಾಣ । ಒಡ್ಯಾಣ ವೈಕುಂಠ
ಆತಪತ್ರಗಳೇ ನಿನಗೀವೆ
ನಡೆವುದೇ ಹರಿಯಾತ್ರೆ ನುಡಿವುದೇ ಹರಿನಾಮ
ಕುಡಿವ ನೀರುಗಳೇ ಅಭಿಷೇಕ । ಅಭಿಷೇಕ ದಿನದಿನದಿ
ಒಡಲಿಗುಂಬುವುದೇ ನೈವೇದ್ಯ
ನರಕ ಸ್ವರ್ಗಗಳೆಂಬವೆರಡು ಇಲ್ಲಿಹವು ವಿ
ಸ್ಮರಣೇಯೇ ನರಕ ಸ್ಮೃತಿ ಸ್ವರ್ಗ । ಸ್ಮೃತಿಸ್ವರ್ಗವಿರುತಿರೆ ಬಾಹ್ಯ
ನರಕ ಭಯಕಂಜೇ ಎಂದೆಂದೂ
ಅಪರಾಧಿ ನಾನೆಂಬುದುಪಚಾರ ಮಾತ್ರ ನಿನ
ಗಪರಾಧಿ ಎಂಬೋದಿಳೆಯೋಳು । ಇಳೆಯೋಳು ಇನ್ನುಂಟೆ
ಅಪರಾಧಿ ಎಂಬೋದಪರಾಧ

ತತ್ತತ್ಪದಾರ್ಥದೊಳು ತತ್ತದಾಕಾರ ನಾ
ನೆತ್ತ ನೋಡಿದರೂ ಇರುತಿಪ್ಪ । ಇರುತಿಪ್ಪ ಶ್ರೀಹರಿಗೆ
ಭೃತ್ಯನೆಂಬುವುದೇ ಬಲು ಧರ್ಮ

## ಉಗಾಭೋಗಗಳು

ಅನಘಾನೆಂದೊಮ್ಮೆ ನೆನೆದ ಮಾನವ ಪಾಪ । ವನಧಿ ದಾಟುವ ಬಹು ವೇಗದಿಂದ । ಜನನ ಮರಣಭಯವಿನಿತಿಲ್ಲಾ ಅವನೆ ಸ । ಜ್ಜನ ಶಿರೋಮಣಿ ಕಾಣೊ ಸರ್ವರೊಳು । ಜನಕ ಜನನಿ ಮೊದಲಾದ ನೂರೊಂದು ಕುಲವ ಪಾ । ವನ ಮಾಡುವನು ಪ್ರತಿದಿನಗಳಲಿ । ವನಿತಾದಿ ವಿಷಯಗಳನನುಭವಿಸುತ ತನ್ನ । ಮನೆಯೊಳಿರಲವ ಜೀವನ ಮುಕ್ತನೋ । ಸನಕಾದಿ ಮುನಿಗಳ ಮನಕ ನಿಲುಕ ದಿಪ್ಪ । ಘನಮಹಿಮನೆ ಬಂದು ಕುಣಿವ ಮುಂದೆ । ಹನುಮ ವಂದಿತ ಜಗನ್ನಾಥ ವಿಠಲರೇಯ । ಅನಿಮಿತ್ತ ಬಂಧು ನೀನು ಆವಾವ ಕಾಲದಲ್ಲಿ ॥

ಆರು ವಂದಿಸಲೇನು ಆರು ನಿಂದಿಸಲೇನು । ಆರು ಶಾಪಿಸಲೇನು ಆರು ಕೋಪಿಸಲೇನು । ಆರು ಮುನಿದು ಮಾತನಾಡದಿದ್ದರೆ ಏನು । ಮಾರುತಾಂತ ರ್ಯಾಮಿ ಜಗನ್ನಾಥ ವಿಠಲನ । ಕಾರುಣ್ಯಪಾತ್ರರ ಕರುಣವೆನ್ನೊಳಗಿರೆ । ಆರು ವಂದಿಸಲೇನು, ಆರು ನಿಂದಿಸಲೇನು ॥

॥ ಶ್ರೀ ಕೃಷ್ಣಾರ್ಪಣಮಸ್ತು ॥



ಬೆಂಗಳೂರು ಸುಬೋಧ ಮುದ್ರಣಾಲಯದಲ್ಲಿ ಎಂ ಆರ್ ಪ್ರಹ್ಲಾದರಾವ್ ಅವರಿಂದ ಮುದ್ರಿಸಲ್ಪಟ್ಟಿತು.